# ಬೀದರ ಜಿಲ್ಲೆಯ ಚಿತ್ರಕಲೆ

[ಎಂ.ಫಿಲ್ ಪದವಿಯ ಭಾಗಶಃ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಕಿರು ಪ್ರಬಂಧ]

ಸಂಶೋಧಕರು
ವೈಶಾಲಿಬಾಯಿ. ಬಿ. ಕಾಂಬಳೆ



ಮಾರ್ಗದರ್ಶಕರು
ಡಾ. ಎಸ್. ಸಿ. ಪಾಟೀಲ್
ಮುಖ್ಯಸ್ಥರು ಮತ್ತು ಪ್ರಾಧ್ಯಾಪಕರು



ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬
೨೦೧೨

1000

# ಬೀದರ ಜಿಲ್ಲೆಯ ಚಿತ್ರಕಲೆ

ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿರುವ ಕಿರು ಸಂಶೋಧನಾ ಪ್ರಬಂಧ

ಸಂಶೋಧಕರು

**ವೈಶಾಲಿಬಾಯಿ ಕಾಂಬಳೆ**

ಮಾರ್ಗದರ್ಶಕರು

**ಪ್ರೊ.ಎಸ್.ಸಿ.ಪಾಟೀಲ**

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ದೃಶ್ಯಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ದೃಶ್ಯಕಲಾ ವಿಭಾಗ

ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೧ - ೨೦೧೨

# ಪ್ರಮಾಣ ಪತ್ರ

ಬೀದರ ಜಿಲ್ಲೆಯ ಚಿತ್ರಕಲೆ ಎಂಬ ಶೀರ್ಷಿಕೆಯ ಕಿರು ಸಂಶೋಧನಾ ಪ್ರಬಂಧವನ್ನು ಪ್ರಾಧ್ಯಾಪಕರಾದ ಡಾ.ಎಸ್.ಸಿ.ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ವೈಶಾಲಿಬಾಯಿ ಕಾಂಬಳೆ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ :

# ದೃಢೀಕರಣ ಪತ್ರ

ವೈಶಾಲಿಬಾಯಿ ಕಾಂಬಳೆ ಇವರು ಬರೆದು ಸಾದರಪಡಿಸಿದ ಬೀದರ ಜಿಲ್ಲೆಯ ಚಿತ್ರಕಲೆ ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಕಿರು ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಕಿರುಪ್ರಬಂಧ ಇಡಿಯಾಗಿ ಮತ್ತು ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಡಾ. ಎಸ್. ಸಿ. ಪಾಟೀಲ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ :

# ಬೀದರ ಜಿಲ್ಲೆಯ ಚಿತ್ರಕಲೆ

## ಪರಿವಿಡಿ

ಅಧ್ಯಾಯ - ಒಂದು

# ಅಧ್ಯಯನದ, ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

## ಪ್ರಸ್ತಾವನೆ

ಯಾವುದೇ ಕಲೆಗೆ ಇತಿಹಾಸ ಹಾಗೂ ಪರಂಪರೆಯಿರುತ್ತದೆ. ಹಾಗೂ ಮಾನವ ಹುಟ್ಟಿದ ಪ್ರಜ್ಞಾವಸ್ಥೆಯಲ್ಲೇ ಈ ಕಲೆಗಳು ಜೊತೆ ಜೊತೆಯಲ್ಲಿಯೇ ಬೆಳೆದು ಕೊಂಡು ಬಂದಿವೆ. ಹೀಗೆ ಹಲವು ಮಾಧ್ಯಮಗಳಲ್ಲಿ ಪ್ರಾಗೈತಿಹಾಸಿಕ ಕಾಲದಿಂದ ಕಲೆಗಳು ಬೆಳೆದು ಬಂದಿರುವುದು ಇಂದಿಗೂ ಅಲ್ಲಲ್ಲಿ ಕಂಡು ಬಂದಿರುವ ಕುರುಹುಗಳೇ ಸಾಕ್ಷಿಯಾಗಿವೆ. ಹೀಗೆ ಮಾನವ ಹುಟ್ಟಿನೊಂದಿಗೆ ಬೆಳೆದು ಬಂದ ಈ ಕಲೆಗಳು ಅವನ ಸಂಗಾತಿಯಾಗಿ ಉಳಿದು ಬೆಳೆದು ಬಂದಿರುವುದು ಪ್ರಾಗೈತಿಹಾಸಿಕವಾಗಿ ಕಾಣುತ್ತೇವೆ. ಹಾಗೇ ಲಲಿತಕಲೆಗಳಲ್ಲಿ ಪ್ರಮುಖವಾಗಿ ಚಿತ್ರಕಲೆಗೆ ಒಂದು ವಿಶಿಷ್ಟಸ್ಥಾನ ದೊರೆತಿವೆ. ಯಾಕೆಂದರೆ ಚಿತ್ರಕಲೆಯಲ್ಲಿ ವಿಭಿನ್ನ ದೃಷ್ಟಿಕೋನದಿಂದ ಹಲವಾರು ಆಯಾಮಗಳಿಂದ ಚಿತ್ರ ರಚಿಸಲ್ಪಟ್ಟಿರುತ್ತದೆ.[೧] ಹಾಗೂ ಭಾವಪೂರ್ವದಲ್ಲಿ ಸಂಜ್ಞೆ, ಲಿಪಿ ಪೂರ್ವದಲ್ಲಿ ಚಿತ್ರಕಲೆ ಆದಿ ಮಾನವರಲ್ಲಿ ಬಳಕೆಯಲ್ಲಿದ್ದಿತು. ಹಾಗಾಗಿ ಇದು ವಿಶಿಷ್ಟತೆ ಪಡೆದುಕೊಂಡಿತು. ಹೀಗೆ ವಿಶಿಷ್ಟತೆ ಪಡೆದುಕೊಂಡ ಚಿತ್ರಕಲೆ ತನ್ನ ಕಲಾಭಿವ್ಯಕ್ತಿಯಿಂದ ಜನಸೂರೆಗೊಂಡಿತು.

## ಅಧ್ಯಯನದ ಉದ್ದೇಶ

ಚಿತ್ರ ಕಲೆಯು ತನ್ನ ಭಾವನೆಗಳಿಗೆ ಸ್ಪಂದಿಸುತ್ತ ಭಾವನೆಯ ಸಮತೋಲನೆಯಲ್ಲಿ ಅಭಿವ್ಯಕ್ತಗೊಳ್ಳುತ್ತ ಬಂದಿದೆ. ಆನಂದಮಯವಾಗಿ ಇರುವುದಕ್ಕೆ ಇದು ಸಹಕಾರಿಯಾಗಿದೆ. ವಿಶೇಷವಾಗಿ ಚಿತ್ರವು ಭಾವ ಸ್ಪಷ್ಟತೆಯಲ್ಲಿ ಸಹಾಯಕವಾಗಿದೆ. ಆದ್ದರಿಂದಲೇ ಪ್ರಾಗೈತಿಹಾಸಿಕ ಮಾನವ ತನ್ನ ಭಾವನೆಗಳನ್ನು ವ್ಯಕ್ತಪಡಿಸಲು ಆನಂದಿಸಲು ಪ್ರಾಗೈತಿಹಾಸಿಕ ಕಾಲದಿಂದ ಕಲೆಯನ್ನು ರಚಿಸುತ್ತ ಬಂದಿದ್ದಾನೆ.[೨] ನಂತರ ಒಂದು ಮಹತ್ವ ಪಡೆದಿದೆ. ಸಾಹಿತ್ಯದೊಂದಿಗೆ ಬೆಳೆಯಿತು ಜನಪದರ ನಿತ್ಯ ಜೀವನದೊಂದಿಗೆ ಕೂಡ ತನ್ನ ಛಾಪನ್ನು ಈ

೧. ಡಾ.ಎಸ್.ಸಿ.ಪಾಟೀಲ, ವರ್ಣ ಸಂಚಯ, ಪುಟ-೧೨

೨. ಡಾ.ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪುಟ-೨೫

ಕಲೆ ಮೂಡಿಸಿ ಕೊಂಡಿದೆ. ಎಷ್ಟೋ ಕಲಾವಿದರ ಅಂತರ್ಯದಲ್ಲಿ ಈ ಕಲೆ ಮನೆ ಮಾಡಿಕೊಂಡಿದೆ. ವಿಶ್ವಕ್ಕೆ ಪರಿಚಯವಿರುವ ಈ ಕಲೆಯ ಮಹತ್ವವನ್ನು ಕುರಿತು ನಮ್ಮ ಪರಿಸರಗಳಲ್ಲಿ ಹೇಗೆ? ಇರುವುದು ಎಲ್ಲಿ? ಯಾವ ರೀತಿಯಲ್ಲಿ ಅಭಿವ್ಯಕ್ತಿಯಾಗಿದೆ ಎಂಬುದನ್ನು ಅಧ್ಯಯನ ಮಾಡುವ ಉದ್ದೇಶವಿದೆ.

ಕಲೆಯ ಬೀಡಾಗಿರುವ ಬೀದರ್ ಚಿತ್ರಕಲೆ ಯಾವ ಯಾವ ಕಲಾ ಪ್ರಕಾರಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಕೊಂಡಿದೆ. ಇವುಗಳ ಮಹತ್ವವೇನು ಎನ್ನುವ ದೃಷ್ಟಿಯಿಂದ ಈ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಇಂದಿನ ಕರ್ನಾಟಕದ ನಕ್ಷೆಯಲ್ಲಿ ಉತ್ತರದ ತುತ್ತ ತುದಿಯಲ್ಲಿ ಬೀದರ್ ಜಿಲ್ಲೆ ಕಾಣುತ್ತದೆ. ಈ ಬೀದರ್ ಜಿಲ್ಲೆ ಬೆಂಗಳೂರಿನ ಉತ್ತರ ದಿಕ್ಕಿಗೆ ೧೧೬ ಕಿ.ಮಿ. ದೂರದಲ್ಲಿದೆ. ಹೈದರಾಬಾದಿನ ಆಗ್ನೆಯ ದಿಕ್ಕಿಗೆ ೧೩೦ ಕಿ.ಮೀ ಇದೆ.

ಈ ನಗರದ ದಕ್ಷಿಣ ಪ್ರಸ್ತಭೂಮಿಯು ಎತ್ತರದ ಸ್ಥಾನದಲ್ಲಿದೆ. ಇಲ್ಲಿ ಹವಾಮಾನ ಆರೋಗ್ಯದಾಯಿಕವಾಗಿದ್ದು ಉತ್ತಮವಾದ ಸಾಂಸ್ಕೃತಿಕ, ಐತಿಹಾಸಿಕ ಹಿನ್ನಲೆ ಈ ಜಿಲ್ಲೆಗೆ ಇದೆ.

ಯಾವುದೇ ಕಲೆಗಳು ಆಯಾ ದೇಶದ ಸಂಸ್ಕೃತಿಯ ಜೀವಾಳವು ಆಗಿದ್ದು. ಒಂದರ್ಥದಲ್ಲಿ ಕಲೆಗಳೇ ಆಯಾ ಸಂಸ್ಕೃತಿಯ ಜನಜೀವನವನ್ನು ಉದಾತ್ತಗೊಳಿಸುವ ಶಕ್ತಿ ಪಡೆದಿವೆ. ಮತ್ತು ಮಾನವತೆಯ ಅಭಿವ್ಯಕ್ತಿಯೊಂದಿಗೆ ವಿಶ್ವಮಾನವ ಸಂದೇಶವನ್ನು ಸಾರುತ್ತವೆ. ವ್ಯಕ್ತಿಕ್ಷೇಮ, ಸಮಾಜಕ್ಷೇಮ ಸಾಧನೆಗೆ ಇವು ಮಹತ್ವದ ಸಾಧನಗಳಾಗಿವೆ.

ಸಮಾಜ ತಾಯಿ ಅದರ ಶಿಶು ಕಲೆ ಹೀಗೆ ಕಲೆ ಮತ್ತು ಸಮಾಜಗಳು ಅನ್ಯೋನ್ಯ ಸಂಬಂಧವನ್ನು ಹೊಂದಿದ್ದು ಅವು ಒಂದನ್ನು ಬಿಟ್ಟು ಇನ್ನೊಂದಿಲ್ಲ. ಇತಿಹಾಸ ಒಂದು ಜನಾಂಗದ ಜೀವನ ಚರಿತ್ರೆಯಾದರೆ ಕಲೆಗಳು ಆಯಾ ದೇಶದ ಆತ್ಮಚರಿತ್ರೆಯಾಗುತ್ತದೆಂಬ ಹೇಳಿಕೆ ಯಾವತ್ತೂ ಸತ್ಯವಾದುದಾಗಿದೆ. ಸಮಾಜದ ಅವಿಭಾಜ್ಯ ಅಂಗವಾಗಿರುವ ಯಾವುದೇ ಕಲೆಗಳ ಅಧ್ಯಯನ ಆ ಸಮಾಜದ ಸರ್ವಾಂಗೀಣ ಅಭಿವೃದ್ಧಿಯಲ್ಲಿ ತನ್ನದೇ ಆದ ಅಳಿಲು ಸೇವೆಯಾಗಿರುತ್ತದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಸಂಶೋಧನೆಯು ಅಧ್ಯಯನದ ಅನುಕೂಲತೆಗಾಗಿ ಎಂಟು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ - ಒಂದು**

**ಬೀದರ ಜಿಲ್ಲೆಯ ಚಿತ್ರಕಲೆ**

ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ವೈಧಾನಿಕತೆ ಈ ಅಧ್ಯಯನದಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳುವ ಸ್ಪಷ್ಟ ಉದ್ದೇಶಗಳನ್ನು ಕುರಿತು ಚರ್ಚಿಸಲಾಗಿದೆ. ಹಾಗೆಯೇ ಈ ಕಿರು ಸಂಶೋಧನ ಮಹಾಪ್ರಬಂಧಕ್ಕೆ ಒಂದು ಸ್ವರೂಪವನ್ನು ಕೊಡುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಈ ಅಧ್ಯಯನವು ಬೀದರ್ ಜಿಲ್ಲೆಯ ವ್ಯಾಪ್ತಿಗೆ ಒಳಪಡಿಸಿ ಅಧ್ಯಯನ ನಡೆಸಲಾಗಿದ್ದುದನ್ನು ಸ್ಪಷ್ಟ ಪಡಿಸಲಾಗಿದೆ. ಹಾಗೆಯೇ ಅಧ್ಯಯನಕ್ಕೆ ಬಳಸಿಕೊಂಡ ಸಂಶೋಧನ ವಿಧಾನದ ಕುರಿತು ಸ್ಥೂಲವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ - ಎರಡು

ಬೀದರ ಜಿಲ್ಲೆಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಲಲಿತಕಲೆಗಳು

ಬೀದರಿನ ಐತಿಹಾಸಿಕ, ಚಾರಿತ್ರಿಕ, ಧಾರ್ಮಿಕ, ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಕುರಿತು ಸ್ಥೂಲವಾಗಿ ಚರ್ಚಿಸಲಾಗಿದೆ. ಅಲ್ಲದೆ ಲಲಿತಕಲೆಗಳಾದ ಸಂಗೀತ, ನೃತ್ಯ, ನಾಟಕ, ಸಾಹಿತ್ಯ ಮುಂತಾದವುಗಳ ಕುರಿತು ಸಹ ಗಮನಿಸಿ ಅಧ್ಯಯನಕ್ಕೆ ಪೂರಕವಾದ ಒಂದು ಗಟ್ಟಿನೆಲೆಯನ್ನು ಇಲ್ಲಿ ಒದಗಿಸಿಕೊಡುವ ಪ್ರಯತ್ನವಿದೆ.

ಅಧ್ಯಾಯ - ಮೂರು

ಬೀದರ ಜಿಲ್ಲೆಯ ಜನಪದ ಚಿತ್ರಕಲೆ

ಈ ಅಧ್ಯಯನದಲ್ಲಿ ಜನಪದರ ಬದುಕಿನಲ್ಲಿ ಹಾಸು ಹೊಕ್ಕಾಗಿರುವ ಜನಪದ ಚಿತ್ರಕಲಾ ಪ್ರಕಾರಗಳಲ್ಲಿ ಪ್ರಮುಖವಾಗಿ ರಂಗೋಲಿ ಚಿತ್ರಕಲೆ, ಮೆಹಂದಿ ಚಿತ್ರಕಲೆ, ಮೊಹರಂ ಕುಣಿತ ಜನಪದ ಶೀಗಿ ಭಿತ್ತಿ ಚಿತ್ರ ಹಚ್ಚೆ, ಕೌದಿಕಲೆ, ಹುಲಿಚಿತ್ರ, ಕಸೂತಿಮುಂತಾದವುಗಳ ಕುರಿತು ಅವುಗಳ ರಚನಾ ವಿಧಾನ, ಪರಿಕರಗಳು ಚಿತ್ರಗಳ ವಸ್ತುವಿಷಯ ಮುಂತಾದವುಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಒಟ್ಟಾರೆ ಜನಪದ ಮೂಲದ ಚಿತ್ರಕಲೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ - ನಾಲ್ಕು

ಬೀದರ ಜಿಲ್ಲೆಯ ಶಿಷ್ಟಪದ ಚಿತ್ರಕಲೆ

ಈ ಅಧ್ಯಾಯದಲ್ಲಿ ಬೀದರ್ ಜಿಲ್ಲೆಯಲ್ಲಿ ಕಂಡುಬರುವ ಭಿತ್ತಿಚಿತ್ರ ಕಲೆಯನ್ನು ವಿಶೇಷವಾಗಿ ರಂಗಿನ ಮಹಲ್ ಹಾಗೂ ಅಷ್ಟುರಿನ ಭಿತ್ತಿಚಿತ್ರಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಮತ್ತು ಬೀದರಿನ ವಿಶಿಷ್ಟ ಕಲಾಪ್ರಕಾರವಾದ ಬಿದರಿಕಲೆ ಕುರಿತು ಅದರ ಬೆಳವಣಿಗೆಯ ಹಿನ್ನಲೆ, ಕಲಾ ಪರಿಕರಗಳು, ವಸ್ತುವಿಷಯ ಮುಂತಾದವುಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ - ಐದು

ಬೀದರ ಜಿಲ್ಲೆಯ ಸಂಕೀರ್ಣ ಚಿತ್ರಕಲೆ

ಬೀದರ ಜಿಲ್ಲೆಯಲ್ಲಿರುವ ಲೋಹತೋಪುಗಳ ರೇಖಾಚಿತ್ರಕಲೆ, ಅಕ್ಷರವಿನ್ಯಾಸ ಕಲೆ, ಗಾಜಿನ ಚಿತ್ರಕಲೆ, ಆಧುನಿಕ ಭಿತ್ತಿಚಿತ್ರಕಲೆ/ಶಿಲ್ಪಕಲೆ, ಮತ್ತು ವಸ್ತುಸಂಗ್ರಹಾಲಯಗಳಲ್ಲಿ ಸಂಗ್ರಹಗೊಂಡಿರುವ ಚಿತ್ರಗಳ ಕುರಿತು ಅಧ್ಯಯನ ಮಾಡಲಾಗಿದೆ. ಈ ಎಲ್ಲ ಕಲೆಗಳ ರಚನೆಯ ಹಿನ್ನೆಲೆಯನ್ನು ಮತ್ತು ಚಿತ್ರಗಳ ವಸ್ತುವಿಷಯ ಮುಂತಾದ ಅಂಶಗಳನ್ನು ದೃಶ್ಯಕಲೆಯ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾಗಿದೆ.

ಅಧ್ಯಾಯ - ಆರು

ಬೀದರ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ವಸ್ತುಸಂಗ್ರಹಾಲಯದಲ್ಲಿನ ಚಿತ್ರಕಲಾಕೃತಿಗಳು

ಬೀದರ ಜಿಲ್ಲೆಯಲ್ಲಿರುವ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ಕಲಾ ಚಟುವಟಿಕೆಗಳು, ಕಲಾ ಸಂಘಟನೆಗಳು ಅಲ್ಲದೆ ದೃಶ್ಯಕಲಾ ಸಾಹಿತ್ಯದ ಕುರಿತು ಅಧ್ಯಯನ ಮಾಡಲಾಗಿದೆ. ಕಲಾ ಶಿಕ್ಷಣ ಅವುಗಳ ಹುಟ್ಟು, ಬೆಳವಣಿಗೆ ಬೋಧನಾ ಪದ್ಧತಿ, ಕಲಾ ಶಿಕ್ಷಕರ ಸಾಧನೆ, ಕಲಾ ಪ್ರದರ್ಶನಗಳು, ಕಲಾ ಶಿಬಿರಗಳು, ಕಲಾ ಪ್ರಾತ್ಯಕ್ಷಿಕೆ. ಹೀಗೆ ಮುಂತಾದ ವಿಷಯಗಳ ಕುರಿತು ಅಧ್ಯಯನ ಗಮನಹರಿಸಿದೆ.

ಅಧ್ಯಾಯ - ಏಳು

ಬಿದರ ಜಿಲ್ಲೆಯ ಸಮಕಾಲೀನ ಕಲೆ, ಕಲಾವಿದರ ಸ್ಥಿತಿಗತಿಗಳು

ಬೀದರ ಜಿಲ್ಲೆಗೆ ಅನೇಕ ಹಿರಿಯ ಕಿರಿಯ ಕಲಾವಿದರು ತನ್ನದೇ ಆದ ಕೊಡುಗೆಯನ್ನು ನೀಡಿದ್ದಾರೆ. ಮತ್ತು ರಾಷ್ಟ್ರೀಯ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅವರ ಸಾಧನೆಯಿದೆ. ಅವರಲ್ಲಿ ಪ್ರಮುಖರಾದ ಕಲಾವಿದರನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಉದಾಹರಣೆಗೆ, ಶ್ರೀ.ಎಂ.ಬಿ.ಲೋಹಾರ್, ಡಾ.ಮೋಹನ್‌ರಾವ್ ಬಿ.ಪಂಚಾಳ, ಶಾಂತವೀರ್ ಕಸೂದಿ, ಸತೀಶಕುಮಾರ, ವಲ್ಲೆಪುರೆ, ಯೋಗೀಶ ಚ.ಮಠದ, ಬಿ.ಕೆ.ಬಡಿಗೇರ, ಅಶೋಕ ಶಟಗಾರ, ಅನಿರುದ್ಧ ಜೋಶಿ, ಮಲ್ಲಿಕಾರ್ಜುನ ಶೆಟ್ಟಿ, ಸಂತೋಷವನ್ನಿಕೇರೆ, ರಾಹುಲ್ ಡಿ.ವಾಗ್ಮೊರೆ, ಅಶೋಕ ಹಿರೇಮಠ, ಹಿರಿಯಕಲಾವಿದ ಬಸವರಾಜ ಮುಗಳಿ ಮತ್ತು ಇನ್ನೂ ಹಲವಾರು ಕಲಾವಿದರ ಕಲಾಕೃತಿ ಹಾಗೂ ಕಲಾ ಬದುಕಿನ ವಿಶೇಷತೆಗಳನ್ನು ಕುರಿತು ಸ್ಥೂಲವಾದ ಅಧ್ಯಯನವನ್ನು ಇಲ್ಲಿ ಮಾಲಾಗಿದೆ.

ಅಧ್ಯಾಯ - ಎಂಟು

ಸಮಾರೋಪ

ಈ ಅಧ್ಯಾಯದಲ್ಲಿ ಎಲ್ಲ ಅಧ್ಯಾಯಗಳ ಸಂಶೋಧನೆಯ ಫಲಿತಗಳನ್ನು ಸಮೀಕ್ಷಿಸಸಿ ಚರ್ಚಿಸಲಾಗಿದೆ.

## ಇದುವರೆಗೆ ನಡೆದ ಸಂಶೋಧನಾ ಅಧ್ಯಯನ

## ಅಧ್ಯಯನದ ವ್ಯಾಪ್ತಿ

ಈ ಅಧ್ಯಯನವು ಬೀದರ್ ಜಿಲ್ಲೆಯ ವ್ಯಾಪ್ತಿಗೆ ಮಾತ್ರ ಒಳಗೊಂಡಿದೆ. ಈ ಜಿಲ್ಲೆಯಲ್ಲಿ ಔರಾದ, ಭಾಲ್ಕಿ, ಬಸವಕಲ್ಯಾಣ, ಹುಮನಾಬಾದ, ಬೀದರ ತಾಲೂಕುಗಳು ಒಳಗೊಂಡಿವೆ. ಪೂರಕವಾಗಿ ಕರ್ನಾಟಕದ ಇತರ ಜಿಲ್ಲೆಗಳ ಚಿತ್ರಕಲೆಯನ್ನು ಅಧ್ಯಯನಕ್ಕೆ ಅಲ್ಲಲ್ಲಿ ತೌಲನಿಕವಾಗಿ ಚರ್ಚಿಸಲು ಬಳಸಿಕೊಂಡಿದೆ.

## ಅಧ್ಯಯನದ ವಿಧಾನ

ಈ ಅಧ್ಯಯನಕ್ಕೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗುವುದು.

೧. ಮೂಲ ಆಕರ ಸಾಮಗ್ರಿ

೨. ಆನುಷಂಗಿಕ ಆಕರ ಸಾಮಗ್ರಿ

## ೧. ಮೂಲ ಆಕರ ಸಾಮಗ್ರಿ

ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತಿಮುಖ್ಯವಾದ ಅಂಶವಾಗಿದೆ. ಅಧ್ಯಯನದ ಕ್ರಮಕ್ಕೆ ಅಗತ್ಯವಾಗಿರಬೇಕಾಗುವಂತಹ ವಿಧಾನ ಇದಾಗಿದೆ. ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆ ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಮುಖ್ಯವಾಗಿರುತ್ತದೆ. ಇದರಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಮೂಲ ಆಕರ ಸಾಮಗ್ರಿಯಾಗಿ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು.

ಕ್ಷೇತ್ರಕಾರ್ಯದಲ್ಲಿ ಅವಲೋಕನ ಅತಿಮುಖ್ಯವಾದ ಅಂಶವಾಗಿದ್ದು, ಮೂಲಭೂತವಾದ ಭಿತ್ತಿಚಿತ್ರಗಳು ಇರುವ ಕಡೆಗೆ ಭೇಟಿಕೊಟ್ಟು, ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿ, ಛಾಯಾಚಿತ್ರಣ ಮಾಡಿಕೊಂಡು, ಅದಕ್ಕೆ

ಸಂಬಂಧಿಸಿದ ಮಾಹಿತಿಯನ್ನು ಅದೇ ಸ್ಥಳಗಳಲ್ಲಿ ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗಿದೆ. ಉದಾಹರಣೆಗೆ, ರಂಗಿನಮಹಲ್ ಹಾಗೂ ಅಪ್ಪೂರಿನ ಸ್ಥಳೀಯ ಹಿರಿಯರ ಮಾಹಿತಿಯನ್ನು ಪಡೆಯಲಾಗುವುದು. ಹೀಗೆ ಹಲವಾರು ಮೂಲಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿಕೃತಿ ಮಾಡಿಕೊಂಡು ಅಥವಾ ಛಾಯಾಚಿತ್ರ ಮಾಡಿಕೊಳ್ಳಲಾಗುವುದು ಮತ್ತು ಕಲಾಕ್ಷೇತ್ರದಲ್ಲಿ ಹಲವಾರು ವಿದ್ವಾಂಸರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ, ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗುವುದು.

ಹೀಗೆ ಈ ಕ್ಷೇತ್ರಕಾರ್ಯದಿಂದ ದೊರೆತ ಹಲವಾರು ವಿವರಗಳನ್ನು ಅಭ್ಯಾಸಕ್ಕೆ ಮತ್ತು ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚನೆ ಮಾಡಲಾಗುವುದು.

**೨. ಆನುಷಂಗಿಕ ಆಕರ ಸಾಮಾಗ್ರಿ**

ಪ್ರಬಂಧ ರಚಿಸುವಲ್ಲಿ ಎರಡನೆಯ ವಿಧಾನ ಆನುಷಂಗಿಕ ಸಾಮಗ್ರಿಯಾಗಿದ್ದು, ಇದಕ್ಕೆ ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯ ಮತ್ತು ಕಲೆಯ ಗ್ರಂಥಗಳು, ಅಲ್ಲದೆ ಸಂಪುಟಗಳು, ವಿಶ್ವಕೋಶಗಳು, ಅನುವಾದ ಗ್ರಂಥಗಳು, ಸಂಶೋಧನಾ ಮಹಾಪ್ರಬಂಧಗಳು, ಅಲ್ಲದೆ ದೇಶಿ ವಿದೇಶಿ ಪ್ರವಾಸಿಗರ ಬರಹಗಳು, ಸಂಶೋಧನಾ ಲೇಖನಗಳು, ಪತ್ರಗಳು ಮುಂತಾದ ಮೂಲದಿಂದ ಮಾಹಿತಿ ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗಿದೆ. ಹೀಗೆ ಆನುಷಂಗಿಕ ಆಕರ ಸಾಮಗ್ರಿಗಳನ್ನು ವಿವಿಧ ಪಟ್ಟಿಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಕಿರುಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

* * *

ಅಧ್ಯಾಯ - ಎರಡು

# ಬೀದರ ಜಿಲ್ಲೆಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಲಲಿತಕಲೆಗಳು



ಅಧ್ಯಾಯ - ಎರಡು

# ಬೀದರ ಜಿಲ್ಲೆಯ ಸಾಂಸ್ಕೃತಿಕ ಹಿನ್ನೆಲೆ ಮತ್ತು ಲಲಿತಕಲೆಗಳು

ಬೀದರಿನ ಪ್ರಮುಖ ಬಿದರಿಕಲೆಯೂ ವಿಶ್ವ ವಿಖ್ಯಾತ ಪಡೆದಿದೆ. ಐತಿಹಾಸಿಕ ಸ್ಥಳಗಳಿಂದ ಕೂಡಿದ್ದು, ಕೋಟೆ, ರಂಗಿನ ಮಹಲ್, ತೇಖತ್‌ಮಹಲ್, ಮುಂತಾದ ಅರಮನೆಗಳು ಬಹುಮನಿ ಮತ್ತು ಬರಿದು ಗೋಪುರಗಳು ಕಂಡರೆ ಧಾರ್ಮಿಕವಾಗಿ ಗುಹಾಂತರ ದೇವಾಲಯ ಗುರುನಾನಕ ಝುರನಾ, ಬಸವಕಲ್ಯಾಣದ ತ್ರಿಪುರಾಂತೇಶ್ವರ ದೇವಾಲಯ ಮೊದಲಾದ ಪ್ರೇಕ್ಷಣೀಯ ಸ್ಥಳಗಳಾಗಿವೆ. ಸೋಲಾ ಕಂಬ, ಮಸೀದಿ, ಔರಾದ ಅಮರೇಶ್ವರ ದೇವಾಲಯ, ಭಾಲ್ಕಿಯ ಹಿರೇಮಠ ಸಂಸ್ಥಾನ ಹುಮನಾಬಾದ ವೀರಭದ್ರೇಶ್ವರ ದೇವಸ್ಥಾನ, ನಾರಾಯಣಪುರದ ಶಿವದೇವಸ್ಥಾನ ಇವು ಪ್ರವಾಸಿಗರ ಆಕರ್ಷಣೀಯ ಸ್ಥಳಗಳಾಗಿವೆ. ಬೀದರ ಜಿಲ್ಲೆಯೂ ಸಮುದ್ರದ ಮಟ್ಟದಿಂದ ಸುಮಾರು ೬೬೪ ಕಿ.ಮೀ ಎತ್ತರದಲ್ಲಿ ಇದೆ. ಹೀಗಾಗಿ ಇದು ತಂಪಾದ ಪ್ರದೇಶವಾಗಿದೆ. ಕ್ರಿ.ಶ. ೧೬೨೪ರಲ್ಲಿ ಬಹುಮನಿ ಸುಲ್ತಾನರು ಇದನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕೋಟೆ ಕಟ್ಟಿಸಿರುವುದು ಚರಿತ್ರೆಯಿಂದ ತಿಳಿದು ಬರುತ್ತದೆ.[೧] ಕೋಟೆಯ ಒಳಗಿನ ಸೋಲಾಕಂಬ ಮಸೀದಿಯನ್ನು ೧೪೨೩ರಲ್ಲಿ ರಚಿಸಿದ್ದಾರೆ. ನಾನು ಜೀರಾಬಳಿ ಬೀದರಿನ ಗುರುದ್ವಾರವನ್ನು ರಚಿಸಲಾಗಿದ್ದು, ಇದನ್ನು ಚಿತ್ರಿಸಿದಾಗ ನೀರಿನ ಚಿಲುಮೆಯನ್ನು ನಿರ್ಮಿಸಿದ್ದಳೆಂಬ ಪ್ರತೀತಿ ಇದೆ. ಬಸವೇಶ್ವರ ೮೦೦ ವರ್ಷದ ಸ್ಮಾರಕವಾಗಿ ಇಲ್ಲಿದೆ. ಬಸವಣಕಲ್ಯಾಣ ಚಾಲುಕ್ಯರ ರಾಜಧಾನಿಯಾಗಿತ್ತು, ಇಲ್ಲಿರುವ, ಪುರಾತನ ಕೋಟೆಯನ್ನು ಬಹುಮನಿ ರಾಜರು ನವೀಕರಿಸುತ್ತಾರೆ. ಇಂದು ಕೋಟೆಯೊಳಗೆ ಪ್ರಾಚ್ಯವಸ್ತು ಸಂಗ್ರಹಾಲಯವಿದೆ.

ಈ ಜಿಲ್ಲೆ ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಪರಂಪರೆಗೆ ಭದ್ರ ನೆಲೆಯುಳ್ಳ ತಾಣವಾಗಿದೆ. ಶತ ಶತಮಾನಗಳ ಇತಿಹಾಸ ಹೊಂದಿದ ಇದು ಪುಣ್ಯ ಪುರುಷರ ನೆಲೆಯಿದ್ದು

೧. ಜಿ.ಯಜದಾನಿ, ಬೀದರ ಇಟ್ಸ್ ಹಿಸ್ಟರಿ ಅಂಡ್ ಮಾನ್ಯುಮೆಂಟ್ಸ್, ಪುಟ-೪೩

ಗಡಿ ಪ್ರದೇಶದ ಸಂಸ್ಕೃತಿ, ಭಾಷಾ ಹೊಂದುಕೊಳ್ಳುವುದರಲ್ಲಿಯೂ ಕನ್ನಡದ ವೀರ ಪರಂಪರೆಯನ್ನು ಉಳಿಸಿಕೊಂಡಿರುವ ಪ್ರದೇಶ ಇದಾಗಿದೆ.[೨] ಕಾಲಕ್ಕೆ ತಕ್ಕಂತಹ ಏರಿಳಿತಗಳನ್ನು ಕಾಣಿಸುತ್ತಿರುವ ಧರಿನಾಡು ಕಲ್ಯಾಣನಾಡು ಎಂದು ಪ್ರಸಿದ್ಧವಾಗಿರುವ ಈ ಪರಿಸರದ ಭೂಮಿ ಮಿಶ್ರ ಸಂಸ್ಕೃತಿಗೆ ಹೆಸರುವಾಸಿ. ವಿವಿಧ ಜನಾಂಗದ ಧರ್ಮ, ಭಾಷೆ, ಕಲೆ, ಸಾಹಿತ್ಯ, ಶಿಲ್ಪ, ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗಿರುವ ಹಿರಿಮೆ ಈ ಜಿಲ್ಲೆಗುಂಟು.

ಹನ್ನೆರಡನೆಯ ಶತಮಾನದಲ್ಲಿ ಈ ಜಿಲ್ಲೆ ಸಾಂಸ್ಕೃತಿಕ ಇತಿಹಾಸದ ಮಹೋನ್ನತ ಕಾಲ ಕಲ್ಯಾಣದಲ್ಲಿ ಶರಣರ ಕ್ರಾಂತಿಯಾದ ಕಾಲ. ಬಸವಣ್ಣ ಅಲ್ಲಮಪ್ರಭು, ಸಿದ್ಧರಾಮಯ್ಯ, ಅಕ್ಕಮಹಾದೇವಿ ಮೊದಲಾದ ಅನೇಕ ಶರಣ ಶರಣೆಯರ ಸಮ್ಮೇಳನಗೊಂಡ ಸಾಂಸ್ಕೃತಿಕ ಬದುಕನ್ನು ಚರ್ಚಿಸಿ ನವ ಉದಯಕ್ಕೆ ಕಾಣಿಸಿದ ಕಾಲ ಕಲ್ಯಾಣಭೂಮಿಯ ಮೇಲಿನ ಕೈಲಾಸವನ್ನಾಗಿ ಮೆರೆಸಿದ ಯುಗ.[೩] ಕಳಚೂರಿ ರಾಜರ ಆಳ್ವಿಕೆ ಕಾಲದಲ್ಲಿ ಧಾರ್ಮಿಕ, ಸಾಹಿತ್ಯಿಕ ಹಾಗೂ ಸಾಮಾಜಿಕ ರಂಗಗಳಲ್ಲಿ ಸಾಂಸ್ಕೃತಿಕ ಬದುಕು ಸ್ಥಿತ್ಯಂತರಗೊಂಡಿತ್ತು. ಸಾಂಸ್ಕೃತಿಕ ವೇದಿಕೆ ಶ್ರೀ ಸಾಮಾನ್ಯರೊಂದಿಗೆ ಸಹಕರಿಸಿ ಆ ಮೂಲಕ ಆರ್ಥಿಕ ಪ್ರಗತಿ ಮೂಲಕ ಕಂಡುಕೊಂಡು ಸಂವೇಧನಾತ್ಮಕ ಸಾಂಸ್ಕೃತಿಕ ಸಾಮರಸ್ಯದ ಮೂಲಕ ಮಾನವ ಪ್ರಗತಿಗೆ ನಾಂದಿ ಹಾಡಿದ್ದಾರೆ. ೫ ಗ್ರಾಮಗಳಿರುವ ೫೮ ತಾಲ್ಲೂಕುಗಳನ್ನೊಳಗೊಂಡಿರುವ ಪ್ರದೇಶ ಎತ್ತರವಾದ ಬೆಟ್ಟ ಗುಡ್ಡಗಳಲ್ಲದೆ ದೊಡ್ಡ ನದಿ, ಹಾಗೂ ಅರಣ್ಯ ಪ್ರದೇಶ ಇರದ ದಖನ್ನಪ್ರಸ್ಥಭೂಮಿಯ ಒಂದು ಭಾಗ. ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ತನ್ನದೇ ಆದ ವಿಶಿಷ್ಟ ಪರಂಪರೆಯನ್ನು ಹೊಂದಿರುವ ಇದು ಕೃಷಿ ಪ್ರಧಾನ್ಯತೆಯಲ್ಲಿ ಪಶು ಸಾಕಣಿಕೆಯಲ್ಲಿ ತನ್ನತನವನ್ನು ಮೆರೆದಿದೆ. ಜಾಗತೀಕರಣದ ಸಂದರ್ಭದಲ್ಲಿ ಶಿಷ್ಟ ಸಂಸ್ಕೃತಿಯೊಂದಿಗೆ ರಾಜಿ ಮಾಡಿಕೊಂಡ ಬಹುಸಂಸ್ಕೃತಿಯುಳ್ಳ ಜಾನಪದ ಸಂಸ್ಕೃತಿಯನ್ನು ಉಳಿಸಿಕೊಂಡು ಆಧುನಿಕವಾಗಿ ಬೆಳೆಯುತ್ತಿರುವುದು ಗಮನಾರ್ಹವಾದ ಅಂಶ. /ಹಿಂದೆ ಶರಣರ ಹಾಗೂ ಮಹಮ್ಮದೀಯ ಸಾಂಸ್ಕೃತಿಕ ಹಿರಿಮೆಗಳಿಂದ ಮತ್ತು ಜಗತ್ಪ್ರಸಿದ್ಧವಾದ ಬಿದರಿಕಲೆಯಿಂದ ದೇಶ ವಿದೇಶಗಳಲ್ಲಿ ಇಂದು ಚಿರಪರಿಚಿತವಾಗಿದೆ. ಬಿದರಿ ಕಲೆ ಮಣ್ಣಿನಲ್ಲಿರುವ ಸತು, ತಾಮ್ರ, ಜಿಂಕ್ ಮುಂತಾದ ಖನಿಜ ಸಂಪನ್ಮೂಲಗಳಿಂದ ಜನ್ಮತಾಳಿದ ಒಂದು ಅಪರೂಪದ ಕರಕುಶಲ ಕಲಾ ಕೃತಿಯಾಗಿದೆ. ಬೆಳ್ಳಿ, ಬಂಗಾರದಲ್ಲಿಯೇ ಸೂಕ್ಷ್ಮಕೆತ್ತನೆಯ ಕೆಲಸಗಳು ಮನಮೋಹಕವೆನಿಸುತ್ತಿರುವ ನೋಡುಗರ ಕಣ್ಣಿಗೆ ಮನ ಸೆಳೆಯುವಂತಾಗಿದೆ.

ವಿವಿಧ ಶೈಲಿಗಳಲ್ಲಿತಯಾರಾಗುತ್ತಿರುವ ಆಭರಣಗಳು (ತುಂಬಾ ಸುಂದರವಾದವು) ಅಂತೆಯೇ ಲೋಹಗಳಲ್ಲಿ ತಯಾರಾಗುತ್ತಿರುವ ರಾಷ್ಟ್ರ ನಾಯಕರ ಮೂರ್ತಿ ಶಿಲ್ಪಿಗಳು ದೇವತೆಗಳ ಮೂರ್ತಿಗಳು ಹೂದಾನಿ, ಪೆಟ್ಟಿಗೆ, ಮನೆಯ ಅಲಂಕಾರ ವಸ್ತುಗಳು ಎಂಥವರನ್ನು ಆಕರ್ಷಿಸುವಂತಿವೆ. ಹಾಗೂ ಹೊಳೆಯುತ್ತವೆ. ಬಿದರಿ ಕಲೆ ವಿದೇಶಿ ಮಾರುಕಟ್ಟೆಯಲ್ಲಿ ಪ್ರಮುಖ ಸ್ಥಾನ ಪಡೆದಿದ್ದು ಸಾಂಪ್ರದಾಯಿಕ ಹಾಗೂ ಹೊಸತನ ಮಾದರಿಯ ಕಲೆಯ ವಿನ್ಯಾಸಗಳ ತವರುಮನೆಯಾಗಿದೆ. ಹೀಗೆ ಇಲ್ಲಿ ಸಾಂಪ್ರದಾಯಿಕ,

---

೨. ಡಾ.ಸೋಮನಾಥ ಯಾಳವಾರ, ಬೀದರ ಜಿಲ್ಲಾ ದರ್ಶನ, ಪುಟ-೪೫

೩. ಡಾ.ಸೋಮನಾಥ ಯಾಳವಾರ, ಬೀದರ ಜಿಲ್ಲಾ ದರ್ಶನ, ಪುಟ-೪೮

ಕಲೆ, ಸಾಹಿತ್ಯ, ಐತಿಹಾಸಿಕ ಹಿನ್ನಲೆ ಹಾಗೂ ಬಹಳ ವಿಶಿಷ್ಟವಾದ ನಾಡು. ಚಿತ್ರಕಲೆಗೂ, ಕಲಾವಿದರಿಗೆ ಒಳ್ಳೆ, ಪರಿಸರ ಇದಾಗಿದೆ. ಇಲ್ಲಿ ಜನಪದರಿಗೆ ವಾಸ್ತವ ಅರಿವಿದ್ದು ಭೂಮಿ, ಗಿಡ, ಮರ, ಮಳೆ, ಬೆಳೆ ಮುಂತಾದ ತಮಗೆ ಫಲಕೊಡುವ ಪ್ರಕೃತಿಯಲ್ಲಿಯೇ ದೇವರನ್ನು ಕಾಣುತ್ತಾರೆ.

ಇಲ್ಲಿ ಕಲೆಯ ದೃಷ್ಟಿಯಿಂದ ಗಮನಿಸುವ ಹಲವಾರು ಜಾನಪದ ಕಲೆಗಳ ಜೊತೆಗೆ ಮೆಹಂದಿಹಚ್ಚುವ ಕಲೆಯು ತುಂಬಾ ವಿಶೇಷವಾಗಿದೆ. ಹಿಂದೂ, ಮುಸ್ಲಿಂ ಹಾಗೂ ವಿವಿಧ ಜನಾಂಗಗಳ ಸ್ತ್ರೀಯರು ಅಲಂಕರಿಸಿಕೊಳ್ಳಲು ಅಂಗೈ ಹಾಗೂ ಪರದೆಗಳ ಮೇಲೆ ಚಿತ್ರಿಸಿಕೊಳ್ಳುವ ವಿವಿಧ ಬಗೆಯ ಮತ್ತು ಇಲ್ಲಿ ಜನಪದವಾಗಿ ಪ್ರತಿ ಒಂದು ಗ್ರಾಮಗಳಲ್ಲಿ ವಿವಿಧ ಅಲಂಕಾರದಿಂದ ಕೂಡಿದುದನ್ನು ಕಾಣಬಹುದು.

ಇಲ್ಲಿನ ಎಲ್ಲಾ ಕಲೆಗಳು ಮನಮೋಹಕವಾಗಿವೆ. ಈ ಜಿಲ್ಲೆಯ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ವೈಭವಯುತವಾಗಿ ತೋರುವ ಕೋಲಾಟ, ಬುಲಾಯಿ ಹಾಡು, ಭೂತೇರ ಕುಣಿತ, ಭಜನೆ, ಮೊಹರಂ ಆಚರಣೆ, ಹಂತಿ ಸುಗ್ಗಿಹಾಡು. ಇವೆಲ್ಲಕ್ಕಿಂತಲೂ ವಿಭಿನ್ನವಾಗಿ ಏಳು ದಿನಗಳವರೆಗೆ ದಶರೆಯ ಮೊದಲದಿನ ಅಥವಾ ಮಹಾನವಮಿಯ ದಿನದಿಂದ ಹಿಡಿದು ಶೀಗಿ ಹುಣ್ಣಿಮೆತನಕ ಸಗಣಿಯಿಂದ ಜನಪದರು ಉಬ್ಬು ಶಿಲ್ಪ ರಚಿಸುವುದು. ಆರು ದಿನ ಸಗಣಿಯಿಂದ ಚಿತ್ರ ಬಿಡಿಸಿ ಕೊನೆಯ ದಿನ ವರ್ಣಗಳ ಮುಖಾಂತರ ಚಿತ್ರ ರಚನೆ ಮಾಡುವರು. ಇದರ ಜೊತೆ ಶೀಗಿಹಾಡು ಸಾಂಪ್ರದಾಯಿಕ ಹಾಡುಗಳನ್ನು ಹಾಡುವುದನ್ನು ಕಾಣುತ್ತೇವೆ.

ವಾಸ್ತು ಹಾಗೂ ಶಿಲ್ಪ ಕಲೆಯು ಇಲ್ಲಿ ವಿಶಿಷ್ಟವಾಗಿದೆ. ಭದ್ರತೆಗೆ ಹೆಸರಾಗಿರುವ ಬೀದರ್ ಕೋಟೆ, ಕಲ್ಯಾಣ, ಭಾಲ್ಕಿ ಹುಮನಾಬಾದ, ಚಿಟ್ಟಗುಪ್ಪಾ ಬಗದಲ್ಲ, ಅಷ್ಟೂರ, ರಂಜೋಳ ರಾಜೇಶ್ವರ ಸಂಕಪುರ ಮೊದಲಾದ ಊರುಗಳಲ್ಲಿರುವ ಗುಮ್ಮಜ್‌ಕೋಟೆ, ಕೊತ್ತಳ ಅರಮನೆಗಳು ವಾಸ್ತುಕಲೆ ಸಂಪತ್ತಿ ತಾಣಗಳು ಗವಾನನ ವಿದ್ಯಾಲಯ, ಕಲ್ಯಾಣ ಚಾಲುಕ್ಯರ ದೇವಾಲಯಗಳನ್ನು ವಿಶೇಷವಾಗಿ ಈ ಸ್ಥಳಗಳಲ್ಲಿ ಕಾಣಬಹುದು. ಶಿವಪುರ, ನಾರಾಯಣಪುರ, ಜಲಸ್ಸಂಗಿ ದೇಗುಲಗಳು ಶಿಲ್ಪಕಲೆಯ ಗಮನಿಸುವ ಶ್ರೀಮಂತಿಕೆಯು ಗುರುತಿನ ಚಿಹ್ನೆ ಕುರುಹುಗಳು. ಈ ದೇವಾಲಯಗಳಲ್ಲಿ ಕೆತ್ತಲಾಗಿರುವ ಶಿಲಾಬಾಲಿಕೆಯರ ಚಿತ್ರಗಳು ಚಾಲುಕ್ಯ ಶಿಲ್ಪಕಲೆಯ ಕೊಡುಗೆಗಳು. ಅನಂತರದಲ್ಲಿ ಈ ಜಿಲ್ಲೆಯ ಹಲವು ಕಟ್ಟಡಗಳು ಹಾಗೂ ಮಂದಿರಗಳು ವಿಜಯನಗರ ಹಾಗೂ ಹೊಯ್ಸಳ ಕಲಾಶೈಲಿಯ ಪ್ರತೀಕಗಳಾಗಿ ನಿಂತಿವೆ.

ಮುಸ್ಲಿಂ ಶೈಲಿಯ ಕಟ್ಟಡಗಳಾದ ಗಗನ್ ಮಹಲ್, ರಂಗಿನ ಮಹಲ್, ತಕ್ತ ಮಹಲ್ ಸೋಲಾಕಂಬ, ಅಷ್ಟುರ್ ಸಭಾಸದನ, ಜುಮ್ಮಾ ಮಸೀದಿ ಮುಂತಾದ ಕಟ್ಟಡಗಳು ಬಹುಮನಿ ಹಾಗೂ ಆದಿಲ್‌ಶಾಹಿ ಸುಲ್ತಾನರ ಕಾಲದಲ್ಲಿ ಕಲಾತ್ಮತೆಗೆ ತೋರುವ ಕನ್ನಡಿಗಳಾಗಿವೆ. ಇಂದು ಜಿಲ್ಲೆಯಲ್ಲಿ ಕಾಣುವ ಶೈವ, ವೀರಶೈವ ಮಠಗಳು, ಶಿವ, ವಿಷ್ಣು, ಭವಾನಿ, ಮಂದಿರಗಳು ಪ್ರಭು ಸಿದ್ಧ, ಬುದ್ಧ, ರಾಘವೇಂದ್ರರ ದೇವಾಲಯಗಳು, ಚರ್ಚುಸಮುದಾಯ ಭವನಗಳು ಇಂದಿನ ವಾಸ್ತು ಶಿಲ್ಪ ಪ್ರತಿಮೆಗಳು ಎನ್ನಬಹುದು.

ವಿವಿಧ ಮತ ಪಂಥಗಳ ಸ್ಮಾರಕಗಳು ಭಕ್ತಿ ಶಾಂತಿಯ ನೆಲೆಗಳಾಗಿದ್ದು, ಪ್ರವಾಸಿ ತಾಣಗಳು ಆಗಿವೆ ಮುಲ್ತಾಣಿ ಪಾಶಾ, ಅಬ್ದುಲ್ ಝುರನಾ, ಶರಣರ ಗುಹೆಗಳು ನಾವದಗೇರಿ ಮಾಣಿಕನಗರ ಶುಕ್ಲ ತೀರ್ಥಗಳು ಪವಿತ್ರ ತಾಣಗಳೆನಿಸಿವೆ. ಇವು ಸಾಂಸ್ಕೃತಿಕ ಕೇಂದ್ರಗಳೂ ಆಗಿವೆ.

ಇಂದಿನ ದಿನಗಳಲ್ಲಿ ಇಂತಹ ಜನಪದ ವೃತ್ತಿ ಕಲಾವಿದರು ಇಂದು ತಮ್ಮ ಕಲೆಗೆ ಕೈ ಮುಗಿದು ಇತರ ಕೆಲಸ ಕಸುಬುಗಳಲ್ಲಿ ತಮ್ಮನ್ನೇ ತಾವು ತೊಡಗಿಸಿಕೊಂಡಿದ್ದಾರೆ. ಮಕ್ಕಳುಗಳನ್ನು ಕೂಲಿ ನಾಲಿ ಕೆಲಸಕ್ಕೆ ಕಳಿಸುತ್ತಿದ್ದಾರೆ. ಹೀಗಾಗಿ ಜಾನಪದ ಕಲೆಗಳೆಲ್ಲ ಸುಡುಗಾಡು ಸೇರುತ್ತಿವೆ. ಸರಹತ್ತಿದೆ ಕಾರಣ ಡಿಸ್ಕೋ ಜಮಾನ ಆಧುನಿಕತೆ ಸಿನಿಮಾ, ಟಿ.ವಿ, ಅಂದ್ರೆ ಬಾಯಿ ಚಪ್ಪರಿಸಿ ಸಮಯ ನಿದ್ರೆ ಗಣ್ಣಿನಿಂದ ಎದ್ದೇಳುವರು ಹೀಗಾಗಿ ಜಾನಪದ ಕಲಾವಿದರು ತಮ್ಮಲ್ಲಿ ತಾನೇ ನಾಚಿ ನೀರಾಗಿ ಆವಿಯಾಗಿ ಕಣ್ಮರೆಯಾಗುತ್ತಿದ್ದಾರೆ. ಜಾನಪದ ಕಲೆ ಜೀವಂತ ಉಳಿಯ ಬೇಕಾದರೆ ಕಲಾವಿದರೆ ಪ್ರೋತ್ಸಾಹಿಸಬೇಕು ಪ್ರಶಸ್ತಿ, ಪುರಸ್ಕಾರ ನೀಡಬೇಕು ಅವರಿಗೆ ದೂರದರ್ಶನ ವಿಡೀಯೊಗಳಲ್ಲಿ ವಿಶಿಷ್ಟಸ್ಥಾನ ಕೊಡಬೇಕು. ಮಾಸಾಶನ, ಪ್ರತಿ ತಿಂಗಳ ಕೊಡುಗೆ ವೇತನ, ನಿವೃತ್ತದ ತಿಂಗಳ ವೇತನ ದೊರೆಯಬೇಕು ಅಂದಾಗ ಮಾತ್ರ ಕಲೆ ಮತ್ತು ಜನಪದ ಕಲಾವಿದರು ಉಳಿಯುತ್ತಾರೆ.

ಕರ್ನಾಟಕದ ಕಿರೀಟವೆಂದು ಹೆಸರು ಪಡೆದ ಬೀದರ್ ಜಿಲ್ಲೆಗೆ ಧರಿ ನಾಡೆಂದು ಇನ್ನೊಂದು ಹೆಸರು ಇದೆ. ಧರಿ ಎಂದರೆ ಎತ್ತರವಾದ ಪ್ರದೇಶ ಎಂದರ್ಥ. ಧರಿ ನಾಡಾದ ಬೀದರ ಜಿಲ್ಲೆ ಅತ್ಯಂತ ವಿಶಾಲವಾಗಿ ಹರಡಿರುವ ವ್ಯಾಪ್ತಿಯುಳ್ಳ ಪ್ರದೇಶವಾಗಿದ್ದು, ಇಲ್ಲಿ ಜಾನಪದ ಕಲೆಗಳಿಗೆ ದೊಡ್ಡ ಸ್ಥಾನವಿದೆ. ಇಲ್ಲಿ ಸಮ್ಮಿಶ್ರ ಸಂಸ್ಕೃತಿಯ ಪ್ರತೀಕವಾದ ಜಾನಪದ ಕಲೆಗಳನ್ನು ನಾವು ಕಾಣುತ್ತೇವೆ. ಕರ್ನಾಟಕದ ಇನ್ನಿತರ ಯಾವ ಭಾಗದಲ್ಲಿ ಕಾಣದ ವಿಶಿಷ್ಟಪೂರ್ಣಿಮ, ನಾಗರ ಪಂಚಮಿ ಉತ್ಸವ ಕಾಣುತ್ತೇವೆ. ಇದರಲ್ಲಿ ವಿಶೇಷವಾಗಿ ಭುಲಾಯಿ ಹಾಡುವ ಕಲೆ ಇಲ್ಲಿದೆ. ಆಚರಣೆ ಇಲ್ಲಿ ವಿಭಿನ್ನವಾಗಿ ಕಂಡು ಬರುತ್ತದೆ. ಉತ್ತರ ಕರ್ನಾಟಕದ ಎಲ್ಲಾ ಭಾಗದಲ್ಲಿ ಕಂಡಂತೆ ಇಲ್ಲಿನ ಶೀಗಿ ಆಚರಣೆ ತನ್ನದೇ ಆದ ವೈಶಿಷ್ಟ್ಯ ಧರಿ ಮತ್ತು ಗಡಿ ಬೀದರ ಜಿಲ್ಲೆ ಆಗಿರುವುದರಿಂದ ಆಂಧ್ರದ ಗಡಿ ಒಂದು ಕಡೆಯಾದರೆ ಮಹಾರಾಷ್ಟ್ರದ ಗಡಿ ಇನ್ನೊಂದು ಕಡೆ ಹೀಗಾಗಿ ಸಮ್ಮಿಶ್ರ ಸಂಸ್ಕೃತಿ ನಡುವಳಿಕೆ ಆಡು ಭಾಷೆ ಹಾಗೂ ಜಾನಪದ ಕಲೆಗಳ ತವರು ಎನ್ನಬಹುದು.

ಬೀದರ್‌ನಲ್ಲಿ ಅತೀ ಅಮೂಲ್ಯವಾದ ದೊಡ್ಡಾಟ, ಸಣ್ಣಾಟ ಕೋಲಾಟ, ಮುಂತಾದ ದೃಶ್ಯ, ಕಲೆಗಳನ್ನು ಕಾಣಬಹುದು. ನಾವು ಲಲಿತಕಲೆಗಳನ್ನು ಕಾಣಬಹುದು.

ರಾಜ್ಯದಲ್ಲಿ ಕೆಲವೊಂದು ಕಡೆ ಕಲಾ ಶಾಲೆಗಳನ್ನು ತೆರೆಯಲಾಯಿತು. ಅದರಿಂದ ಚಿತ್ರಕಲಾ ಶಿಕ್ಷಣ ಪಡೆಯಲು ಅನುಕೂಲವಾಯಿತು. ಇಲ್ಲಿ ಇಂದು ಅನೇಕ ಜನ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇಂದು ಬೀದರ್ ಜಿಲ್ಲೆ ಚಿತ್ರಕಲಾ ಶಿಕ್ಷಣದಿಂದ ಇಲ್ಲಿ ಕಲಾ ವಿದ್ಯಾರ್ಥಿಗಳಿಗೆ ಕಲಿಯಲಿಕ್ಕೆ ಪ್ರೋತ್ಸಾಹವಾಗಿವೆ. ಇಲ್ಲಿನ ಕಲಾ ಶಾಲೆಗಳು ತಮ್ಮದೆಯಾದ ಹೆಸರುಗಳ ಮೇಲೆ ಸ್ಥಾಪಿಸಲಾಗಿದೆ. ಇಂದಿನ ದಿನದಲ್ಲಿ ಬೀದರ ಜಿಲ್ಲೆಯಲ್ಲಿ ಐದು ತಾಲ್ಲೂಕುಗಳಲ್ಲೂ ಯೋಗೀಶ ಚಿತ್ರಕಲಾ ಮಹಾ ವಿದ್ಯಾಲಯ, ಬೀದರ್, ದಿ ನ್ಯಾಚುರಲ್ ಫೈನ್ ಆರ್ಟ್ಸ್, ಬೀದರ್, ಎಸ್.ಎಂ.ಪಂಡಿತ ಚಿತ್ರಕಲಾ ಮಹಾ ವಿದ್ಯಾಲಯ, ಬೀದರ್, ಡಾ.ಚನ್ನಬಸವ ಪಟ್ಟದೇವರು ಚಿತ್ರಕಲಾ ಮಹಾವಿದ್ಯಾಲಯ, ಭಾಲ್ಕಿ, ವೀರಭದ್ರೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಹುಮನ್ನಾಬಾದ, ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಬಸವಕಲ್ಯಾಣ, ಶುಭದ್ರಿತಿ ಚಿತ್ರಕಲಾ ಮಹಾವಿದ್ಯಾಲಯ, ಔರಾದಬಿ,

ಬೀದರ್ ಜಿಲ್ಲೆಯಲ್ಲಿ ಇತ್ತೀಚೆಗೆ ಪ್ರತಿಯೊಂದು ತಾಲ್ಲೂಕಿನಲ್ಲಿ ಕಲಾ ಶಾಲೆಗಳಿವೆ ಇಂದಿನ ದಿನಗಳಲ್ಲಿ ಚಿತ್ರಕಲೆ ಕಲೆಯುವ ವಿದ್ಯಾರ್ಥಿಗಳಿಗೆ ತುಂಬ ಪ್ರೋತ್ಸಾಹದಾಯಕವಾಗಿದೆ.

ಇಲ್ಲಿನ ಎಲ್ಲಾ ಕಲಾ ಶಾಲೆಗಳಲ್ಲಿ ತಮ್ಮ ತಮ್ಮ ಕ್ಷೇತ್ರದಲ್ಲಿ ಹಾಗೂ ಕಲೆಯಲ್ಲಿ ತಮ್ಮ ತಮ್ಮ ಕ್ರಿಯಾ ಶೀಲತೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಇಲ್ಲಿ ಇಂದಿನ ಕಲಾ ವಿದ್ಯಾರ್ಥಿಗಳು ಅನೇಕ ಕಲಾ ಶಿಬಿರಗಳನ್ನು ಏರ್ಪಡಿಸುತ್ತಿದ್ದಾರೆ. ಅನೇಕ ಕಲಾ ಪ್ರತಿಭೋತ್ಸವದಲ್ಲಿ ಭಾಗವಹಿಸುತ್ತಿದ್ದಾರೆ.

ಈ ಜಿಲ್ಲೆಯ ಚಿತ್ರಕಲಾವಿದರು ಚಿತ್ರಕಲೆಯಲ್ಲಿ ರಾಜ್ಯ ಮಟ್ಟದಲ್ಲಿ ಹಾಗೂ ರಾಷ್ಟ್ರ ಮಟ್ಟದಲ್ಲಿ ಕಲಾ ಪ್ರತಿಭೆಯಲ್ಲಿ ಭಾಗವಹಿಸುತ್ತಿದ್ದಾರೆ. ಇದೊಂದು ಹೆಮ್ಮೆಯ ಸಂಗತಿಯಾಗದೆ.

ಕರ್ನಾಟಕದ ಸಂಗೀತ ಪರಂಪರೆಯಲ್ಲಿ ಬೀದರ ಜಿಲ್ಲೆಗೆ ತನ್ನದೇ ಆದ ವಿಶಿಷ್ಟ ಪರಂಪರೆಯಿದೆ. ವಿವಿಧ ಪ್ರಕಾರದ ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ, ಜನಪದ ರಂಗಭೂಮಿ ಸಂಗೀತ ಕಲೆಯಲ್ಲಿ ಬೀದರ್ ಜಿಲ್ಲೆಯ ಕಲಾವಿದರಿಗೆ ರಾಜ್ಯ ಹಾಗೂ ರಾಷ್ಟ್ರಮಟ್ಟದ ಖ್ಯಾತಿಯುಂಟು.

ಭಾರತೀಯ ಸಂಗೀತದ ಇತಿಹಾಸದ ಪುಟಗಳಲ್ಲಿ ಬೀದರ ಜಿಲ್ಲೆಗೆ ಅತ್ಯಂತ ಮಹತ್ವದ ಸ್ಥಾನವಿದೆ. ಚಾಲುಕ್ಯ ಚಕ್ರವರ್ತಿ ಭೂಲೋಕಮಲ್ಲನಿಂದ ರಚಿಸಲ್ಪಟ್ಟ ಮಾನಸೋಲ್ಲಾಸ ಗ್ರಂಥ ಭಾರತೀಯ ಸಂಗೀತ ಪರಂಪರೆಯಲ್ಲಿ ಒಂದು ಮೈಲುಗಲ್ಲು. ಅದು ರಚನೆಯಾದುದ್ದು ಕಲ್ಯಾಣ ಅಂದರೆ, ಇಂದಿನ ಬಸವಕಲ್ಯಾಣ ಪಟ್ಟಣದಲ್ಲಿ ಎಂಬುದು ಗಮನಾರ್ಹ. ಅದರ ಕಾಲ ೧೧೧೬-೧೧೨೩. ಈ ಗ್ರಂಥಕ್ಕೆ ಅಭಿಲಷಿತಾರ್ಥ ಚಿಂತಾಮಣಿ ಎಂದು ಕರೆಯಲಾಗಿದೆ. ಸಂಗೀತ ಹಾಗೂ ಇತರ ಅನೇಕ ವಿಷಯಗಳ ವಿಸ್ತೃತ ಅಧ್ಯಯನ ಒಳಗೊಂಡಿರುವ ಈ ಗ್ರಂಥ ಸಂಗೀತದ ವಿಶ್ವಕೋಶವೆಂಬ ಹೆಗ್ಗಳಿಕೆ ಪಾತ್ರವಾಗಿದೆ.[೪]

ದಕ್ಷಿಣ ಕರ್ನಾಟಕದ ಸಂಗೀತಕ್ಕೆ ಕರ್ನಾಟಕ ಸಂಗೀತವೆಂಬ ಮೊಟ್ಟ ಮೊದಲ ಉಲ್ಲೇಖ ದೊರೆಯುವುದು. ತಬಲಾಕಲಾವಿದರು, ಸಿತಾರ್, ಕೊಳಲು, ಪಿಟೀಲು ಹಾರ್ಮೋನಿಯಂ ಮುಂತಾದ ಸಂಗೀತ ಕಲಾವಿದರು ಕಾಣಬಹುದು.

* * *

೪. ಡಾ.ಸೋಮನಾಥ ಯಾಳವಾರ, ಬೀದರ ಜಿಲ್ಲಾ ದರ್ಶನ, ಪುಟ-೩೦

ಅಧ್ಯಾಯ - ಮೂರು

# ಬೀದರ ಜಿಲ್ಲೆಯ ಜನಪದ ಚಿತ್ರಕಲೆ

ಬೀದರ ಜಿಲ್ಲೆಯಲ್ಲಿ ಚಿತ್ರಕಲೆ ಸಮೃದ್ಧವಾಗಿ ಬೆಳೆದಿದೆ. ಶೀಗಿ, ರಂಗೋಲಿ, ಹುಲಿಚಿತ್ರ, ಮದುವೆ, ಹುಣ್ಣಿಮೆಯಲ್ಲಿ ಬಳಸುವ ಚಿತ್ರ, ಸೆಗಣಿ ಗೊಂಬೆಗಳ ಚಿತ್ರಗಳು ಮತ್ತು ಚರ್ಮದ ಮೇಲೆ ರಚಿಸುವ ಚಿತ್ರಕಲೆಯಲ್ಲಿ ಹಚ್ಚೆ, ತೊಗಲುಗೊಂಬೆ, ಮಹೆಂದಿ ಈ ರೀತಿಯ ಚಿತ್ರಗಳನ್ನು ಜನಪದರು ರಚಿಸುತ್ತಾ ಬಂದಿದ್ದಾರೆ. ಅಲ್ಲದೆ ಬಟ್ಟೆಯ ಮೇಲೆರಚಿಸುವ ಕೌದಿ, ಕಸೂತಿ ನೇಯ್ಗೆಯ ಚಿತ್ರಕಲೆಯೂ ಹೆಚ್ಚಾಗಿ ಬೀದರ ಜಿಲ್ಲೆಯಲ್ಲಿ ಕಂಡುಬರುತ್ತದೆ.

ಈ ಮೇಲಿನ ಕಲೆಗಳಲ್ಲಿ ಮರೆಯಾಗುತಿರುವಂತಹ ಕಲೆಗಳೆಂದರೆ ಹಚ್ಚೆ, ತೊಗಲು ಗೊಂಬೆ, ನೇಯ್ಗೆ ಇನ್ನುಳಿದಂತೆ ಎಲ್ಲಾ ಕಲೆಗಳು ಹೊಸ ರೀತಿಯಲ್ಲಿ ಮುನ್ನಡೆಯುತ್ತಿರುವುದನ್ನು ಕಾಣುತ್ತೇವೆ. ಇವುಗಳ ಕುರಿತು ಸ್ಥೂಲವಾಗಿ ಇಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಜನಪದ ಎಂಬುದು ಇಂದು ನಾವು ಬಳಸುತ್ತಿರುವ ಅರ್ಥದಲ್ಲಿ ತನ್ನಿಂದ ತಾನೇ ಬೆಳೆದು ಬಂದುದಲ್ಲ. ಅದು ಮಾನವನು ಒಂದು ಕಡೆ ನೆಲೆ ನಿಂತು ತನ್ನ ಜೀವನವನ್ನು ಸಾಗಸುತ್ತ ಸಾಂಘಿಕ ಜೀವನವನ್ನು ಆರಂಭಿಸಿದ ನಂತರ ಎಲ್ಲಾರ ನಡವಳಿಕೆಗಳಲ್ಲಿನ ಸಾಮಾನ್ಯಅಂಶಗಳು ರೂಪುಗೊಂಡವೆ. ಜೀವನದ ಪ್ರತಿಯೊಂದು ಹಂತದಲ್ಲಿ ಜನಪದ ಕಲೆಯು ಮೂಡುತ್ತಾ ಬಂದಿದೆ. ಈ ಜನಪದ ಕಲೆಗಳು ಹುಟ್ಟಿದು ಜನಸಾಮಾನ್ಯರ ಅಂಗಳದಲ್ಲಿ ಅವುಗಳಿಗೆ ಯಾವುದೇ ಅರಮನೆಗಳು ಗುರುಕುಲಗಳು ಆಶ್ರಯ ನೀಡಿಲ್ಲ.ಇದನ್ನೂ ಕಲಿತು ತಮ್ಮ ಅಂಗಳದಲ್ಲಿ ಆಡುತ್ತಾ ಬೆಳಕಿಗೆ ಬಂದಿರುವ ಕಲೆಯಾಗಿರುತ್ತದೆ.

ಈ ಪ್ರದರ್ಶಕ ಜನಪದ ಕಲೆಗಳು ಯಾವಾಗಹುಟ್ಟಿಕೊಂಡವು ಮತ್ತು ಎಲ್ಲಿ ಹುಟ್ಟಿಕೊಂಡವು ಎಂದು ಹೇಳುವದು ಕಷ್ಟ ಆದರೆ ಅವುಗಳ ಹಿನ್ನೆಲೆಯನ್ನು ಅಷ್ಟು ಸುಲಭವಾಗಿ ಗುರುತಿಸಲು ಸಾಧ್ಯವಿಲ್ಲ. ಈ ಕಲೆಗಳಲ್ಲಿ ಸಮಷ್ಠಿ ಸ್ವರೂಪದವು ಜನಪದರೆ ತಮ್ಮ ಆನಂದಕ್ಕಾಗಿ, ಉಲ್ಲಾಸಕ್ಕಾಗಿ ಅವುಗಳನ್ನು ಸೃಷ್ಠಿ

ಮಾಡಿಕೊಂಡರು ಅಲ್ಲದೇ ಬಹುಮಟ್ಟಿನ ಎಲ್ಲಾ ಕಲೆಗಳು ತಲೆಮಾರಿನಿಂದ ತಲೆಮಾರಿಗೆ ಸಾಗಿಸಿಕೊಂಡು ಬಂದವರು ಜನಪದರೆ ಎನ್ನಬಹುದು. ಜನಪದ ಚಿತ್ರಕಲೆಯು ದುಡಿಮೆಯ ವೇಳೆಯಲ್ಲಿ ಹುಟ್ಟಿಕೊಂಡಿರುವವು.

ಜನಪದ ಚಿತ್ರಕಲೆಯಲ್ಲಿ ಹೆಣ್ಣುಮಕ್ಕಳ ಪ್ರಧಾನ ಕಲೆಯಲ್ಲಿ ಲೀನವಾಗಿರುವುದು ತಿಳಿದು ಬರುತ್ತದೆ. ಉದಾ:- ಹಚ್ಚೆ, ಮಹಂದಿ, ರಂಗೋಲಿ ಇತ್ಯಾದಿ.

ಜನಪದ ಚಿತ್ರಕಲೆಯ ಮುಖ್ಯ ಲಕ್ಷಣಗಳು ಸಂಪ್ರದಾಯ ನಂಬಿಕೆ, ಧರ್ಮ ಆಚರಣೆಯ ಹಿನ್ನೆಲೆಯಲ್ಲಿ ಮೂರ್ತ ರೂಪಕ್ಕೆ ತಿರುಗಿದೆ. ಜನಪದ ಚಿತ್ರಕಲೆಯಲ್ಲಿ ವರ್ಣಗಾರಿಕೆಯು ಅತ್ಯಂತ ಮಹತ್ವವಾದ್ದುದ್ದಾಗಿದೆ. ಆದರೆ ಜನಪದರ ತೆರೆದ ಬದುಕಿನಂತೆ ಅವರ ಚಿತ್ರರಚನೆಯ ಮೂಲ ವಿಷಯಗಳಾಗಿವೆ.

ಜನಪದರು ತಮ್ಮ ಸುತ್ತಮುತ್ತಲಿನ ನೈಸರ್ಗಿಕ ವಸ್ತುಗಳಾದ ಕಲ್ಲು, ಮಣ್ಣು, ಹೂ, ಎಲೆ, ಮುಂತಾದ ವಸ್ತುಗಳಿಂದ ಬಣ್ಣವನ್ನು ತಯಾರಿಸಿಕೊಳ್ಳುತ್ತಾರೆ.

ಇದೇ ರೀತಿಯಾಗಿ ಬೀದರ ಜಿಲ್ಲೆಯಲ್ಲಿ ಜನಪದ ಚಿತ್ರಕಲೆಯಲ್ಲಿಯೂ ಸಹ ಈ ಅಂಶಗಳು ಅಡಗಿದ್ದು ಇವುಗಳಲ್ಲಿ ಪ್ರಮುಖವಾಗಿ ನಾಲ್ಕು ಭಾಗಗಳನ್ನಾಗಿ ವಿಂಗಡಣೆ ಮಾಡಲಾಗಿದೆ.

ಜನಪದ ಚಿತ್ರಕಲೆ

**I.** ನೆಲಗೋಡೆಯ ಮೇಲಿನ ಜನಪದ ಚಿತ್ರಕಲೆ

**II.** ಚರ್ಮದ ಮೇಲೆ ರಚಿಸುವ ಜನಪದ ಚಿತ್ರಕಲೆ

**III.** ಬಟ್ಟೆಯ ಮೇಲೆ ರಚಿಸುವ ಜನಪದ ಚಿತ್ರಕಲೆ

**IV.** ಸಂಕೀರ್ಣ ಮಾಧ್ಯಮದ ಜನಪದ ಚಿತ್ರಕಲೆ

**I.** ನೆಲಗೋಡೆಯ ಮೇಲೆ ರಚಿಸುವ ಚಿತ್ರಕಲೆ

೧.೧. ಶೀಗಿಚಿತ್ರಕಲೆ

೧.೨. ರಂಗೋಲಿ ಚಿತ್ರಕಲೆ

೧.೩. ಮುಸ್ಲಿಂ ದರ್ಗಾದ ಮೇಲೆ ಹುಲಿಚಿತ್ರಗಳು

೧.೪. ಸೆಗಣಿಗೊಂಬೆಯ ಚಿತ್ರಗಳು

**II.** ಚರ್ಮದ ಮೇಲೆ ರಚಿಸುವ ಜನಪದ ಚಿತ್ರಕಲೆ

೨.೧. ಹಚ್ಚೆ ಚಿತ್ರಕಲೆ

೨.೨. ತೊಗಲುಗೊಂಬೆ ಚಿತ್ರಕಲೆ

೨.೩. ಮೆಹಂದಿ ಚಿತ್ರಕಲೆ

**III.** ಬಟ್ಟೆಯ ಮೇಲೆ ರಚಿಸುವ ಚಿತ್ರಕಲೆ

೩.೧. ಕೌದಿ ಚಿತ್ರಕಲೆ

೩.೨. ಕಸೂತಿ ಚಿತ್ರಕಲೆ

## I. ನೆಲಗೋಡೆಯ ಮೇಲೆ ರಚಿಸುವ ಚಿತ್ರಕಲೆ

### ೧.೧. ಶೀಗಿ ಚಿತ್ರಕಲೆ

ಪ್ರಪಂಚದಲ್ಲಿ ಯಾವುದೇ ಸಂಸ್ಕೃತಿಯು ಆದಿಮಾನವನ ಕಾಲದಿಂದ ಬಂದಿರುವುದನ್ನು ಕಾಣುತ್ತೇವೆ. ನಾವು ವಿವಿಧ ಗುಹೆಗಳ ಬಂಡೆಗಳ ಮೇಲೆ ಚಿತ್ರಗಳನ್ನು ಬಿಡಿಸುವುದನ್ನು ಇಂದಿಗೂ ನೋಡಬಹುದು. ಇದರ ಜೊತೆ ಜೊತೆಯಲ್ಲಿ ಬೆಳೆದು ಬಂದಿರುವ ಜನಪದ ಸಂಸ್ಕೃತಿಯಿಂದ ಆಚಾರ ವಿಚಾರ ರೀತಿ ನೀತಿ ಧರ್ಮ ಆಚರಣೆ, ವಿವಿಧ ಕ್ರಿಯೆಗೂ ಮಾತ್ರವಲ್ಲದೆ ಅವುಗಳನ್ನು ಅನುಸರಿಸಿಕೊಂಡು ಬೆಳೆದು ಬಂದ ಹಲವಾರು ಕಲೆಗಳನ್ನು ಕಾಣುತ್ತೇವೆ. ಅಗೋಚರ ಕಾಲದಲ್ಲಿ ಬೆಳೆದು ಬಂದಿರಬಹುದಾದ ಈ ಜನಪದ ಕಲೆಗೂ ಆಯಾ ಪರಿಸರದ ಸಂಸ್ಕೃತಿಯ ಜನರ ಬದುಕಿನ ಆತ್ಮವಾಗಿ ಜೀವಂತ ಅಸ್ತಿತ್ವವನ್ನು ಪಡೆದಿರುವುದಲ್ಲದೆ ಅವು ಜನಪದರ ಜೀವನ ಬದುಕಿನೊಡನೆ ಅರ್ಥಪೂರ್ಣ ಸಂಬಂಧವನ್ನು ಹೊಂದಿದೆ. ಹೀಗೆ ಜನಪದ ಕಲೆಗಳ ಸ್ವರೂಪ ಸಂದರ್ಭ, ಆಚರಣಾ ವಿಧಾನ ಮುಂತಾದ ಅಂಶಗಳ ಹಿನ್ನಲೆಯಲ್ಲಿ ಧರ್ಮಮೂಲ, ವೃತ್ತಿಮೂಲ ಮತ್ತು ಸೌಂದರ್ಯಮೂಲ ಜನಪದ ಕಲೆಗಳಿಂದ ವಿಂಗಡಿಸಲಾಗಿದೆ.

ಇವುಗಳಲ್ಲಿ ಹಾಡುಗಳ ಕುಣಿತ, ಅಭಿನಯದ ವಾದ್ಯ ನುಡಿಸುವುದು, ಚಿತ್ರ ಬರೆಯುವುದು, ಶಿಲ್ಪ ರಚಿಸುವುದು ಮುಂತಾದ ಕಲೆಗಳಿದ್ದು ಜನಪದ ಕಲೆಗಳು ತಮ್ಮದೇ ಆದ ಮಹತ್ವದ್ದಾಗಿದೆ. ಜನಪದ ಚಿತ್ರಕ್ಕೂ ಪರಂಪರೆ ವ್ಯಾಪ್ತಿ ಬಹಳ ದೊಡ್ಡದಾಗಿದ್ದರಿಂದ ಅದರಲ್ಲಿ ಹಲವಾರು ಕಲಾ ಪ್ರಕಾರಗಳನ್ನು ಕಾಣುತ್ತೇವೆ. ಗೋಡೆಯ ಮೇಲೆ, ಬಂಡೆಯ ಮೇಲೆ ಮತ್ತು ಬುಟ್ಟಿಯ ಮೇಲೆ ಚಿತ್ರಿಸುವುದು ತಾವು ಉಪಯೋಗಿಸುವಂತ ವಸ್ತುಗಳ ಮೇಲೆ ಚಿತ್ರಿಸುವುದು ಹೀಗೆ ಹಲವು ವಿವಿಧ ಮಾಧ್ಯಮದಿಂದ ಪರಿಕರಗಳು, ಸಾಮಗ್ರಿ, ಉಪಕರಣ, ಬೇರೆ ಬೇರೆ ಸಂದರ್ಭದ ಆಚರಣೆಗಳ ಹಿನ್ನಲೆಯಲ್ಲಿ ಜನಪದರು ಚಿತ್ರ ರಚನೆ ಮಾಡುವುದು ನಾವು ಇವತ್ತಿಗೂ ಕಾಣುತ್ತೇವೆ.[೧] ಕರ್ನಾಟಕದ ಆಚರಣೆಯಲ್ಲಿ ಹೆಚ್ಚಿನ ಜನಪದ ಆಚರಣೆಗಳಲ್ಲಿ ಚಿತ್ರ ರಚನೆ ಮಾಡಲಾಗುತ್ತದೆ. ಮಲೆನಾಡು ಮತ್ತು ಕರಾವಳಿ ಪ್ರದೇಶದಲ್ಲಿ ಹಸೆ ಚಿತ್ರಗಳು ಬರೆಯುವುದು, ನಾಗರಾಧನೆಯಲ್ಲಿ ನಾಗಮಂಡಲ ಬರೆಯುವುದು, ಬಯಲು ಸೀಮೆಯಲ್ಲಿ ಬೆಳದಿಂಗಳ ಚಿತ್ರ ರಚನೆ ಬರೆಯುವುದು ವಿಶೇಷವಾಗಿ ಕಂಡು ಬರುತ್ತದೆ.

ಜನಪದ ರಚನೆಯಲ್ಲಿ ಹಲವು ರೀತಿಗಳಲ್ಲಿ ಶೀಗಿ ಹುಣ್ಣಿಮೆಯ ಚಿತ್ರ ರಚನೆಯಲ್ಲಿ ಒಂದಾದ, ಶೀಗಿ ಚಿತ್ರಕಲೆ ಬಗ್ಗೆ ಸ್ಥೂಲವಾಗಿ ಗಮನಿಸಲಾಗಿದೆ. ಶೀಗಿ ಚಿತ್ರಕಲೆ ಎಂದರೆ ಸೀಗೆ ಹುಣ್ಣಿಮೆಯ ಸಂದರ್ಭದಲ್ಲಿ ಚಿತ್ರ ಬರೆಯುವುದಾಗಿ ಶೀಗಿ ಸಂಸ್ಕೃತದ ಶಿಖಾಶಬ್ದದ ತದ್ಭವವಾಗಿದೆ ಎಂದು, ಅದು ಶಿಖರ, ಶಿಖ, ಶೀಗಿ ಆಗಿ ಪರಿವರ್ತನೆಯಾಗಿದೆ ಎಂಬ ಅಭಿಪ್ರಾಯವಿದೆ ಎಂದು ಹೇಳುತ್ತಾರೆ. ಸಂಪ್ರದಾಯ ನಂಬಿಕೆ, ಧರ್ಮದ ಆಚರಣೆಯ ಹಿನ್ನಲೆಯಲ್ಲಿ ಜನಪದರಲ್ಲಿ ಮೂರ್ತಸ್ವರೂಪಕ್ಕೆ ತಿರುಗಿ ಬಂದಿರದೆ ಜನಪದ ಕಲೆ ಶಾಸ್ತ್ರೋಕ್ತವಾದ ಕಲೆಯನ್ನು ಒಳಗೊಂಡು ಕಲೆಗಾಗಿ ಕಲೆ, ಆನಂದಕ್ಕಾಗಿ, ಪ್ರವೃತಿಗಾಗಿ ಕಲೆ ಎಂಬುದು

---

೧. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೨೧

ಶಿಷ್ಟ ಪದ ಚಿತ್ರಕಲೆಯ ಲಕ್ಷಣವಾಗಿರದೆ ಬದುಕಿನ ಜೀವನಕ್ಕಾಗಿ ಕಲೆ, ಎಂದು ಜನಪದ ಚಿತ್ರಕಲೆಯಲ್ಲಿ ಕಾಣಬೇಕು. ಹೀಗೆ ಸಾಮಾಜಿಕ ಜೀವನದ ಒಳಮನಸ್ಸಿನ ಒಳರಕ್ತಗಳ ಮಾಂಸಗಳನ್ನು ಕಣ್ಣಿಗೆ ಕಾಣಲಾಗದ ಅಮೂರ್ತ ಕಲ್ಪನೆ ಮೂಲಕ ಮಾಡುವ ಸಾಮರ್ಥ್ಯವು ಜನಪದ ಚಿತ್ರಕಲೆಯಾಗಿದೆ.

ದಪ್ಪವಾದ ರೇಖೆಗಳು ಜನಪದ ಚಿತ್ರಕಲೆಯ ಜೀವಾಳವಾಗಿದ್ದು, ದಿನನಿತ್ಯ ಬದುಕಿನ ವಿವರಗಳು ಚಿತ್ರ ಬಿಡಿಸುವ ವಿಷಯಗಳಾಗಿವೆ. ಇದರಲ್ಲಿ ಕೆಂಪು, ಕಪ್ಪು, ಹಳದಿ, ಬಿಳಿ, ನಸುಕೆಂಪು, ಹಸಿರು, ಜಾಂಬಳಿ ಮುಂತಾದ ಪ್ರಮುಖ ಬಣ್ಣಗಳನ್ನು ಜನಪದ ಚಿತ್ರಕಲೆಯಲ್ಲಿ ಗುರುತಿಸಬಹುದಾಗಿದ್ದು. ಈ ವಿಧದ ರೀತಿಯಲ್ಲಿ ಈ ಲಕ್ಷಣಗಳು ಶೀಗಿ ಚಿತ್ರಕಲೆಯ ಮೂಲಕ ಅವರ ಚಿತ್ರ ರಚನೆಯ ರೇಖೆಯು ಕಂಡು ಬರುತ್ತದೆ. ಬೀದರ್ ಜಿಲ್ಲೆಯ ಭಾಗದಲ್ಲಿ ಮನೆಯ ಹೊರಗೋಡೆಯ ಮೇಲೆ ಶೀಗಿ ಚಿತ್ರಿಸಿದರೆ ಬಾಗಲಕೋಟೆ, ವಿಜಾಪುರ, ಬೆಳಗಾಂ, ಧಾರವಾಡ ಭಾಗಗಳಲ್ಲಿ ಮನೆಯ ಒಳ ಗೋಡೆಯಲ್ಲಿ ಚಿತ್ರ ಬಿಡಸುತ್ತಾರೆ.

ಬೀದರ್ ಜಿಲ್ಲೆಯಲ್ಲಿ ಹೊರಗೋಡೆಯ ಮೇಲೆ ಶೀಗಿ ಆಚರಣೆ. ಬೀದರ್ ಜಿಲ್ಲೆ ಐದು ತಾಲ್ಲೂಕುಗಳಲ್ಲಿ ಒಂದೇ ರೀತಿಯಾಗಿ ಶೀಗಿ ಆಚರಣೆಯನ್ನು ನಾವು ಕಾಣುತ್ತೇವೆ. ಶೀಗಿ ಹಾಡುವುದು ಪ್ರತಿವರ್ಷದಂತೆ ವಿಜಯದಶಮಿಯ ಮಹಾನವಮಿಯ ದಿನದಂದು, ದಸರಾ ಮೊದಲನೆ ಮಹಾನವಮಿ ದಿನದಿಂದ ಹಿಡಿದು ಅಂದಿನಿಂದ ಪ್ರಾರಂಭಿಸಿ ಶೀಗಿ ಹುಣ್ಣಿಮೆ ತನಕ ಶೀಗಿ ಹಾಡು ಹಾಡುವುದು ಮಹಾನವಮಿ ದಿನದಂದು ಸಂಜೆಯ ರಾತ್ರಿ ೭.೩೦ರಿಂದ ೯ ಗಂಟೆ ತನಕ ಶೀಗಿ ಚಿತ್ರ ಸಗಣಿಯಿಂದ ಚಿತ್ರ ಬಿಡಿಸುವುದರ ಜೊತೆಗೆ ಶೀಗಿ ಹಾಡುಗಳನ್ನು ಹಾಡುವುದನ್ನು ಕಾಣುತ್ತೇವೆ. ಹೀಗೆ ಪ್ರಾರಂಭದಿಂದ ಹಿಡಿದು ಶೀಗಿ ಹುಣ್ಣಿಮೆ ತನಕ ಸುಮಾರು ರಾತ್ರಿ ವೇಳೆಯಲ್ಲಿ ಸಗಣಿಯಿಂದ ಶೀಗಿ ಚಿತ್ರ ಬಿಡಿಸುತ್ತಾರೆ. ಹುಣ್ಣಿಮೆಯ ಮೊದಲನೆ ದಿನದಿಂದ ಹುಣ್ಣಿಮೆಯ ಕೊನೆಯ ದಿನವರೆಗೆ ಆರು ದಿನಗಳವರೆಗೆ ಬಿಡಿಸುತ್ತಾರೆ. ಹೀಗೆ ಬೀದರ್ ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಒಂದೇ ರೀತಿಯ ಶೀಗಿ ಚಿತ್ರಗಳನ್ನು ಬಿಡಿಸುವುದು ಶೀಗಿ ಹಾಡುಗಳು ಗಂಗೆ ಗೌರಿಯ ಕುರಿತು ವಿವಿಧ ರೀತಿಯ ಹಾಡುಗಳನ್ನು ಹಾಡುವುದು ಹೀಗೆ ಶಿವ ಹಾಗೂ ಅವನ ಅರ್ಧಾಂಗಿಯಾದ ಗಂಗೇ ಗೌರಿಯನ್ನು ಕುರಿತು ಸ್ಮರಿಸುವ, ಹೊಗಳುವ, ಹಾಡುವ, ಭವ್ಯ ಪರಂಪರೆಯು ಶೀಗಿ ಆಗಿದೆ.

ಬೀದರ್ ಜಿಲ್ಲೆಯಲ್ಲಿ ತನ್ನದೇ ಆದ ಒಂದು ವಿಶಿಷ್ಟವಾದ ಪರಂಪರೆ ಹೊಂದಿದ ಕಲೆ. ಶೀಗಿ ಚಿತ್ರಕಲೆ ಒಂದಾಗಿದೆ ಇಲ್ಲಿ ಶೀಗಿ ಹುಣ್ಣಿಮೆಯಲ್ಲಿ ಶೀಗಿ ಆಚರಿಸುವ ಹಾಗೂ ಚಿತ್ರ ಬಿಡಿಸುವ ಹಿನ್ನಲೆಯ ಇಲ್ಲಿಯ ಜನಪದರ ಒಂದು ನಂಬಿಕೆಯಾಗಿದೆ. ಇದು ಶೀಗಿ ಹುಣ್ಣಿಮೆ ಬರುವುದು ವರ್ಷಕ್ಕೆ ಒಂದು ಸಾರಿ ಬರುತ್ತದೆ. ಇಡೀ ಒಂದು ವರ್ಷದ ಕೆಲಸದ ವೇಳೆಯಲ್ಲಿ ಕಾಲ ಕಳೆಯುತ್ತ ಶೀಗಿ ಆಚರಣೆಯೊಂದಿಗೆ ನೆಮ್ಮದಿಯ ಬಾಳು ಸಾಗಬೇಕು. ನಮ್ಮ ಹಿಂದಿನವರು ಪಾರಂಪರಿಕವಾಗಿ ನಡೆದುಕೊಂಡು ಬರುತ್ತಿದ್ದು ಭೂಮಿ, ಸೂರ್ಯ, ಚಂದ್ರ, ಗ್ರಹಗಳನ್ನು ದೇವರೆಂದು ಪೂಜಿಸುತ್ತಿದ್ದರು. ಹೀಗೆ ಶೀಗಿ ಹುಣ್ಣಿಮೆಯಲ್ಲಿ ಶೀಗಿ ಚಿತ್ರ ಬಿಡಿಸುವುದು ಪವಿತ್ರವಾದ ಆಕಳ ಸಗಣಿಯಿಂದ ಸೂರ್ಯ, ಚಂದ್ರ, ಗಂಗೆ ಗೌರಿ ಮುಂತಾದ ವಿಷಯ ವಸ್ತುಗಳನ್ನು ಚಿತ್ರಿಸಿ ತಮ್ಮ ಅನಿಸಿಕೆಯ ಪ್ರಕಾರ ಗಂಗೆ, ಗೌರಿ, ಸೂರ್ಯ, ಚಂದ್ರ ಇತ್ಯಾದಿ ದೇವತೆಗಳ

ಮೇಲೆ ಹಾಡುಗಳನ್ನು ಹಾಡುತ್ತಿದ್ದರು.ಇದು ವಂಶ ಪಾರಂಪರಿಕವಾಗಿರುವುದನ್ನು ಕಾಣುತ್ತೇವೆ. ಹೀಗಾಗಿ ಅವರ ನಡೆ, ನುಡಿ, ಸಂಸ್ಕೃತಿ ಅನುಸಾರವಾಗಿ ಬೆಳೆದು ಬಂದಿದೆ.

**ಶೀಗಿ ಪದಬಳಕೆ**

ಬೀದರ್ ಜಿಲ್ಲೆಯ ಆಡು ನುಡಿಯಲ್ಲಿ ಶೀಗಿ ಪದಕ್ಕೆ ಶೀಗಿ, ಶೀಗೆ, ಶಿವಿಗಿ ಮುಂತಾದ ರೀತಿಯಲ್ಲಿ ಬಳಸುತ್ತಾರೆ. ಇಲ್ಲಿ ದವಸ, ಧಾನ್ಯಗಳು, ಹಾಲು, ತುಪ್ಪ, ನೀರು ಮುಂತಾದ ಪದಾರ್ಥಗಳನ್ನು ಅಳೆಯುವಾಗ ಅಥವಾ ಪಾತ್ರ ಪಗಡಿಗಳಲ್ಲಿ ತುಂಬಿಡುವಾಗ ಶೀಗಿ ಶೀಗೆ ಅಳತೆ ಅಟು ತುಂಬಿ ಛೆಲ್ಲೂಹಂಗ ಥುಂಬ್ಯಾಕ್ಯಾನು ಮ್ಯಾಲ ಕೊಡುದಾ ಎಂದು ಬೀದರ್ ಜಿಲ್ಲೆಯ ಭಾಗದಲ್ಲಿ ಶೀಗಿ ಅಂದರೆ ತುಂಬಿ ಚೆಲ್ಲುವಂತೆ ಎಂಬ ಅರ್ಥವನ್ನು ಇಲ್ಲಿ ಕಾಣುತ್ತೇವೆ.

ಡಾ.ರಾಜೇಂದ್ರ ಅವರು ಬರೆದಿರುವ ಪುಸ್ತಕದಲ್ಲಿ ಶೀಗಿ ಹಾಡುಗಳನ್ನು ಕಾಣುತ್ತೇವೆ. ಹೀಗೆ ನಾವು ಇಲ್ಲಿ ಶೀಗಿ ಚಿತ್ರಕಲೆಯಲ್ಲಿ ಎರಡು ರೀತಿಯ ವರ್ಗೀಕರಣ ಕಾಣುತ್ತೇವೆ.

೧. ಮೊದಲನೆದಾಗಿ ಶೀಗಿ ಚಿತ್ರ ರಚನೆಯಲ್ಲಿ ಸಗಣಿಯಿಂದ ಬಿಡಿಸುವ ಚಿತ್ರ ಮತ್ತು ಉಬ್ಬು ಶಿಲ್ಪ ರೂಪದಲ್ಲಿ ಕಾಣುತ್ತೇವೆ.ಎರಡನೆಯದಾಗಿ ರೇಖೆಯ ಮೂಲ ಬಿಡಿಸುವ ಚಿತ್ರವರ್ಣ ರೂಪದಲ್ಲಿ ಕಾಣುತ್ತೇವೆ.

**೧.೧.೧. ಶೀಗಿ ಚಿತ್ರ ರೇಖೆಯಲ್ಲಿ ಉಬ್ಬುಶಿಲ್ಪ**

ಬೀದರ್ ಜಿಲ್ಲೆಯಲ್ಲಿ ಹೊರಗೋಡೆಯ ಮೇಲೆ ಶೀಗಿ ಚಿತ್ರಕಲೆಯು ವಿಭಿನ್ನವಾದ ವಿಶಿಷ್ಟವಾದ ಸ್ವರೂಪ ಪಡೆದುಕೊಂಡಿದೆ. ಹೆಣ್ಣು ಮಕ್ಕಳು ಸಗಣಿಯಲ್ಲಿ ಚಿತ್ರಿಸುವ ಶೀಗಿಚಿತ್ರವು ಉಬ್ಬು ಶಿಲ್ಪರೂಪದಲ್ಲಿ ಇರುತ್ತದೆ. ಈ ರೀತಿಯ ಉಬ್ಬು ಶಿಲ್ಪ ರೂಪದಿಂದ ಕೂಡಿರುವ ಶೀಗಿ ಚಿತ್ರ ದಿನದಿಂದ ಹಿಡಿದು ಶೀಗಿ ಹುಣ್ಣಿಮೆ ಮೊದಲ ದಿನದವರೆಗೆ ಇರುತ್ತದೆ. ಸಗಣೆಯಿಂದ ರಚಿಸಿದ ಶೀಗಿ ಚಿತ್ರ ವಿಶಿಷ್ಟವಾಗಿದ್ದು ಮಹಾನವಮಿ ಉಬ್ಬು ಶಿಲ್ಪ ಕಲೆಯನ್ನು ಕಾಣುತ್ತೇವೆ.

ಈ ಉಬ್ಬು ಶಿಲ್ಪ ರಚನೆಯ ವಿಷಯಕ್ಕೆ ತಕ್ಕಂತೆ ಸಗಣಿಯಿಂದ ಗೋಡೆಯ ಮೇಲೆ ಶೀಗಿ ಚಿತ್ರ ಬಿಡಿಸುವವರಿಗೆ ಯಾವ ತರಹದ ಪ್ರಮಾಣಬದ್ಧ ಅಳತೆ ಇರುವುದಿಲ್ಲ ಸರಳವಾಗಿ ಯಾವುದೇ ತರಹದ ಚೌಕಟ್ಟು ಇರಲಾರದೆ ವಸ್ತು ವಿಷಯಗಳ ಆಧಾರದ ಮೇಲೆ ಉಬ್ಬುಶಿಲ್ಪ ರೇಖೆಯ ಮೂಲಕ ಚಿತ್ರವನ್ನು ಬಿಡಿಸುವರು. ಅಂದರೆ ಹುಣ್ಣಿಮೆಯ ಆರು ದಿನಗಳು ಗೋಡೆಯ ಮೇಲೆ ಆಕಳ ಸಗಣಿಯಿಂದ ಉಬ್ಬು ಶಿಲ್ಪ ಚಿತ್ರರಚನೆ ವಿನ್ಯಾಸಗಳನ್ನು ರಚಿಸಿ ಅದಕ್ಕೆ ಹೂಗಳನ್ನು ಹಚ್ಚಿ ಅಲಂಕರಿಸುತ್ತಾರೆ. ಈ ಸಗಣಿಯ ವಿನ್ಯಾಸದಲ್ಲಿ ಚಿತ್ರಿಸಿದ ಉಬ್ಬು ಶಿಲ್ಪಕಲೆ ರಚಿಸುವುದು ಜನಪದರ ಕಲೆಯಾದ ಶೀಗಿ ಚಿತ್ರರಚನೆ ಮಾಡುವುದು, ಒಂದು ಆಕರ್ಷಕ ಬಿಂಬ ರೂಪದಲ್ಲಿ ಕಾಣುವಂತಾಗಿದೆ.

**೧.೧.೨. ಬಣ್ಣಗಳಿಂದ ಚಿತ್ರ ಬರೆಯುವ ವಿಧಾನ**

ಮೊದಲು ಆರು ದಿನಗಳ ಸಾಯಂಕಾಲ ಶೀಗಿ ಚಿತ್ರಗಳನ್ನು ಬಿಡಿಸಿದರೆ ಏಳನೆಯ ದಿನದಂದು ಅಂದರೆ ಹುಣ್ಣಿಮೆಯ ದಿನ ಮುಂಜಾನೆ ಹತ್ತು ಗಂಟೆಗೆ ಹೊರಗೋಡೆಯ ಮೇಲೆ ಸಗಣಿಯ ಚಿತ್ರ ಬಿಡಿಸಿದ ಜಾಗದಲ್ಲಿ ಸುಣ್ಣದಿಂದ ಸಾರಿಸಿ ಅದರ ಮೇಲೆ ಹಗಲು ಹೊತ್ತಿನಲ್ಲಿ ಬಣ್ಣದಿಂದ ಚಿತ್ರಗಳನ್ನು ಬಿಡಿಸುತ್ತಾರೆ.

ಇಲ್ಲಿಯೂ ಮೊದಲು ಸಿದ್ಧಮಾಡಿಕೊಂಡಿರುವ ಗೋಡೆಯ ಮೇಲೆ ಗೌರಿ ಮಕ್ಕಳು ಹಾಡು ಹೇಳುವ ಸಂದರ್ಭದಲ್ಲಿ ಚಿತ್ರಬರೆಯಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಹೊಸಬಣ್ಣಗಳಿಂದ ಚಿತ್ರರಚನೆ ಮಾಡುವುದನ್ನು ನಾವು ಕಾಣುತ್ತೇವೆ. ಹಿಂದಿನ ದಿನಗಳಲ್ಲಿ ಹಿರಿಯರಿಗೆ ಕೇಳಿದಾಗ ತಮ್ಮ ಸ್ವಂತ ಕೈಯಿಂದ ಬಣ್ಣ ತಯಾರಿಸಿ ಶೀಗಿ ಚಿತ್ರ ರಚನೆ ಮಾಡುತ್ತಿದ್ದೆವು ಎಂದು ಹೇಳುತ್ತಾರೆ.

ಅವರು ಮೊದಲು ಬಳಸುತ್ತಿರುವ ಬಣ್ಣಗಳೆಂದರೆ ಹುರಿಮಂಜಿನಿಂದ ಕೆಂಪುಬಣ್ಣ ವಿವಿಧ ಸಸ್ಯಗಳ ಎಲೆಗಳ ಮೂಲಕ ತಮಗೆ ಬೇಕಾದ ಬಣ್ಣಗಳನ್ನು ತಾವೇ ತಯಾರಿಸಿಕೊಂಡು ತಯಾರಿಸಿದ ಬಣ್ಣಗಳನ್ನು ತೆಂಗಿನಚಿಪ್ಪು, ಮಣ್ಣಿನ ಮುಚ್ಚಳದಲ್ಲಿ ಕಲಿಸಿಕೊಂಡು ಯಾವುದಾದರೂ ಕಟ್ಟಿಗೆಯ ತುಂಡನ್ನು ಬಳಸಿಕೊಂಡು ತುದಿಗೆ ಹತ್ತಿಸುತ್ತಿ ತಾವೇ ಕುಂಚ ತಯಾರಿಸಿಕೊಂಡು ಚಿತ್ರಗಳನ್ನು ಬಿಡಿಸುತ್ತಿದ್ದರು. ಕೆಲವರು ಸುಮ್ಮನೆ ಕೈಬೆರಳಿನಿಂದ ಶೀಗಿ ಚಿತ್ರಬಿಡಿಸುತ್ತಾರೆಂದು ಹೇಳುತ್ತಾರೆ. ಇಂದಿನ ದಿನಗಳಲ್ಲಿ ಬಣ್ಣಗಳ ಬಳಕೆಯು ಬಂದಿದ್ದು, ವಿಧ ವಿಧವಾದ ಬಣ್ಣಗಳಲ್ಲಿ ಶೀಗಿ ಚಿತ್ರ ರಚನೆ ಮಾಡುವುದನ್ನು ನೋಡುತ್ತೇವೆ.

೧.೧.೩. ವಸ್ತುವಿಷಯಗಳು

ಶೀಗಿ ಚಿತ್ರಕಲೆಯಲ್ಲಿ ವಸ್ತು ವಿನ್ಯಾಸಗಳ ನಂಬಿಕೆ, ಶೀಗಿ ಹಾಡುವವರು ಹಾಡುವ ಪರಿಕರಗಳು ಮೊದಲು ಹೇಳಿದಂತೆ ಇಲ್ಲಿ ಮೊದಲೊಬ್ಬಳು ಅವಳ ಮನೆಯ ಬಾಗಿಲು ಮುಂದೆ ಗಿಡ ಅಥವಾ ಬಲಗಡೆ ಸಗಣಿಯಿಂದ ತೆಗೆಯಬೇಕಾದ ವಿನ್ಯಾಸ ವಸ್ತು ವಿಷಯಗಳನ್ನು ತೆಗೆದು ಅಕ್ಕ ಪಕ್ಕ ಮನೆಯ ರಮಣೀಯರನ್ನು ಶೀಗಿ ಬಡಿದಿದ್ದ ತಮ್ಮ ಓಣಿಯ ಸೋದರಿಯರಿಗೆ ನಮ್ಮಲ್ಲಿ ಮೊದಲು ಶೀಗಿ ಹಾಡುವುದಕ್ಕೆ ನಡೆಯಿರಿ ಎಂದು ಹೇಳಿ ಕರೆದು ತರುವಳು. ಬೇರೆ ಮನೆಯ ಹೆಣ್ಣು ಮಕ್ಕಳು ಬಂದು ಸೇರುವಷ್ಟರಲ್ಲಿ ಸಿದ್ಧ ಮಾಡಿಟ್ಟ ಹಣತೆಯನ್ನು ಪಕ್ಕದ ಮಾಡದಲ್ಲಿ ತಂದಿಟ್ಟು ಕುಕ್ಕೆನು ಅಥವಾ ಕಾರಳ ಹೂ ಇತ್ತೀಚೆಗೆ ದೊರಕುವ ವಿಧ ವಿಧವಾದ ಹೂಗಳನ್ನೇ ತೆಗೆದುಕೊಂಡು ಸಗಣಿಯಿಂದ ಬಿಡಿಸಿದ ವಿನ್ಯಾಸದಲ್ಲಿ ಒಂದೊಂದಾಗಿ ಚುಚ್ಚುತ್ತ ನಿಂತಿರುವಳು. ಉಳಿದವರು ಬಾಗಿಲ ಚಂಪಿಗೆ ಕುಳಿತುಕೊಂಡು ಹಾಡುತ್ತಿರುವರು. ಹೀಗೆ ಹಾಡುತ್ತ ಕೊನೆಗೆ ಆರತಿಪದ, ಕರಾಳಪದ ಹಾಡುವಾಗ ಅಥವಾ ಅದಕ್ಕಿಂತ ಸ್ವಲ್ಪ ಮುಂಚೆ ಅವರಲ್ಲಿ ಒಬ್ಬ ಮಹಿಳೆ ತನ್ನ ಮನೆಗೆ ಹೋಗಿ ತಮ್ಮ ಮನೆಯ ಬಾಗಿಲ ಮುಂದೆ ಶೀಗಿ ವಿನ್ಯಾಸ ಬರೆದು ಸಿದ್ಧ ಮಾಡಿಟ್ಟು ಮತ್ತೆ ಬಾ ಇವರಲ್ಲಿ ಸೇರಿಕೊಂಡು ಬಂದು ಫಳಾರ ತಿಂದ ಮೇಲೆ ಎಲ್ಲರೂ ಹೋಗಿ ಹಾಡುವರು. ಕೆಲವರು ಮನೆಗೆ ಬಾಗಿಲು ಇರುವುದಿಲ್ಲ ಅಂತವರು ತಮ್ಮ ಇದ್ದಂತಹ ಚಪ್ಪರದ ಮನೆ ಬಾಗಿಲು ಮುಂದೆಯೂ ಅಥವಾ ಮುಂದಿರುವ ಕಟ್ಟೆಯ ತುದಿಗೆ ಅದಕ್ಕೆ ಸ್ವಲ್ಪ ಸಾರಿಸಿ ಶೀಗಿ ಚಿತ್ರ ವಿನ್ಯಾಸ ಬಿಡಿಸಿ ಶೀಗಿ ಹಾಡುಗಳನ್ನು ಹಾಡುವರು. ಇನ್ನು ಕೆಲವರು ದೊಡ್ಡ ಬಂಗ್ಲೆ ಇದ್ದು ಆ ಮನೆಗೆ ಸುತ್ತಾವರಣ (ಕೌಂಪೌಂಡು) ಇರುತ್ತದೆ. ಅಲ್ಲಿ ಶೀಗಿ ವಿನ್ಯಾಸ ಬರೆದು ಶೀಗಿ ಹಾಡು ಹಾಡುವರು. ಅಂತಹ ಸ್ಥಳದಲ್ಲಿ ಹಣತೆಗೆ ಇಡಲು ಮಾಡ ಇಲ್ಲದಿದ್ದರೆ ಸಗಣಿಯಿಂದಲೇ ಅದನ್ನು ಮೆತ್ತಿ ಹಣತೆ ಇಡುವಂತೆ ಮಾಡುತ್ತಾರೆ.

ಶೀಗಿ ಆಟ ಆಚರಣೆಯ ಹಬ್ಬಗಳಲ್ಲಿರುವಂತಹ ವನಿತೆಯರೆಲ್ಲ ಸೇರಿ ಹಾಡುವ ಆಟಕ್ಕೆ ಯಾರು ಸಿಂಗರಿಸಿಕೊಂಡು ಶೃಂಗಾರದಿಂದ ಬರಲಾರರೆಂಬ ಒಂದು ಅಂಶ ಗಮನಮಾಡಿಕೊಳ್ಳಬೇಕಿದೆ. ರಾತ್ರಿ

ಸಮಯದಲ್ಲಿ ಶೀಗಿ ಹಾಡುವುದರಿಂದ ತಮ್ಮ ಶೃಂಗಾರ ಯಾರಿಗೆ ಕಾಣದಂತೆ ಇರಲಾರದೆಂದು ಹೇಳಲಾಗುವುದಿಲ್ಲ ಹಾಗೂ ಸಗಣಿಯಿಂದ ಧೂಳು ಇರುವ ಬಾಗಿಲು ಚಂಪಿಗೆಯ ಮೇಲೆ ಕೂಡುವುದರಿಂದ ತಮ್ಮ ಸಡಗರದಲ್ಲಿ ಶೃಂಗಾರವನ್ನು ಹಾಳು ಯಾಕೆ ಮಾಡಿಕೊಳ್ಳಬೇಕೆಂಬ ಕಲ್ಪನೆ ಸರಿ ಇರಬಹುದು. ಮಕ್ಕಳು ರಂಗೋಲಿಯ ಸೌಂದರ್ಯವನ್ನು ತುಳಿದು ಹಾಳು ಮಾಡುತ್ತಿದ್ದರೆ ಚೆಂದ ಒಳ್ಳೆಯದು ಎಂಬಂತಹ ಭಾವನೆಗಳು ಜನಪದರಲ್ಲಿದೆ.

### ೧.೧.೪. ಶೀಗಿ ಚಿತ್ರ ರಚನೆಯ ವಸ್ತು ವಿಷಯಗಳು

ಇಲ್ಲಿ ಹೊರಗೋಡೆಯ ಮೇಲೆ ಬಾಗಿಲು ಪಕ್ಕದಲ್ಲಿ ರಚನೆ ಮಾಡುವ ಶೀಗಿ ಚಿತ್ರಕಲೆಯಲ್ಲಿ ಇದ್ದ ರೀತಿಯ ವೈವಿಧ್ಯತೆ ವಸ್ತುವಿಷಯಗಳು ಇರುತ್ತವೆ. ಒಂದೊಂದು ದಿನ ಒಂದೊಂದು ರೀತಿಯ ವಸ್ತುವಿಷಯಕ್ಕೆ ಸಂಬಂಧಿಸಿದ ಚಿತ್ರ ರಚನೆ ಮಾಡುತ್ತಾರೆ. ಈ ಮೇಲೆ ತಿಳಿಸಿದಂತೆ ಶೀಗಿ ಹಾಡುವುದನ್ನು ದಸರಾ ಹಬ್ಬದ ಮಹಾನವಮಿ ದಿನದಂದು ಪ್ರಾರಂಭಿಸುತ್ತಾರೆ. ಇದನ್ನು ಕೊನೆಗೆ ಹುಣ್ಣಿಮೆಯ ದಿನದವರೆಗೆ ಹಾಡುತ್ತಾರೆ.

### ಮೊದಲನೆ ದಿನ

ಸೂರ್ಯ, ಚಂದ್ರ, ಚುಕ್ಕೆ ವಿನ್ಯಾಸ ಬಿಡಿಸಬೇಕೆಂಬ ಕಲ್ಪನೆ ಭೂಮಿಯು ಹುಟ್ಟಿದ ಮೇಲೆ ಈ ಬ್ರಹ್ಮಾಂಡದ ಮೇಲೆ ಮೊಟ್ಟಮೊದಲು ಕಾಣಿಸಿಕೊಂಡಿದ್ದವರೆಂದು ಸೂರ್ಯ, ಚಂದ್ರ ಚುಕ್ಕೆಯ ವಿನ್ಯಾಸವನ್ನು ಮೊದಲನೆಯ ದಿನ ಕಡ್ಡಾಯವಾಗಿ ರಚಿಸುವರು. ಅವರ ನಿತ್ಯ ಜೀವದಲ್ಲಿ ಹಗಲು, ರಾತ್ರಿ, ಸುಖ, ದುಃಖ ಆನಂದ ಸೌಂದರ್ಯವನ್ನು ಪರಿವರ್ತಿಸುವುದು. ಹಾಗಾಗಿ ಸೂರ್ಯನಿಂದ ಹಗಲು ರಾತ್ರಿಯಲ್ಲಿ ಚಂದ್ರನಿಂದ ಬೆಳದಿಂಗಳು ಕಾಣುವುದು. ಅದರಲ್ಲಿ ಹೊಳೆಯುವ ಚುಕ್ಕೆ ಆನಂದ ಸೌಂದರ್ಯಗಳನ್ನು ಪ್ರತಿನಿಧಿಸುವುದು.ಮೊದಲನೆಯ ದಿನದಿಂದು ಕೆಲವು ಕಡೆ ಶೀಗೆಮ್ಮನ ಆಮಂತ್ರಣ ಹಾಡು ಹಾಡುತ್ತಾರೆ ಇತರ ಕಡೆ ವೀರೇಶನಿಗೆ ಆಮಂತ್ರಣ ಹಾಡು ಹಾಡುವುದು.

ಶೀಗೆಮ್ಮನಿಗೆ ಆಮಂತ್ರಣ

ಕುತಿನಿರ್ಧರಿ ಕುಬ್ಬಸ ತೊಟ್ಟು ಕುಂಕುಮ ಬಟ್ಟು ಹಣಿಮ್ಯಾಲಿಟ್ಟು
ಕುತನಿರ್ಧರಿ ಕುಬ್ಬಸ ತೊಟ್ಟು ಕುಂಕುಮ ಬಟ್ಟು ಹಣಿಮ್ಯಾಲಿಟ್ಟು
ವಾಲಿಕುಪ್ಪ ಕಿವಿದಲಿಟ್ಟು ಒಷಲಪದಿಂದ ಕರಿಯಬಂದ
ಮನಿಗೆ ನಡಿಯಮ್ಮ | ಶೀಗಿ ಮನಿಗೆ ನಡಿಯಮ್ಮ
ವಾಲಿಕುಪ್ಪ ಕಿವಿದಲ್ಲಿಟ್ಟು ಒಲೆಪದಂದ ಕರಿಯ ಬಂದ||
ಮನಿಗೆ ನಡಿಯಮ್ಮ | ಶೀಗೆ ಮನಿಗೆ ನಡಿಯಮ್ಮ||

### ಎರಡನೆಯ ದಿನ

ಗಂಗಿ ಮತ್ತು ಗೌರಿಯರ ಉಬ್ಬು ಶಿಲ್ಪ ರೂಪದಲ್ಲಿ ಚಿತ್ರ ಬರೆಯುವುದು ಮಹಾನವಮಿಯ ಮರುದಿನವಸ ದಸರಾ ಹಬ್ಬ ಶೀಗೆ ಆಡುವ ಎರಡನೆಯ ದಿನವಾದ ಇಂದು ಗಂಗೆ ಗೌರಿಯ ವಿನ್ಯಾಸ ಬರೆಯುವುದನ್ನು ಎಲ್ಲಾ ಭಾಗದಲ್ಲಿ ಕಡ್ಡಾಯವಾಗಿ ಕಾಣುತ್ತವೆ. ಪೃಥ್ವಿಯ ಮೇಲೆ ಮೊದಲು ಸೂರ್ಯ

ಚಂದ್ರ ನಕ್ಷತ್ರ ಅಥವಾ ಗ್ರಹಗಳು ಕಾಣಿಸಿದ ಮೇಲೆ ನಂತರ ಶಿವನು ಹಾಗೂ ಅವನ ಅರ್ಧಾಂಗಿಣಿಯರಾದ, ಎಂದಾಗಿರುತ್ತದೆ. ಗಂಗೆ ಮತ್ತು ಗೌರಿ ಇವರಿಂದಲೇ ನಾವೆಲ್ಲರು ಇವರ ಸಂತಾನವೆಂದು ನಮ್ಮನ್ನು ಸದಾ ನೆಮ್ಮದಿಯಿಂದ ಜೀವನದಲ್ಲಿಸುಖ ಸಂತೋಷ ಹರಿಸಲಿ ಎಂದಾಗಿರುತ್ತದೆ. ಅವರ ವಿನ್ಯಾಸ ಚಿತ್ರರಚನೆಯಿಂದ, ಜೊತೆಗೆ ಅವರನ್ನು ಸ್ಮರಿಸುವುದರಿಂದ ನಮಗೆ ಯಾವುದೇ ಅಶುಭವಿರದೆ ಸದಾ ಆಶೀರ್ವಾದ ನಮ್ಮ ಮೇಲಿರಲಿ ಎಂಬ ನಂಬಿಕೆ.

ಈ ಎರಡು ದಿನ ಗಂಗೆ ಗೌರಿ ಶೀಗಿ ಹಾಡುಗಳಲ್ಲಿ ಒಂದೇ ನೋಡಿ ಐದು ಸಂಖ್ಯೆಗಳಲ್ಲಿ

"ಗೌರಿಗೆ ಕಂಡೆ"

ಒಂದು ಚಮಚ ಎಣ್ಣೆ ತಂದು ಬತ್ತಿ ಮಾಡಿ
ಕರಣ ಕ್ಯಟ್ಯಾಗ ಮಂಗಳವಾರ ಪ್ಯಾಂಟ್ಯಾಗ
ರಾಯೇರಾದಾ ಬೀದ್ಯಾಗ
ಚಟ್ಟೇರಾಡಾ ಪಟ್ಟಣದಾಗ
ಗೌರಿ ನೀ ಕಂಡನೇ ಹೂವಿನ ಬನದಾಗ
ಗೌರಿ ನೀ ಕಂಡನೇ ಹೂವಿನ ಬನದಾಗ

....... ಈ ಹಾಡನು ಒಂದೇ ನುಡಿ ಐದು ಸಂಖ್ಯೆಗಳಲ್ಲಿ ಕಾಣುತ್ತವೆ.

ಕಂಡದೆ ಗೌರಮ್ಮ ಶೀಗಮ್ಮನಿಗೆ
ಒಂದು ಸೌಟ ಎಣ್ಣೆ ತಂದರೆ ಗೌರಮ್ಮನಿಗೊಂದು ಮಂಡಲ ಬರೆದರೆ
ಗೌರಮ್ಮಗೊಂಬೆ ಮಂಡಾಲ ಬರೆದರೆ
ಫಲಂಗೋಃಡದ ಫುಲಂಗೋಃಡದ
ರಾಯೇರಾಗ ಡ ರಥ ಬೀದ್ಯಾಗ ಪಟ್ಟಣದಾಗ ಸಟ್ಟಣುದಾಗ
ಹಾಹಾ ಕಂಡಿರ ಗೌರಮ್ಮನ ಹಾ ಹಾ ಕಂಡಿರ ಶೀಗಮ್ಮನ

ಹೀಗೆ ಈ ಹಾಡನ್ನು ಒಂದು ಅಂಕಿ ಐದು ಅಂಕಿವರೆಗೆ ಹಾಡು ಕಾಣುತ್ತೇವೆ.

ಗೌರಮ್ಮನ ಪೂಜೆಗೆ

ಒಂದೆ ನುಡಿ ಐದು ಸಂಖ್ಯೆಗಳಲ್ಲಿ

ಒಂದೆಸೇರಕ್ಕಿಗೆ ನಮ್ಮ ಗೌರಮ್ಮ ಪೂಜೆಗೆ
ಅಕ್ಕಿನ ತೋಡಿ ಮೂಲ ಬೆಳ್ಳಿ ಛತ್ತರಿ
ಬಂಗಾರ್ಧೇರಿಕೊಂಡು ಅಣ್ಣಾ ಮಾಲಿಂಗ[೨]
ದಂಡಿಗ್ಯೋದರ ಪಂಚ ಛಾತರಿ
ಸಂಕೂತರಿ ಓಚಿಟಜ ಎಂಬ ಕೋಗಿಲೆ...

ಶೀಗಿ ಚಿತ್ರ ಬಿಡಿಸುವ ೨ನೇ ದಿನ

---

೨. ರಾಜೇಂದ್ರಯರನಾಳೆ, ಶೀಗಿ ಹಾಡುಗಳು, ಪುಟ-೨

ಮೂರನೆಯ ದಿನ

ಶೀಗಿ ಚಿತ್ರ ರಚನೆಯ ವಸ್ತು ವಿಷಯ ಭಾರಂಭಾವಿ ಬಾಳೆಗಿಡ ಮತ್ತು ಕುಂಬಳ ಹೂ ಮತ್ತು ಕಮಲ ಹೂ ಬಿಡಿಸುತ್ತಾರೆ. ಹೀಗೆ ಮೊದಲನೆ ದಿನದಂದು ಹಿಡಿದು ಐದನೆ ದಿನದವರೆಗೆ ಒಂದು ವಿನ್ಯಾಸದೊಂದಿಗೆ ಇನ್ನೊಂದು ವಿನ್ಯಾಸವನ್ನು ರಚನೆ ಮಾಡುತ್ತಾ ಈ ಭಾಗದಲ್ಲಿ ಕೆಲವರು ಹಿಂದಿನ ದಿನ ಗಂಗೆ ಗೌರಿ ಇಳಿಸಿದ ದಿವಸವೂ ಅವರವರ ಜೊತೆಗೆಂದೆ ಗಂಗೆ ಗೌರಿ ಚಿತ್ರ ಬಿಡಿಸಿ ವಿನ್ಯಾಸದ ಸುತ್ತಲೂ ಕುಂಬಳ ಹೂ ಬಿಡಿಸಿರುತ್ತಾರೆ. ಹೀಗೆ ಮೂರನೆ ಮತ್ತು ನಾಲ್ಕನೆಯ ದಿನ ಇಂತಹ ಚಿತ್ರ ಬರೆಯಬೇಕೆಂಬ ಕಡ್ಡಾಯವಿಲ್ಲ. ಬೇರೆ ಬೇರೆ ಭಾಗಗಳಲ್ಲಿ ಬೇರೆ ರೀತಿಯ ವಸ್ತು ವಿಷಯಗಳು ಚಿತ್ರ ರಚನೆ ಮಾಡುತ್ತಾರೆ.

ನಾಲ್ಕನೆ ದಿನ

ನಾಲ್ಕನೆ ದಿನದಂದು ಎರಡು ಕಡೆ ಒಂದೇ ರೀತಿಯ ವಸ್ತು ವಿಷಯ ಕಾಣುವುದು. ಮೂರು ನಾಲ್ಕನೆ ದಿನದಂದು ಬಿಡಿಸುವಂತಹ ವಸ್ತು ವಿಷಯ ಹಿಂದೆ ಮುಂದೆ ಬಿಡಸುವ ವ್ಯತ್ಯಾಸ ವಿವಿಧ ಗ್ರಾಮಗಳಲ್ಲಿ ಕಾಣುತ್ತೇವೆ. ಕೆಲವೊಂದು ಕಡೆ ಕಬ್ಬಿನ ಮುಳ್ಳು ಬಿಡಿಸಿದರೆ ಇನ್ನೊಂದು ಕಡೆ ಕುಂಬಳ ಹೂ, ಮತ್ತು ಕಬ್ಬಿನ ಮುಳ್ಳು ಬಾಳೆಗಿಡ, ಕಬ್ಬಿನ ಮುಳ್ಳು ಕಾಯಲು ಅದರೊಂದಿಗೆ ಒಬ್ಬ ಮನುಷ್ಯನನ್ನು ಬಿಡಿಸಿರುತ್ತಾರೆ. ಹೀಗೆ ಮೂರು ನಾಲ್ಕನೆ ದಿವಸ ಇಂಥಹದೇ ವಸ್ತುವಿನ ಚಿತ್ರ ಬಿಡಿಸಬೇಕೆಂದು ಕಡ್ಡಾಯವಿಲ್ಲ, ಸಗಣಿಯಿಂದ ಬಿಡಿಸುವ ವಸ್ತು ವಿಷಯ ವಿನ್ಯಾಸಗಳು ಹಿಂದೆ, ಮುಂದೆಯೂ ಆಗುತ್ತವೆ.[೬] ಇಲ್ಲಿ ಬಿಡಿಸುವ ವಿನ್ಯಾಸಗಳೂ ಅದರ ಒಂದು ದಿವಸ ಬಿಡಿಸುವ ವಿನ್ಯಾಸವೇ ಮುಂದೆ ಮತ್ತೊಂದು ದಿವಸ ಇಳಿಸುವುದಿಲ್ಲ. ಅವರ ಚಿತ್ರ ರಚನೆ ವಿಧಾನ ಸಗಣಿಯಿಂದ ಉದ್ದ ಮತ್ತು ಅಗಲ ಒಂದು ಚೌಕ ನಿರ್ಮಿಸಿ, ಅದರಲ್ಲಿ ನಾಲ್ಕು ಸರಳರೇಖೆ ನಾಲ್ಕು ಲಂಬ ರೇಖೆ ಎಳೆಯುವರು, ಇದರಲ್ಲಿಇಪ್ಪತ್ತು ಚೌಕ ನಿರ್ಮಿಸುವುದು, ಕುಂಬಳ ಹೂ, ಈ ಹೂವನ್ನು ಗೋಳಾಕಾರದಲ್ಲಿ ಕಾಣುತ್ತೇವೆ. ಅದರಲ್ಲಿ ಎಂಟು ಮತ್ತು ಆರುದಳ ಹೂ ಕಾಣುತ್ತೇವೆ. ಬಾಳೇಗಿಡ ತಮ್ಮ ಮನಸ್ಸಿನ ಭಾವನೆ ರೇಖೆ ದಪ್ಪರೇಖೆ ಎಳೆದಿದ್ದು, ಕೆಳಗೆ ಕಾಂಡ ದಪ್ಪಾಗಿ ಮೇಲೆ ಚೂಪಾಗಿ ಎಲೆಗಳನ್ನು ರಚಿಸುವರು.

ಮನುಷ್ಯ ಪುರಾತನ ಕಾಲದಿಂದ ಬೇಸಾಯ ಮಾಡುತ್ತ ಬಂದಂತೆ ಅವನ ವಿಚಾರಗಳಿಂದ ಹೊಸ ಬೇಸಾಯ ಪ್ರಾರಂಭಿಸಿದ ತಾನು ಬೇಸಾಯ ಮಾಡುವ ಭೂಮಿ ಯಾವಾಗಲು ಹಚ್ಚ ಹಸಿರಾಗಿರಲು ಕಬ್ಬಿನ ಬೇಸಾಯ ಪ್ರಾರಂಭಿಸಿದ ಇದರೊಂದಿಗೆ ವಿವಿಧ ರೀತಿಯ ಹೂಗಳ ಬೇಸಾಯ, ಹೀಗೆ ತನ್ನ ಜೀವನ ಹಚ್ಚ ಹಸಿರಾಗಿ ಬೆಳೆಯುತ್ತಿರಲಿ ಎಂಬ ನಂಬಿಕೆಯಿಂದ ಬಹುಃಶ ಇಂತಹ ಕೃಷಿ ಪ್ರಧಾನವಾದ ಕಬ್ಬು, ಮತ್ತು ವಿವಿಧ ರೀತಿಯಹುಗಳ ಚಿತ್ರವನ್ನು ರಚಿಸಿರುವಂತೆ ಕಾಣುತ್ತದೆ.

೬. ಮಂಜುನಾಥ ಬೇವಿನಕಟ್ಟಿ (ಸಂ)., ಜಾನಪದ ಕರ್ನಾಟಕ, ಸಂ-೨, ಪುಟ-೨

## ಆರನೆಯ ದಿನ

ಆರನೆ ದಿನದಂದು ಏಳುಸುತ್ತಿನ ಕೋಟೆ. ಈ ಚಿತ್ರವನ್ನು ಕಡ್ಡಾಯವಾಗಿ ಎಲ್ಲಾ ಭಾಗದಲ್ಲೂ ಹಿಂದೆ ಮುಂದೆ ಆಗದೇ ಹಾಗೇ ಆರನೆ ದಿನದಂದು ಎಲ್ಲಾ ಕಡೆ ಒಂದೇ ರೀತಿಯ ಚಿತ್ರ ರಚನೆಯ ವಿನ್ಯಾಸವನ್ನು ಕಾಣುತ್ತೇವೆ. ಚಿತ್ರರಚನೆಯ ಸ್ವರೂಪ ವೃತ್ತಾಕಾರದಲ್ಲಿ ಕೂಡಿದ್ದು ಮಧ್ಯದಲ್ಲಿ ಒಂದು ವೃತ್ತ ನಂತರ ಒಂದರ ಮೇಲೆ ಒಂದೊಂದಾಗಿ ಏಳು ವೃತ್ತಗಳನ್ನು ಕಾಣುತ್ತೇವೆ. ನೋಡುವುದಕ್ಕೆ ಒಂದು ರೀತಿಯಲ್ಲಿ ದೊಡ್ಡದಾಗಿ ಆಕರ್ಷಕವಾಗಿ ದೊಡ್ಡದಾಗಿ ಕಾಣುತ್ತದೆ. ಈ ವಿನ್ಯಾಸವು ನೋಡುವವರಿಗೆ ಬಹಳ ವಿಶಿಷ್ಟ ರೂಪದಲ್ಲಿ ಕಾಣುವಂತಾಗಿದೆ. ಈ ವಿನ್ಯಾಸವು ಸಗಣಿಯಿಂದ ಬಿಡಿಸಿದ ನಂತರ ಉಬ್ಬು ತಗ್ಗು ವಿನ್ಯಾಸದಲ್ಲಿ ಅಲಂಕಾರಿಕವಾಗಿ ವಿವಿಧ ಅಲಂಕಾರದ ಹೂಗಳನ್ನು ವೃತ್ತಕಾರದಲ್ಲಿ ಚುಚ್ಚುತ್ತಾರೆ. ಹೀಗೆ ಏಳುಸುತ್ತಿನ ಕೋಟೆ ಚಿತ್ರ ಬಿಡಿಸುವುದರಲ್ಲಿ ಮಹಾಭಾರತ ಚಕ್ರವ್ಯೂಹ ಕಲ್ಪನೆಯು ಅಡಗಿದೆ. ಆರನೆಯ ದಿನದಂದು ಏಳುಸುತ್ತಿನ ಕೋಟೆಯ ಹಾಡು ಹೇಳುತ್ತ ಕಲಾಕೃತಿ ರಚಿಸುವ ಸಂಪ್ರದಾಯವಿದೆ.

ಏಳು ಸುತ್ತಿನ ಕೋಟೆ

ಒಂದು ಸುತ್ತಿನ ಕೋಟೆ ಅದರಾಗ ಕುಂತಾನ ಬಸವ

ಬಸವಗ ಬಸವೆನ್ನಿರೇ್ಃ ಬಸವನ ಪಾದಕ್ಕೆ ಶರಣೆನ್ನಿರೇ್ಃ

ಹೋಗೆ ಹೊನ್ನ ಬಿಸುಲೇ್ಃ ಬಾರೇ ಬನ್ನ ಬಿಸುಲೇ

ಅಲ್ಲಟ ಪಲ್ಲಟ ಮಟಕ್ಯೋಗಿ ಹೂಗಾರ ತೋಟಕ್ಯೋಗಿ

ಹೊರಂತ್ಯೋಗಿ ಹ"ಊ ಹೇಳಿ ಸಳಕ್ಸಿ ಬೆಳದಿಂಗುಳೆ

ಈ ಹಾಡನ್ನು ಒಂದರಿಂದ ಏಳು ನುಡಿವರೆಗೆ ಕಾಣುತ್ತೇವೆ

## ಏಳನೆಯ ದಿನ (ಕೊನೆಯ ದಿನ)

ಏಳನೆ ದಿನದಂದು ಶೀಗಿ ಹುಣ್ಣಿಮೆಯ ದಿವಸ. ಪ್ರತಿ ವರ್ಷದಂತೆ ಮಹಾನವಮಿ ದಿನದಿಂದ ಹಿಡಿದು ಶೀಗಿ ಹುಣ್ಣಿಮೆಯ ಮೊದಲಿನ ದಿನದವರೆಗೆ ಸಗಣಿಯಿಂದ ವಿನ್ಯಾಸಗಳಿರುತ್ತವೆ. ಹುಣ್ಣಿಮೆ ದಿನದಂದು ಮುಂಜಾನೆ ಹಗಲಿನ ಹೊತ್ತಿನಲ್ಲಿ ಸಗಣಿಯಿಂದ ಬಿಡಿಸಿದ ಜಾಗದಲ್ಲಿ ಸರಿಯಾಗಿ ಸಾರಿಸಿ ಸುಣ್ಣ ಅಥವಾ ಇನ್ನಿತರ ವಿವಿಧ ಬಣ್ಣಗಳಿಂದ ಸಾರಿಸಿ ನಂತರ ಅದು ಒಣಗಿದ ಮೇಲೆ ಮಹಾನವಮಿದಿಂದ ಪ್ರಾರಂಭಿಸಿ, ಶೀಗಿ ಹುಣ್ಣಿಮೆ ಮೊದಲಿನ ದಿನದವರೆಗೆ ರಾತ್ರಿಹೊತ್ತಿನಲ್ಲಿ ಬಿಡಿಸಿದ ಸಗಣಿಯ ವಿನ್ಯಾಸ ಚಿತ್ರಗಳ ಹುಣ್ಣಿಮೆ ದಿನದಂದು ಸಾರಿಸಿದ ಸ್ಥಳದಲ್ಲಿ ಹಗಲು ಹೊತ್ತಿನಲ್ಲಿ ಹಿಂದಿನ ಆರು ದಿನಗಳ ವಿನ್ಯಾಸಗಳು ಬಣ್ಣಗಳ ಮೂಲಕ ಚಿತ್ರ ರಚನೆ ಮಾಡುವರು.

ಹೀಗೆ ಮೊದಲು ಬಿಡಿಸಿದ ವಿನ್ಯಾಸಗಳು ಬಣ್ಣ ರಚನೆಯಲ್ಲಿ ಕೂಡ ಪ್ರತಿದಿನ ಬಿಡಿಸಿದ ವಿನ್ಯಾಸಗಳೊಂದಿಗೆ ಸೂರ್ಯ, ಚಂದ್ರ, ಚುಕ್ಕಿ, ಗಂಗೆ, ಗೌರಿ, ಭಾರಂಬಾಯಿ, ಬಾಳೆಗಿಡ ಕರಬನ ಛರೆಬಲ ಕಬ್ಬಿನ ಮುಳ್ಳು, ಏಳುಸುತ್ತಿನ ಕ್ಯಾಟಿ, ಹೀಗೆ ಈ ವಿನ್ಯಾಸಗಳೊಂದಿಗೆ ತಮಗೆ ಬೇಕಾದ ಬರಿಯಲು ಬಂದಂಥ ಬೇರೆ ವಿನ್ಯಾಸಗಳನ್ನು ಕೂಡ ಬಿಡಿಸುವರು.

ಈ ಚಿತ್ರ ರಚನೆಯಲ್ಲಿ ವಿವಿಧ ಬಣ್ಣಗಳಿಂದ ಚಿತ್ರರಚನೆ ಮಾಡುವರು. ಹೀಗೆ ಶೀಗಿಆಚರಣೆ ಏಳನೆಯ ದಿನದಂದು ಒಟ್ಟಾಗಿ ಮೊದಲು ಆರು ದಿನ ಬಿಡಿಸಿದ ಚಿತ್ರಗಳು ಕೊನೆಯದಿನದಂದು ಒಟ್ಟಾಗಿ ಚಿತ್ರ ರಚನೆ ಮಾಡುವರು. ಹೀಗೆ ಶೀಗಿ ಆಚರಣೆಯ ಕೊನೆಯ ದಿವಸ ಶೀಗಿ ರಚನೆಯ ಹೊರಭಾಗದಲ್ಲಿ ಕೋನರೇಖೆಗಳಿಂದ ಚಿತ್ರರಚನೆಯನ್ನು ಕಾಣುತ್ತೇವೆ.

ಈ ದಿನದಂದು ಮೊದಲಿನಂತೆ ಶೀಗೆ ಹಾಡುಗಳೊಂದಿಗೆ ಬೇರೆ ಬೇರೆ ರೀತಿಯ ಆರತಿ ಹಾಗೂ ಫರಾಳ ಪದಗಳನ್ನು ಹಾಡುತ್ತಾರೆ. ಕೊನೆಗೆ ಪೂಜೆ ಸಲ್ಲಿಸಿ ಆ ಫರಾಳದ ಜೊತೆಗೆ ಕೈ ಮಾಡಿ ತೋರಿಸಿದ ನಂತರ ಅಲ್ಲಿ ಎಲ್ಲರನ್ನು ಕಳುಹಿಸುತ್ತಾರೆ. ಹೀಗೆ ದಿನಾಲು ಶೀಗಿ ಹಾಡುವುದು ಮುಗಿದಂತೆ ಶೀಗಿ ಹುಣ್ಣಿಮೆ ದಿವಸ ಕೊನೆಗೊಳ್ಳುತ್ತದೆ. ಮತ್ತೆ ಮುಂದಿನ ವರ್ಷ ಬರುವ ಮಹಾನವಮಿ ದಿವಸಕ್ಕಾಗಿ ಬೀದರ ಜಿಲ್ಲೆಯ ಹೆಣ್ಣುಮಕ್ಕಳ ವಿಶಿಷ್ಟವಾದಂತಹ ಒಂದು ಜನಪದ ಆಚರಣೆ ಮತ್ತೆ ಕಾದಿರುತ್ತದೆ.

### ೧.೨. ರಂಗೋಲಿಯ ಚಿತ್ರಕಲೆ

ರಂಗೋಲಿ, ಭಾರತದ ಅತ್ಯಂತ ಪ್ರಾಚೀನ ಜನಪದ ಕಲೆ. ಬದುಕಿನ ಖುಷಿಯನ್ನು ಸೌಭಾಗ್ಯ ಮಂಗಳಕರ ಪ್ರಸನ್ನತೆಯನ್ನು ಶುಭಸನ್ನಿವೇಶವನ್ನು ಹೇಳುವ ಲಾಲಿತ್ಯ ಪೂರ್ಣ ಕಲಾ ಕೌಶಲ್ಯವೇ ರಂಗವಲ್ಲಿ ಇಲ್ಲಿಯ ಜನಪದ ಚಿತ್ರಕಲೆಗಳಲೊಂದಾಗಿದೆ. ಈ ಕಲೆಯಲ್ಲಿ ಶ್ರೇಷ್ಠ ಕಲೆಯ ಲಕ್ಷಣಗಳೆಲ್ಲವು ಇವೆ. ಇದು ಅಲಂಕಾರಿಕ ಮಾತ್ರವಲ್ಲ. ಮಂಗಲಕರವೂ ಆಗಿದೆ.[೪]

### ೧.೨.೧. ರಂಗೋಲಿಯ ಐತಿಹಾಸಿಕತೆ

ಮಾನವ ಬದುಕಿನಲ್ಲಿ ಚಿತ್ರಕಲೆಯ ಪ್ರವೇಶದೊಂದಿಗೆ ರಂಗೋಲಿ ಪ್ರವೇಶ ಪಡೆದಿದೆ. ಸಂತೋಷಕುಮಾರ ಗುಲ್ವಾಡಿಯವರು ರಂಗೋಲಿಯ ಪ್ರಾಚೀನತೆಯನ್ನು ಸುಮಾರು ೫೦೦೦ ವರ್ಷಗಳಷ್ಟು ಹಿಂದೆ ಎಳೆದು ಪರಿಚಯಾತ್ಮಕ ಲೇಖನ ಬರೆದಿದ್ದಾರೆ. ಅಂದರೆ ಅದಕ್ಕಾಗಿ ಆಧಾರ ಸೂಚಿಗಳನ್ನು ಅವರು ಕೊಟ್ಟಿಲ್ಲ ಆದಿಮಾನವನು ಗವಿ ಕಲ್ಲುಬಂಡೆಗಳ ಮೇಲೆ ಚಿತ್ರಿಸಿದ್ದನ್ನು ನೋಡಿದರೆ ರಂಗೋಲಿಯು ಇತಿಹಾಸ ಪೂರ್ವದ ಕಾಲಕ್ಕೆ ಹೋಗುತ್ತದೆ. ಜನಪದ ಬಹುಪಾಲು ಕಲೆಗಳಿಗೆ ಲಿಖಿತ ಆಧಾರ ಗುರುತಿಸುವುದು ಕಷ್ಟಸಾಧ್ಯವಾಗಿದೆ.

ಬಾಣ ಕ್ರಿ.ಶ.೬೦೬, ೬೪೮ ತನ್ನ ಕಾದಂಬರಿಯಲ್ಲಿ ಸೂತಕಾ ಗೃಹದ ಮುಂದೆ ರಂಗೋಲಿ ಹಾಕುವುದನ್ನು ವಿವರಿಸಿದ್ದಾರೆ. ನಾನಾ ವಿಧ ಗೇರು ಅಧಿಕ ಸುಂದರ ರಂಗಸೆ ರಂಜಿತಕರ ಮನೋಹನರ ಕಾರ್ಪಾಸ ಕುಸುಮಕೆ ಕರ್ಣೋದ್ಧಾರಾ ಉನ್‌ಕೋಕೋ ಚಿತ್ರಿತ್ ಕರ್‌ತೇತಿ ಔರ್ ಕುಸುಮ ಪೋಲೋಂಕಿ ಕೇಸರ್ ರೇಣೂಕ ಸಂಯೋಗ ಸೆ.ಉನ್‌ಕೋಲಾಲಾ ಲಾಲ ಕರ್ತೆತಿ ಇಲ್ಲಿ ಕುಲಾಚಾರ ಬಲ್ಲಗಂಡ ಅಥವಾ ಮಗಳು ಯಾರೋ ಒಬ್ಬರು ಬಾಗಿಲ ಎರಡು ಬದಿಯಲ್ಲಿ ಸಗಣೆಯಿಂದ ಚೌಕಾಕಾರ ಸಾರಿಸಿ ವಿವಿಧ ಪ್ರಕಾರ ಕ್ಯಾವಿ ಮುಂತಾದ ಸುಂದರ ಬಣ್ಣಗಳಿಂದ ಮನಹಹವಾದ ಹತ್ತಿ ಹೇವಿನ ಕಣಗಳಿಂದ ಆ ಚೌಕಗಳನ್ನು ಚಿತ್ರಿಸುತ್ತಿದ್ದರು ಮತ್ತು ಹೂವಿನ ಕೇಸರ ಸಂಯೋಗದಿಂದ ಅವುಗಳಿಗೆ ಕೆಂಪು ಕೆಂಪಾದ ಬಣ್ಣ ಮಾಡುತ್ತಿದ್ದರು. ಸೆಗಣಿಯ ಚೌಕದಲ್ಲಿ ಸ್ವಸ್ತಿಕಗಳನ್ನು ತೆಗೆಯುತ್ತಿದ್ದರೆಂದು ವರ್ಣಿಸಲಾಗಿದೆ. ಈ

---

೪. ಡಾ.ಎಸ್.ಸಿ.ಪಾಟೀಲರ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೧೧೩ ಮತ್ತು ೧೧೯

ವಿವರಗಳನ್ನು ನೋಡಿದರೆ. ಪ್ರಾಚೀನ ಕಾಲದಿಂದಲೂ ಮನೆಯ ಮುಂದೇ ರಂಗೋಲಿ ಶುಭದ ಆಶಯದ ಹಿನ್ನೆಲೆಯಲ್ಲಿ ಬೆಳೆದು ಬಂದಿದೆ ಎನಿಸುತ್ತದೆ. ಶುಭ ಹೆರಿಗೆ ಬಾಣಂತಿ ರಕ್ಷಣೆಯ ಆಶಯದ ಹಿನ್ನೆಲೆಯಲ್ಲಿ ಸೂತಿಕಾಗೃಹದ ಮುಂದೆ ರಂಗೋಲಿ ಹಾಕುವ ಬಗೆ ನೋಡಿದರೆ ಜನಪದರ ದೇವದೈವದಂಥ ನಂಬಿಕೆಗಳು ಇಲ್ಲಿ ಕಾರಣವಾಗಿವೆಯೆನ್ನಬೇಕು.

ವಾತ್ಸಾಯನನ ೬೪ ಕಲೆಗಳಲ್ಲಿ ತಂಡುಲಬಲಿಕುಸುವವಿಕಾರವು ೬ನೇಯ ಕಲೆಯಾಗಿದ್ದು ಈ ಕಲೆಯ ಬಗೆಗೆ ವಿದ್ವಾಂಸರು ಚರ್ಚಿಸಿದ್ದಾರೆ. ಯಶೋಧರ ಪಂಡಿತರು ಇದರ ಅರ್ಥವನ್ನು ಸರಸ್ವತಿ, ಕಾಮದೇವ ದೇವಾಲಯಗಳಲ್ಲಿ ಅಕ್ಕಿಯಿಂದ ರಚಿಸುತ್ತಿದ ಸುಂದರವಾದ ಕಲಾಕೃತಿಗಳು ಎನ್ನುತ್ತಾನೆ.

### ೧.೨.೨. ರಂಗೋಲಿಯ ಪ್ರಕಾರಗಳು

ಅ. ಚುಕ್ಕೆಯ ರಂಗೋಲಿ

ಆ. ಚುಕ್ಕೆ ರಹಿತ ರಂಗೋಲಿ

### ಅ. ಚುಕ್ಕೆಯ ರಂಗೋಲಿ

ರಂಗೋಲಿಯ ಹಿಟ್ಟಿನಿಂದ ಚುಕ್ಕೆಯನ್ನಿಟ್ಟುಕೊಂಡು ತಮಗೆ ಬೇಕಾದ ರೀತಿಯಲ್ಲಿ ಚುಕ್ಕೆಯಿಂದ ಚುಕ್ಕೆಗೆ ಗೆರೆಗಳನ್ನು ಕೊಡಿಸುತ್ತ ಅಪೇಕ್ಷಿತ ಚಿತ್ರಾಕೃತಿಗಳನ್ನು ತೆಗೆಯುವ ವಿಧಾನವೇ ಚುಕ್ಕೆಯ ರಂಗೋಲಿ ಹೀಗೆ ಚುಕ್ಕೆಗಳನ್ನು ಇಡುವುದಕ್ಕೆ ಅಕ್ಕಿ ಇಡುವುದು ಎಂದೂ ಹೇಳುತ್ತಾರೆ.

ಇದು ಚಿಕ್ಕವರಿಗೆ ರಂಗೋಲಿ ಹಾಕಲು ಮೊದಲು ಕಲಿಸುವ ವಿಧಾನವಾಗಿದೆ. ಪ್ರಾರಂಭದಲ್ಲಿ ಕಲಿಯುವವರಿಗೆ ಇದು ತುಂಬ ಸರಳ ವಿಧಾನವಾಗಿದ್ದು ಇಲ್ಲಿ ತ್ರಿಕೋನ, ಚೌಕ ವರ್ತುಳ. ಆಯತ, ವಜ್ರಾಕೃತಿ, ಇತ್ಯಾದಿ ಆಕೃತಿಗಳನ್ನು ರಚಿಸಲಾಗುತ್ತದೆ. ಅಚ್ಚುಕಟ್ಟುತನ ಪ್ರಮಾಣ ಬದ್ಧತೆ ಇರುವುದರಿಂದ ರಂಗೋಲಿಯ ವಿನ್ಯಾಸಗಳು ನೋಡಲು ಸುಂದರವಾಗಿ ಕಾಣಿಸುತ್ತವೆ. ಚುಕ್ಕೆಯ ರಂಗೋಲಿಯನ್ನು ಮಕ್ಕಳು ದೊಡ್ಡವರು ಎಲ್ಲರೂ ಹಾಕುತ್ತಾರೆ. ಸಾಮಾನ್ಯವಾಗಿ ಸ್ತ್ರೀಯರು ಹಾಕುವುದೇ ಹೆಚ್ಚು.

### ಆ. ಚುಕ್ಕೆರಹಿತ ರಂಗೋಲಿ

ಚುಕ್ಕೆಗಳನ್ನು ಇಡಲಾರದೆ ನೇರವಾಗಿ ರಂಗೋಲಿಯ ಪುಡಿಗಳಿಂದಲೇ ರಂಗೋಲಿಯನ್ನು ಹಾಕುವ ವಿಧಾನವಿದಾಗಿದೆ. ಇದನ್ನು ಸರಳ ಗೈ ರಂಗೋಲಿಯೆಂದು ಕರೆಯುತ್ತಾರೆ. ನೈಸರ್ಗಿಕವಾದ ವಸ್ತುಗಳ ಚಿತ್ರಣಕ್ಕಾಗಿ ಈ ರಂಗೋಲಿಯನ್ನು ಬಳಸುತ್ತಾರೆ. ಎಲೆ, ಹೂ, ಗಿಡ, ಪಕ್ಷಿ, ಪ್ರಾಣಿ ಮುಂತಾದ ಆಕೃತಿಗಳನ್ನು ಇಲ್ಲಿ ಹಾಕಲಾಗುತ್ತದೆ. ಹೀಗೆ ನೇರವಾಗಿ ಹಾಕುವ ಈ ರಂಗೋಲಿಯಲ್ಲಿ ಒಮ್ಮೆ ಹಾಕಿದ ಗೆರೆಯನ್ನು ಅಳಿಸಲು ಬರುವುದಿಲ್ಲ. ಅಳಿಸಿ ರಂಗೋಲಿ ಹಾಕಬಾರದೆನ್ನುವ ಭಾವನೆಯೂ ಇದೆ. ಹೀಗಾಗಿ ಸ್ವಲ್ಪ ನುರಿತ ವ್ಯಕ್ತಿಗಳು ಚುಕ್ಕೆ ರಹಿತ ರಂಗೋಲಿ ಹಾಕುವುದು ಕಂಡುಬರುತ್ತದೆ. ಚುಕ್ಕೆ ರಹಿತ ರಂಗೋಲಿ ಹೆಚ್ಚಾಗಿ ಅಲಂಕಾರಿಕ ವಿನ್ಯಾಸದ ರಚನೆಗಳಾಗಿವೆ. ಇವು ಹೆಚ್ಚು ಸೃಜನ ಶೀಲತೆಯಿಂದ ಕೂಡಿದವುಗಳಾಗಿರುತ್ತವೆ. ಯಾಂತ್ರಿಕತೆಯ ವಿನ್ಯಾಸಗಳಿಗಿಂತ ತೀರ ಭಿನ್ನವಾಗಿ ಮನಸ್ಸಿನ ಬಯಕೆಗಳನ್ನು ರಂಗೋಲಿ ರೇಖೆಯಲ್ಲಿ ಮೂಡಿಸಲು, ಈ ವಿಧಾನ ಹೆಚ್ಚು ಸಹಾಯಕಾರಿಯಾಗಿದೆ. ದೊಡ್ಡವರು ಅದರಲ್ಲೂ ಸ್ತ್ರೀಪುರುಷರು ಇಂತಹ

ರಂಗೋಲಿ ಹಾಕುವುದು ಕಂಡುಬರುತ್ತದೆ. ಪುರುಷರು ಕೆಲವು ನಿರ್ದಿಷ್ಟ ಹಬ್ಬ ಮದುವೆ ಪೂಜೆಯಂತಹ ಉತ್ಸವದ ಸಂದರ್ಭದಲ್ಲಿ ಹಾಕಿದರೆ ಸ್ತ್ರೀಯರು ಹೆಚ್ಚಾಗಿ ದಿನಂಪ್ರತಿ ಹಾಕುತ್ತಾರೆ. ಹಾಕುವ ವಿಧಾನದಲ್ಲಿ ಅಡ್ಡ, ನೇರ, ಸಾಲುಗಳಿದ್ದರೆ, ಚುಕ್ಕೆ ರಹಿತ ರಂಗೋಲಿ ವಕ್ರ ರೀತಿಯ ಸುಳಿವುಗಳಿಂದ ಕೂಡಿದ್ದು ಅಭಿವ್ಯಕ್ತಿಯಲ್ಲಿ ಸಾಂಕೇತಿಕತೆ ಕ್ಲೀಷಟತೆಗಳಿರುತ್ತವೆ.

### ೧.೨.೩. ಆಧುನಿಕ ರೀತಿ

ಈಗ ಕೆಲವರು ರಾಸಾಯನಿಕ ವರ್ಣ ಮತ್ತು ಕೃತ್ರಿಮ ಕಟ್ಟಿಗೆಯ ಕೊಳವೆಗಳಿಂದಲೂ ರಂಗೋಲಿ ಹಾಕುತ್ತಾರೆ. ಬೆರಳುಗಳಿಂದ ರಂಗೋಲಿ ಪುಡಿಯನ್ನು ಉದುರಿಸುತ್ತ ರಂಗೋಲಿ ಹಾಕಿದರೆ ಇದು ಪ್ರಾಚೀನ ರೀತಿ ರಂಧ್ರರಿಂದ ಕೂಡಿದ ಕೊಳವೆಯಲ್ಲಿ ರಂಗೋಲಿ ತುಂಬಿ ಮನೆಯ ಮುಂದೆ ಉರುಳುಸಿದರೆ. ಚಿತ್ರದ ರಂಗೋಲಿ ಮೂಡುತ್ತದೆ. ಇದು ಆಧುನಿಕ ರೀತಿ ಇನ್ನು ಕೆಲವರು ತೈಲವರ್ಣದಿಂದ ಮನೆಯ ಮುಂದೇ ರಂಗೋಲಿಯ ಕೆಲವು ವಿನ್ಯಾಸಗಳನ್ನು ಬರೆಯಿಸುತ್ತಾರೆ. ದಿನಾಲು ಅದರ ಮೇಲೆ ನೀರು ಹಾಕಿ ತೊಳೆಯುವುದರಿಂದ ತೈಲವರ್ಣದ ರಂಗೋಲಿ ಸ್ವಚ್ಛವಾಗಿ ಸ್ಪಷ್ಟವಾಗಿ ಹಾಕುವ ವಿಧಾನಗಳು ಪ್ರಾಚೀನ ರೀತಿಯ ರಂಗೋಲಿಗಳಿಗಿಂತ ಇಲ್ಲಿ ಭಿನ್ನವಾಗಿ ಕಂಡು ಬರುತ್ತದೆ.

### ೧.೨.೪. ಮುಸ್ಲಿಂ ದರ್ಗಾದ ಮೇಲೆ ಹುಲಿಚಿತ್ರಗಳು

ಜನಪದ ಅನುಕರಣಾ ಪ್ರಧಾನ ಕಲೆಗಳಲ್ಲಿ ಹುಲಿ ವೇಷವೂ ಒಂದು ಶೂರತನಕ್ಕೆ ಇನ್ನೊಂದು ಹೆಸರು. ಹುಲಿ ಕ್ರೂರಿಯಾದಷ್ಟೆ ಕರುಣಾಮಯಿ, ತ್ಯಾಗಮಯಿಯಾಗಿದೆ. ಗೋವಿನ ಕಥೆಯಲ್ಲಿ ಬರುವ ಹೆಬ್ಬುಲಿಯು ಗೋವನ್ನು ಭಕ್ಷಿಸದೇ ತಾನೇ ಬಲಿಯಾಗುವುದರಿಂದ ಅದು ತ್ಯಾಗಮಯಿಯಾಗಿ ಕಾಣಿಸುತ್ತದೆ. ಇದೇ ಹುಲಿಯನ್ನು ವ್ಯಾಘ್ರನೆಂದು ಕರೆಯುತ್ತೇವೆ. ಇದೆಲ್ಲಕ್ಕೂ ಮಿಗಿಲಾಗಿ ಹುಲಿ ಧಾರ್ಮಿಕ ರಂಗದಲ್ಲಿಯೂ ಮಹತ್ವ ಪಡೆದುಕೊಂಡಿದೆ. ಶಕ್ತಿ ದೇವತೆಯ ವಾಹನ ಹುಲಿ, ಶಿವನ ಉಡುಪು ಹುಲಿಚರ್ಮ, ಸಾಧು ಸಂತರು, ಮಠಾಧೀಶರು ಹಾಗೂ ರಾಜಮಹಾರಾಜರು ಸಾಧು ಸಂತರು. ಮಠಾಧೀಶರು ಹಾಗೂ ರಾಜ ಮಹಾರಾಜರು ಕೊಡುವ ಸ್ಥಳಗಳಲ್ಲಿ ಹುಲಿಯ ಚರ್ಮವನ್ನು ಹಾಸಿಗೆಯನ್ನಾಗಿ ಬಳಸುವುದು ಕಾಣುತ್ತೇವೆ. ದುರ್ಗಿ ಕಾಳಿಯರೆಲ್ಲ ಹುಲಿಯನ್ನೇ ವಾಹನವನ್ನಾಗಿ ಬಳಸಿಕೊಂಡಿದ್ದಾರೆ. ಇಂದು ಹುಲಿಯು, ಹುಲಿ ವೇಷದಲ್ಲಿ ಅನುಕರಣ ಕಲೆಯಾಗಿ ದುರ್ಗಿಕಾಳಿಯರ ಸೇವಕನಾಗಿ ಆರಾಧನೆ ಕಲೆಯಾಗಿಯೂ ಜನಮನದಲ್ಲಿ ತಳವೂರಿದೆ. ಜಾತ್ರೆ ಉತ್ಸವ ಹಾಗೂ ಧಾರ್ಮಿಕಾಚರಣೆಗಳ ಸಂದರ್ಭದಲ್ಲಿ ಪುರುಷರು ಮೈ ಮೇಲೆ ಬಣ್ಣ ಬಳಿದುಕೊಂಡು ಹೆಜ್ಜೆ ನೃತ್ಯವನ್ನು ಪ್ರದರ್ಶನಮಾಡುವರು. ಈ ಕಲೆ ಉತ್ತರ ಕರ್ನಾಟಕ ಹಾಗೂ ಹೈ.ಕ.ಪ್ರದೇಶದಲ್ಲಿಯೂ ಮೋಹರಂ ಸಂದರ್ಭದಲ್ಲಿ ಹುಲಿವೇಷ ಗಮನಾರ್ಹವಾಗಿ ಕಂಡುಬರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಲಿತರಲ್ಲಿ ಭೂತಾರಾಧನೆಯಂತಹ ಪ್ರಮುಖ ಜಾತ್ರಾ ಮಹೋತ್ಸವದಲ್ಲಿ ಹುಲಿವೇಷ ಬೇಟೆಯ ಸನ್ನಿವೇಷಗಳನ್ನು ಪ್ರದರ್ಶನ ಮಾಡುವುದು ಕಂಡುಬರುತ್ತದೆ. ಹೈ.ಕ.ಪ್ರದೇಶದಲ್ಲಿ ಮುಸ್ಲಿಂ ಮತ್ತು ದಲಿತ ಹಿಂದುಳಿದ ವರ್ಗದಲ್ಲಿ ಹರಕೆಯ ಪ್ರಯುಕ್ತ ಕಲೆ ಪ್ರದರ್ಶನಗೊಳ್ಳುತ್ತದೆ. ಇಲ್ಲಿ

ಹಲಗೆ ಪ್ರಮುಖ್ಯವಾದ್ಯವಾಗಿ ಬಳಕೆಗೊಳ್ಳುತ್ತದೆ. ಈ ಕಲೆಯು ಬೀದರ್ ಜಿಲ್ಲೆಯ ಪ್ರಮುಖ ಕಲೆಯಾಗಿದ್ದು, ಈ ಹುಲಿ ಚಿತ್ರಗಳು ದರ್ಗಾ, ಮಸೀದಗಳಲ್ಲಿ ಕಂಡು ಬರುತ್ತವೆ.

ಈ ಚಿತ್ರಗಳು, ಸಾಮಾನ್ಯವಾಗಿ ಪ್ರಾಥಮಿಕ ಬಣ್ಣಗಳಿಂದ ರಚಿಸುವರು ಹಳದಿ, ನೀಲಿ,ಕಪ್ಪು ಬಣ್ಣದಿಂದ ಸೂಕ್ಷ್ಮರೇಖೆಗಳನ್ನು ಎಳೆದಿರುವದು ಕಂಡು ಬರುತ್ತದೆ. ಈ ಚಿತ್ರಗಳಲ್ಲಿ ಹುಲಿಯು ಪ್ರಧಾನವಾಗಿದ್ದು, ಅಲ್ಲಲ್ಲಿ ಸಂಯೋಜನೆ ಸಲುವಾಗಿ ಕುದುರೆ ತೊಟ್ಟಿಲುಗಳ ಚಿತ್ರ ಬರೆದಿರುವುದು ಕಾಣಬಹುದು.

### ೧.೨.೫. ಬೀದರ್‌ನ ಸೆಗಣಿ ಗೊಂಬೆಗಳು

ಸಗಣೆ ಮಾಧ್ಯಮದ ಕಲಾಕೃತಿಗಳಲ್ಲಿ ಆಟಿಕೆಯ ವಸ್ತುಗಳು ಮತ್ತು ಸಗಣಿ ಮಾಧ್ಯಮದ ಕಲಾಕೃತಿಗಳು ಪ್ರಮುಖವಾಗಿವೆ. ಮಕ್ಕಳ ಜ್ಞಾನಾರ್ಜನೆಗೆಬಣ್ಣದ ಆಟಿಕೆಗಳು ಪ್ರಮುಖ ಪಾತ್ರವಹಿಸುತ್ತವೆ. ಸಹಸ್ರಾರು ವರ್ಷಗಳ ಹಿಂದಿನಿಂದಲೂ ಈ ವಸ್ತುಗಳಿಗೆ ಮಾನ್ಯತೆ ದೊರಕಿದೆ. ಪ್ರಾಚೀನ ಈಜಿಪ್ಟಿನ ಕೆಲ ಸಮಾಧಿಗಳಲ್ಲಿ ಆಟಿಕೆಯ ವಸ್ತುಗಳು ದೊರಕಿವೆ. ಗುಹೆಗಳಲ್ಲಿದ್ದ ಕಾಡು ಮಾನವರ ಮಕ್ಕಳೂ ಅದಕ್ಕಾಗಿ ಭರ್ಜಿಗಳನ್ನುಬಳಸುತ್ತಿದ್ದು ಕಂಡುಬರುತ್ತದೆ.[೨೮] ಜರ್ಮನಿ ದೇಶವು ಹಿಂದಿನಿಂದಲೂ ಆಟಿಕೆಗಳ ತೌರು ಮನೆಯಾಗಿತ್ತು. ಅಲ್ಲಿ ವಿಶೇಷವಾಗಿ ಮರಗಳನ್ನು ಬೆಳೆಸುತ್ತಿದ್ದುದರಿಂದ ಅನೇಕ ಆಟಿಕೆಗಳನ್ನು ಮರದಿಂದಲೇ ತಯಾರಿಸುತ್ತಿದ್ದುದು ತಿಳಿದುಬರುತ್ತದೆ.

ಗೊಂಬೆಗಳ ತಯಾರಿಕೆ ಭಾರತದ ಅತ್ಯಂತ ಪುರಾತನವಾದ ಕಲೆ. ನಾಗರಿಕತೆಯ ಉಗಮದಿಂದಲೂ ಅನೇಕ ಕುತೂಹಲಕಾರಿಯಾದ ಗೊಂಬೆಗಳನ್ನು ಕಾಣಬಹುದು. ಚರಿತ್ರೆಯ ಪೂರ್ವಯುಗವಾದ ಹರಪ್ಪಾಮೊಹೆಂಜೊದಾರೊಗಳ ಸಂಸ್ಕೃತಿಯ ಸಮಯದಲ್ಲಿ ನಗರ ನಾಗರೀಕತೆಯ ಅಸ್ತಿತ್ವವನ್ನು ಇತಿಹಾಸಕಾರರು ಸಂಶೋಧಿಸಿದ್ದಾರೆ. ಈ ಸಂಸ್ಕೃತಿಯಲ್ಲಿ ಗೊಂಬೆಗಳಿಗೆ ಒಂದು ಮಿಗಿಲಾದ ಸ್ಥಾನವಿದ್ದುದನ್ನು ಕಾಣಬಹುದು. ಹರಪ್ಪಾ ಮೆಹೆಂಜೊದಾರೊಗಳ ಸಂಶೋಧನೆಯಲ್ಲಿ ಹಾಸಿಗೆಯಲ್ಲಿ ಮಲಗಿಕೊಂಡ ಮಗುವೊಂದನ್ನು ಆರೈಸುತ್ತಿರುವ ಸ್ತ್ರೀಮೂರ್ತಿ ತುಂಬಾ ಕುತೂಹಲ ಮತ್ತು ಕರುಣಾಜನಕ ಭಾವವನ್ನು ಸೃಷ್ಟಿಸುತ್ತದೆ. ಒಂದು ವಿಧವಾದ ಒಳಲಂಗವನ್ನು ಧರಿಸಿ ಒಂದು ವಿಚಿತ್ರ ಆಕಾರದ ಟೋಪಿಯನ್ನು ಆ ಮೂರ್ತಿಗೆ ಹಾಕಲಾಗಿದೆ. ಹಾಗೆಯೇ ಆಟದ ಪದಾರ್ಥಗಳ ಸಮೂಹದಲ್ಲಿ ಪ್ರಾಣಿಗಳು ಕುತೂಹಲಕಾರಿಯಾಗಿಯೇ ಇವೆ. ತಲೆಯನ್ನು ಅತ್ತಿಂದಿತ್ತ ಅಲ್ಲಾಡಿಸಬಲ್ಲ ಗೂಳಿಗಳು ದೊರೆತಿವೆ. ಈ ಬಗೆಯ ಅಲ್ಲಾಡುವ ಅನೇಕ ತಲೆಗಳು ಈ ಸಂಶೋಧನೆಯಿಂದ ದೊರಕಿವೆ. ಕೋಳಿ ಹಾಗೂ ಪಾರಿವಾಳಗಳ ಆಕಾರದಲ್ಲಿರುವ ಪೀಪಿಗಳು ಮಣ್ಣಿನ ಚಕ್ರಗಳು ಹಾಗೂ ಶಂಖಗಳು ದೊರೆತಿವೆ. ಚಿಕ್ಕ ಆಟದ ಮಣ್ಣಿನ ಬಂಡಿಗಳು ಅತ್ಯಂತ ಪುರಾತನವಾದ ಆಟದ ವಸ್ತುಗಳು. ಇವೆಲ್ಲವೂ ಆಟದ ಸಾಮಾನುಗಳ ಕೈಗಾರಿಕಾ ಕೇಂದ್ರವಾಗಿದ್ದ ಚಾನ್ಹುದಾರೋದಲ್ಲಿ ದೊರೆತಿವೆ.

ಓರಿಸ್ಸಾದ ಸಂಬಲಪುರ ಜಿಲ್ಲೆಯ ಬಾರಾಪಲ್ಲಿ, ಅಸ್ಸಾಂನ ಬಿರಬುನ, ಪಶ್ಚಿಮ ಬಂಗಾಳದ ಬಂಕುರಾ, ಆಂಧ್ರಪ್ರದೇಶದ ಕೊಂಡಪಲ್ಲಿ, ಮಹಾರಾಷ್ಟ್ರದ ಸಾವಂತವಾಡಿ ಮತ್ತು ಕರ್ನಾಟಕದ ಕಿನ್ನಾಳ, ಗೋಕಾಕ, ಕಲಘಟಗಿ, ಚನ್ನಪಟ್ಟಣ ಮುಂತಾದ ಪ್ರದೇಶಗಳಲ್ಲಿ ಸುಂದರ ಕಲಾತ್ಮಕ ಆಟಿಕೆಗೊಂಬೆ, ತೊಟ್ಟಿಲುಗಳು, ಹಣ್ಣು ಹಂಪಲು, ಪ್ರಾಣಿ ಪಕ್ಷಿಗಳ ಕೃತಿಗಳನ್ನು ರಚಿಸುವಲ್ಲಿ ಪ್ರಸಿದ್ಧಿಯನ್ನು ಪಡೆದಿವೆ.

**೧.೨.೬. ಸಗಣಿ ಗೊಂಬೆ ರಚನಾ ವಿಧಾನ**

ಈ ಗೊಂಬೆಗಳನ್ನು ಪ್ರಧಾನವಾಗಿ ಸಗಣಿಯಿಂದಲೇ ತಯಾರಿಸಲಾಗುತ್ತದೆ. ಮೊದಲು ದನಗಳ ಸಗಣಿಯನ್ನು ಬೇಕಾದಷ್ಟು ಪ್ರಮಾಣದಲ್ಲಿ ಕೂಡಿಹಾಕಿ ಅದರೊಂದಿಗೆ ಮರದ ಹೊಟ್ಟನ್ನು ಮಿಶ್ರಮಾಡಿ ಸಗಣಿಯನ್ನು ಸಹ ಮಡಿಕೊಳ್ಳುತ್ತಾರೆ. ಗೊಂಬೆಗಳನ್ನಾಗಿಸಲು ಬೇರೆ ಬೇರೆ ಗಾತ್ರದ ಗೊಂಬೆಯ ಪಡಿಯಚ್ಚುಗಳಿರುತ್ತವೆ. ಈ ಸಾಚಾದಲ್ಲಿ ಸಗಣಿಯನ್ನು ತುಂಬಿ ಅದರ ಮಧ್ಯದಲ್ಲಿ ಬೆನ್ನಿಗೊಂದು ಕೈ ಮತ್ತು ಕಾಲುಗಳಿಗೆ ಸಜ್ಜೆಯ ಅಥವಾ ಜೋಳದ ಬಿದಿರಿನಕಡ್ಡಿ ದಂಟನ್ನು ಸೇರಿಸಿ, ಅವುಗಳನ್ನು ಸಾಚಾದಿಂದ ಬಡಿಸಿ ಬಿಸಿಲಿಗೆ ಆರಲು ಹಾಕುತ್ತಾರೆ. ಕರಡು ಶಿಲ್ಪವನ್ನು ರಚಿಸಿಕೊಂಡು ನಂತರ ಮತ್ತೆ ಕೈಯಿಂದ ತಿದ್ದಿ ತೀಡಿ ಶಿಲ್ಪವನ್ನು ಪೂರ್ಣಗೊಳಿಸಲಾಗುತ್ತದೆ. ಇಂಥ ನೂರಾರು ಗೊಂಬೆಗಳನ್ನು ತಯಾರಿಸಿಕೊಂಡು ಅವನ್ನೆಲ್ಲಾ ಬಿಸಿಲಿನಲ್ಲಿ ಒಂದು ವಾರ ಕಾಲ ಒಣಗಿಸಲಾಗುತ್ತದೆ. ಈ ಶಿಲ್ಪದ ಕೈಕಾಲುಗಳು ನಿಲ್ಲುವಂತೆ ಸಗಣಿಯ ಒಳಗೆ ಕಟ್ಟಿಗೆ ಕಡ್ಡಿಗಳನ್ನು ಮುಳಗಿಸಲಾಗಿರುತ್ತದೆ. ಇದು ಮೊದಲನೆಯ ಹಂತ.

ಎರಡನೆಯ ಹಂತದಲ್ಲಿ ಒಣಗಿದ ಗೊಂಬೆ ಶಿಲ್ಪಗಳಿಗೆ ಹುಣಸೆ ಬೀಜವನ್ನು ಜಜ್ಜಿ ಬೀಸಿದ ಹಿಟ್ಟಿನೊಂದಿಗೆ ಸಗಣಿ ಮತ್ತು ಅಂಟು ಸೇರಿಸಿ ಹದ ಮಾಡಿಕೊಂಡಿರುವ ಸರಿಯನ್ನು ಬಳೆಯುತ್ತಾರೆ. ನಂತರ ಒಣಗಿಸುತ್ತಾರೆ. ಅಂಟಂಟಾಗಿರುವ ಈ ಸರಿ ಹಸಿಯಾಗಿರುವಾಗಲೇ ಹತ್ತಿ ಬಟ್ಟೆಯ ತುಂಡುಗಳನ್ನು ಮೆತ್ತಲಾಗುತ್ತದೆ. ನಂತರ ಈ ಗೊಂಬೆಗಳನ್ನು ಒಂದೆರಡು ದಿನಗಳು ಕಾಲ ಒಣಗಿಸಲಾಗುತ್ತದೆ. ಇದು ಎರಡನೇ ಹಂತ. ಬಟ್ಟೆಯ ತುಂಡುಗಳನ್ನು ಮೆತ್ತಿ ಒಣಗಿಸಿದ ನಂತರ ಅವುಗಳ ಮೇಲೆ ಜಾಲಿ ಅಂಟು ಹಾಗೂ ಸೀಮೆ ಸುಣ್ಣದ ಪುಡಿ ಬೆರೆಸಿದ ಸರಿಯನ್ನು ತಯಾರಿಸಿಕೊಂಡು ಮತ್ತೆ ಆ ಗೊಂಬೆಗಳಿಗೆ ಬಳೆಯಲಾಗುತ್ತದೆ. ಮತ್ತೆ ಒಣಗಿಸಲಾಗುತ್ತದೆ. ಇದು ಮೂರನೆ ಹಂತ. ನಾಲ್ಕನೆ ಹಂತವೆಂದರೆ ಗೊಂಬೆಯ ಶಿಲ್ಪಗಳಿಗೆ ಸುಣ್ಣ ಹಚ್ಚುವ ಮುನ್ನ ಬಿಳಿ ಬಣ್ಣವನ್ನು ಪೂರ್ತಿಗೊಂಬೆಗಳಿಗೆ ಬಳೆಯುತ್ತಾರೆ. ಆ ಮೇಲೆಮಾರುಕಟ್ಟೆಯಲ್ಲಿ ಸಿಗುವ ಪುಡಿ ಬಣವನ್ನು ತಂದು ಅದರಲ್ಲಿ ಅಂಟು ಹಾಗೂ ನೀರನ್ನು ಬೆರಸಿ ತಯಾರಿಸಿದ ವಿವಿಧ ಬಣ್ಣಗಳನ್ನು ಗೊಂಬೆಗಳಿಗೆ ಬಳೆಯಲಾಗುವುದು. ಹಳದಿಯ ಮೈಬಣ್ಣವಾದರೆ ಕೆಂಪು, ಹಸಿರು, ನೀಲಿ, ಗುಲಾಬಿ, ತಿಳಿ ನೀಲಿ ಮುಂತಾದ ಬಣ್ಣಗಳನ್ನು ಬಟ್ಟೆಯಂತೆ ಕಾಣುವ ಹಾಗೆ ವಿನ್ಯಾಸಗೊಳಿಸಲಾಗಿರುತ್ತದೆ. ಆಮೇಲೆ ಕಪ್ಪು ಬಣ್ಣದಿಂದ ಗೊಂಬೆಗಳಿಗೆ ಕಣ್ಣು, ಮೂಗು, ಬಾಯಿ, ಕೈ ಬೆರಳು, ಕಾಲಬೆರಳು, ಕಿವಿ ಮತ್ತು ಆಭರಣಗಳನ್ನು ರೇಖಾತ್ಮಕವಾಗಿ ಬರೆಯಲಾಗುವುದು. ಹೀಗೆ ನಾಲ್ಕನೆಯ ಹಂತದಲ್ಲಿ ಬಣ್ಣಗಿಂದ ಪೂರ್ಣಗೊಂಡ ಶಿಲ್ಪಗಳು ಇನ್ನೊಂದು ಹಂತದಲ್ಲಿ ಹೊಳಪನ್ನು ಪಡೆಯುತ್ತವೆ. ಕೆಂಪು ರಾಳ ಮತ್ತು ಗಚ್ಚೆ ರಾಳ ಸೇರಿಸಿ ತಯಾರಿಸಿಕೊಂಡ ಎಣ್ಣೆಯನ್ನು ಗೊಂಬೆಗಳಿಗೆ

ಹಚ್ಚಲಾಗುವುದು. ಈ ಎಣ್ಣೆಯಿಂದ ಗೊಂಬೆ ಶಿಲ್ಪಗಳಿಗೆ ಹೊಳಪು ಬರುವುದಲ್ಲದೆ, ಹಚ್ಚಿದ್ದ ಬಣ್ಣವು ಗಟ್ಟಿಯಾಗಿ ಉಳಿಯುವುದು ಎಂದು ಗೊಂಬೆ ತಯಾರಕರು ಹೇಳುತ್ತಾರೆ.

೧.೨.೭. ಸಗಣಿ ಗೊಂಬೆಗಳು

ಯಾವುದೇ ದೇಶ ಅಥವಾ ನಾಡಿನ ಜನಪದರ ಸೃಷ್ಟಿಯಲ್ಲಿ ಆ ನಾಡಿನ ಸಾಂಸ್ಕೃತಿಕ ಬದುಕು, ಆಚಾರ, ವಿಚಾರಗಳು ವ್ಯಕ್ತವಾಗುತ್ತವೆ. ಇವರು ಮಣ್ಣಿಗೆ ಹತ್ತಿರವಾಗಿ ಬದುಕುವುದರಿಂದ ಆ ನಾಡಿನ ಸಾಂಸ್ಕೃತಿಕ ಸತ್ವವನ್ನು, ಮಣ್ಣಿನ ಸೊಗಡನ್ನು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಪಡಿಸುತ್ತಾರೆ. ಶಿಷ್ಟರು ಆಯಾನಾಡಿನ ಮಣ್ಣಿನ ಸಂಪರ್ಕದಿಂದ ದೂರ ಇರುವುದರಿಂದ ಅವರ ಸೃಷ್ಟಿಗಳಲ್ಲಿ ಆ ನಾಡಿನ ವೈಶಿಷ್ಟ್ಯ ಅಭಿವ್ಯಕ್ತಿಗೊಳ್ಳುವುದಿಲ್ಲ ಎಂದು ಹೇಳಬೇಕು.

ನಮ್ಮ ನಾಡಿನಲ್ಲಿ ಮಾರ್ಗಶಿಲ್ಪ ರಚನೆಯು ವಿಜಯನಗರ, ಚಾಲುಕ್ಯ, ಹೊಯ್ಸಳ ಮುಂತಾದ ಶೈಲಿಗಳಲ್ಲಿ ಶಿಲಾ ಮಾಧ್ಯಮದಲ್ಲಿ ಅಭಿವ್ಯಕ್ತಿಸಲ್ಪಟ್ಟರೆ, ದೇಶಿ ಶಿಲ್ಪವು ಕಲ್ಲು, ಮರ, ಮಣ್ಣು, ಸಗಣಿ,ಅರಿವೆ, ಅರಳೆ ಮುಂತಾದ ಹಲವಾರು ಮಾಧ್ಯಮಗಳಲ್ಲಿ ಅಭಿವ್ಯಕ್ತಿ ಪಡೆದು ವೈವಿಧ್ಯವನ್ನೇ ಸಾಧಿಸಿದೆ. ವರ್ಷದುದ್ದಕ್ಕೂ ಬರುವ ಅನೇಕ ಹಬ್ಬ ಹರಿದಿನಗಳಲ್ಲಿ ಅವುಗಳ ಆಚರಣೆಯ ಸಂದರ್ಭಗಳಲ್ಲಿ ರಚಿಸಲಾಗುವ ಅನೇಕ ತರಹದ ಶಿಲ್ಪಗಳು ನಮ್ಮಸಂಸ್ಕೃತಿ, ಸಂಪ್ರದಾಯಗಳ ಸಂಕೀರ್ಣತೆಯನ್ನುಹೇಳುವ ಸಂಕೇತಗಳಾಗಿ ನಿಂತಿವೆ. ಈ ಅರ್ಥದಲ್ಲಿ ಮಾರ್ಗ ಅಥವಾ ಶಿಷ್ಟಶಿಲ್ಪಕಲೆಗಿಂತ ಜನಪದ ಶಿಲ್ಪಕಲೆಯೇ ಹೆಚ್ಚು ವೈವಿಧ್ಯಮಯ ಎಂದು ಹೇಳಬಹುದು. ಅದು ದುಡಿಮೆಯೊಂದಿಗೆ ಸಹಚರ್ಯ ಸಾಧಿಸಿದೆ.

ಇಟ್ಟರೆ ಸಗಣಿಯಾದೆ, ತಟ್ಟಿದರೆ ಕುರುಳಾದೆ

ನೀ ನಾರಿಗಾದೆಯೋ ಎಲೆ ಮಾನವಾ

ಎಂದು ಗೋವು ಮಾನವನಿಗೆ ಸದಾಒಳ್ಳೆಯ ಕೆಲಸ ಮಾಡಲು ಎಚ್ಚರಿಸುವಂತೆ, ಸಗಣಿಯ ಗೊಂಬೆಗಳು ಮಕ್ಕಳಿಗೆ ತಾಯಿ ಮಗುವಿನ ಬಾಂಧವ್ಯ, ಪ್ರೀತಿ, ವಾತ್ಸಲ್ಯವನ್ನು ಬೆಳೆಸಿಕೊಳ್ಳುವುದನ್ನು ಕಲಿಸಲು ನೆರವಾಗುತ್ತವೆ.

ಸಾವಿರಾರು ವರ್ಷಗಳಿಂದ ಸುಶಿಕ್ಷಿತರೆಲ್ಲರಿಗೂ ಪರಿಚಯವಿರುವಂತೆ, ಶಾಸ್ತ್ರ ಶುದ್ಧವಾಗಿ, ಪ್ರಮಾಣಬದ್ಧವಾಗಿ, ತಾಳ ಮಾನವ ಪ್ರಕಾರ ರಚನೆಯಾಗುತ್ತಾ ಜನಾಕರ್ಷಣೆಯ ಕೇಂದ್ರಗಳಾಗಿ, ಪೂಜೆ ಮತ್ತು ಯಾತ್ರಾಸ್ಥಳವಾಗಿ ಬಹುಕಾಲದಿಂದ ಖ್ಯಾತವಾಗಿರುವ ಶೈಲಿಯಲ್ಲಿ ರಚನೆಗೊಂಡಿರುವ ಶಿಲ್ಪ ಕಲೆಯಾಗಿ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದು ಶಿಷ್ಟಪದ ಶಿಲ್ಪಕಲೆ. ಆದರೆ ಜನಪದ ಶಿಲ್ಪಕಲೆಯಲ್ಲಿ ಷಡಂಗವಾಗಲಿ, ತಾಳ ಮಾನ ಪ್ರಮಾಣಗಳಾಗಲಿ, ನಿರ್ದಿಷ್ಟ ಶೈಲಿ, ಸಿದ್ಧಾಂತ ವಿನ್ಯಾಸಗಳಾಗಲಿ ಇಂತಹ ಯಾವ ಕಟ್ಟಳೆಗಳೂ ಇಲ್ಲದೆ ಮುಕ್ತ ರಚನೆಯಾಗಿವೆ. ಜನಪದ ಶಿಲ್ಪಕಲೆ ಜನಪದರ ಬದುಕೆ ಆಗಿದ್ದರಿಂದ ಅವರ ಬದುಕಿನ ಬಣ್ಣವನ್ನು ಅವರ ಶಿಲ್ಪಗಳಲ್ಲಿ ಕಾಣಬಹುದು. ನಿತ್ಯೋಪಯೋಗಿ ಮಾಧ್ಯಮಗಳಾದ

ಸಗಣಿ, ಕಿಟ್ಟ, ಮಣ್ಣು, ಕಟ್ಟಿಗೆಗಳು ಹಳೆಯ ಬಟ್ಟೆ ಮುಂತಾದವುಗಳು ಜನಪದರ ಶಿಲ್ಪಕಲೆಯ ಮಾಧ್ಯಮಗಳು. ಶಿಷ್ಟರಲ್ಲಿ ಸೂಕ್ಷ್ಮಗಾರಿಕೆ, ಕೃತಕತೆ, ಪ್ರಮಾಣ ಬದ್ಧತೆ, ಸೌಂದರ್ಯ ನಿಷ್ಠತೆಗಳು ಇದ್ದರೆ, ಜನಪದರ ಸಗಣಿ ಗೊಂಬೆಗಳಲ್ಲಿ ಏನಿದ್ದರೂ ಸಹಜತೆ, ಮುಗ್ಧತೆಗಳೇ ವಿಶೇಷವೆನಿಸುತ್ತಿವೆ.

ದೀಪಾವಳಿ ಅಮವಾಸೆಯ ಲಕ್ಷ್ಮೀ ಪೂಜೆಯ ಮರು ದಿವಸ ಬಲಿಪಾಡ್ಯದಂದು ಸಗಣಿಯಿಂದ ಮಾಡಿದ ಪಾಂಡವರನ್ನು ಪ್ರತಿಷ್ಠಾಪನೆ ಮಾಡುತ್ತಾರೆ. ಸಗಣಿಯನ್ನು ಶಂಕಾಕೃತಿಯಲ್ಲಿ ಮಾಡಿ ಐದು ಪಾಂಡವರನ್ನು ನಿರ್ಮಿಸುತ್ತಾರೆ. ಅವುಗಳ ತಲೆಯ ಮೇಲೆ ಒಂದು ದುಂಡನೆಯ ಭಾಗವನ್ನು ಜೋಡಿಸುತ್ತಾರೆ. ಅವರಿಗೆ ನೈವೇದ್ಯ ಮಾಡುವ ಆಹಾರವಾದ ಮೊಸರು ಅನ್ನ ಹಾಗೂ ಹೊನ್ನ ಅಂಬಲಿ ಅಚ್ಚ ಹಳದಿಯ ಹೂವುಗಳನ್ನು ಹಾಗೂ ಉತ್ತರಾಣಿಯ ಕಡ್ಡಿಗಳನ್ನು ಆ ದುಂಡನೆಯ ಭಾಗದಲ್ಲಿ ಚುಚ್ಚುತ್ತಾರೆ. ಈ ಐವರು ಪಾಂಡವರ ಮಧ್ಯ ಒಂದು ಸಗಣಿಗೊಂಬೆ ಮಾಡಿರುತ್ತಾರೆ. ಬಹುಶಃ ಗೊಂಬೆಯೇ ವಧೆ ಮಾಡಲ್ಪಟ್ಟ ದುರ್ಯೋಧನನ ಸಂಕೇತವಿರಬಹುದು. ಈ ಪಾಂಡವರು ಕೂಡಾ ದುಷ್ಟಶಕ್ತಿಗೆ ಕೊನೆ ಇದೆ ಎನ್ನುವುದನ್ನು ತೋರುವ ಹಾಗೂ ಇತಿಹಾಸವನ್ನು ಸಾಮಾನ್ಯರು ಮೆಲಕು ಹಾಕುವ ಜನಪದ ಬಗೆ ಇದು.

ತಾಯಿ ತನ್ನ ಮಗುವನ್ನು ಬಗಲಲ್ಲಿ ಹೇಗೆ ಕೂಡಿಸಿಕೊಳ್ಳುವ ಹಾಗೆಯೇ ಈ ಸೆಗಣಿ ಗೊಂಬೆಯು ತನ್ನ ಬಗಲಲ್ಲಿ ಒಂದು ಮಗುವನ್ನು ಕೂಡಿಸಿಕೊಂಡಿರುತ್ತದೆ. ಈ ಪಾಠವನ್ನು ಮಕ್ಕಳು ಪಾಲಿಸಲೆಂದು ಆ ಗೊಂಬೆಯ ಕಾಲುಗಳನ್ನು ಅಗಲ ಮಾಡಿರುತ್ತಾರೆ. ಮಕ್ಕಳು ಆ ಗೊಂಬೆಗಳನ್ನು ತಮ್ಮ ನಡದಲ್ಲಿ ಕೂಡಿಸಿಕೊಂಡು ಮಗುವಿನ ತಾಯಿಗಿಂತಲೂ ಚೆನ್ನಾಗಿ ನಟಿಸುತ್ತಾ ಆಟವಾಡುತ್ತಾರೆ. ಇದೇ ಸಗಣಿಯಿಂದ ಗುಬ್ಬಿ, ಕಿಸಗಾಲ ಗೊಂಬೆ, ತಾಯಿ ಮಗು, ನಂದಿ, ಶಿವ ಪಾರ್ವತಿ, ನವಿಲು, ಚಿಗರೆಯ ಮುಖ ಬೀಸುವಕಲ್ಲು ತೊಟ್ಟಿಲು, ಬಟ್ಟಿಲು ಆನೆ, ಬಸವಣ್ಣ ಲಕ್ಷ್ಮಿಯ ಮುಖ, ಕೌಂತಿಪಟ್ಟ ಮತ್ತು ಆಟಿಕೆ ಸಾಮಾನುಗಳಾದ ಬಂಡಿ, ಲಾರಿ, ಕಾರುಗಳನ್ನು ಕಟ್ಟಿಗೆ ಪಟ್ಟಿಗಳಿಂದ ರಚಿಸುತ್ತಾರೆ. ಈ ಸಗಣಿಗೊಂಬೆಗಳನ್ನು ತಯಾರಿಸುವ ಕಲಾವಿದರು ಹೇಳುವುದೇನೆಂದರೆ ನಮ್ಮ ದುಡಿತಕ್ಕೆ ತಕ್ಕ ಸಂಭಾವನೆ ದೊರೆಯುವುದಿಲ್ಲ, ಮೊದಲಿನಿಂದ ವಂಶಪಾರಂಪರಿಕವಾಗಿ ಬಂದ ಕಲೆ ಎಂದು ಮುಂದುವರಿಸಿಕೊಂಡು ಹೊರಟ್ಟಿದ್ದೇವೆ ಎನ್ನುತ್ತಾರೆ.

ಸಗಣಿಗೊಂಬೆಗಳನ್ನು ಬನಶಂಕರಿ, ಇಟಗಿ ಮತ್ತು ಹಂಪಿ, ಹುಲಿಗಿಜಾತ್ರೆಯಲ್ಲಿ ಇವುಗಳ ಬೇಡಿಕೆ ಇದೆ. ಈಗಲೂ ಕೂಡ ಜಾತ್ರೆಯಲ್ಲಿ ಕೇವಲ ಐದು ರೂಪಾಯಿಗಳಿಗೆ ಒಂದರಂತೆ ಮಾರಾಟ ಮಾಡಲಾಗುತ್ತದೆ. ಈ ಗೊಂಬೆಗಳು ಮಾರಾಟಗಾರರಿಗೆ ಕಡಿಮೆ ಆದಾಯವನ್ನು ತಂದುಕೊಡುತ್ತದೆ. ಅದು ಸಹ ವರ್ಷಪೂರ್ತಿ ಸಗಣಿ ಗೊಂಬೆಗಳನ್ನು ರಚಿಸುತ್ತಾ ಇರುತ್ತಾರೆ.

ಮನರಂಜನೆಯ ಸಲುವಾಗಿ ಆಡುವ ಆಟಗಳು ಹಲವಾರು ಇವೆ. ಅವುಗಳಲ್ಲಿ ಕೆಲವು ಆಟಗಳಲ್ಲಿ ಆಕರ್ಷಕವಾದ ಶಿಲ್ಪಗಳು ಆಟದ ವಸ್ತುಗಳಾಗಿ ಬಳಸಲ್ಪಡುತ್ತವೆ. ಮಕ್ಕಳಾಟದಲ್ಲಿ ಅನೇಕ ವಿಧದ ಆಟಿಕೆ ಶಿಲ್ಪಗಳಿರುತ್ತವೆ. ಆದರೆ ಜನಪದರ ಶಿಲ್ಪದ ದೃಷ್ಟಿಯಿಂದ ಗೊಂಬೆ ಶಿಲ್ಪಗಳು ಗಮನಾರ್ಹವಾಗುತ್ತವೆ. ಈ ಗೊಂಬೆಗಳಲ್ಲಿ ಕೂಸಿನ ಗೊಂಬೆ, ಕೊಡದ ಗೊಂಬೆ ತೊಟ್ಟಿಲು, ಲಕ್ಷ್ಮಿಯ ಮುಖ, ಬಟ್ಟಲು,

ಮುಂತಾದವುಗಳು ಪ್ರಮುಖವಾಗಿವೆ. ಇವೆಲ್ಲ ಸಾಮಾನ್ಯವಾಗಿ ಮಕ್ಕಳಿಗೆ ಆಟದೊಂದಿಗೆ ಮನರಂಜನೆಯನ್ನು ಒದಗಿಸುತ್ತದೆ. ಹಾಗೂ ಪೂಜೆಗೂ ಸಹ ಬಳಸುತ್ತಾರೆ. ಈ ಗೊಂಬೆ ಶಿಲ್ಪಗಳ ಮಾಧ್ಯಮ ರಚನಾ ಕ್ರಮ ಎಲ್ಲವೂ ಕುತೂಹಲಕರವಾಗಿರುತ್ತವೆ. ಈ ಗೊಂಬೆಗಳ ಸೌಂದರ್ಯವನ್ನು ಸವಿಯುವುದೇ ಒಂದು ಸೊಗಸು.

ಉತ್ತರ ಕರ್ನಾಟಕದ ಪ್ರತಿಯೊಂದು ಊರಿನ ಮನೆ ಮನೆಗಳಲ್ಲಿ ಕಂಡುಬರುವ ಸೆಗಣಿ ಗೊಂಬೆ ಶಿಲ್ಪಗಳು ಅಪ್ಪಟ ಜಾನಪದ ಸೊಗಡನ್ನು ಉಳಿಸಿಕೊಂಡು ಬಂದವುಗಳಾಗಿವೆ. ಗೊಂಬೆಗಳು ಕಾಲನ್ನು ಅಗಲ ಮಾಡಿ ಪ್ರಸವ ಭಂಗಿಯಲ್ಲಿ ಕುಳಿತ ಶಿಲ್ಪಗೊಂಬೆಗಳಾಗಿವೆಯಲ್ಲದೇ ಪ್ರತಿಯೊಂದು ಗೊಂಬೆಯ ಬಗಲಲ್ಲಿ ಕೂಸನ್ನು ಹೊಂದಿರುತ್ತದೆ. ಮೈ ಬಣ್ಣವಾಗಿ ಹಳದಿ ಬಣ್ಣ, ಕುಪ್ಪಸಕ್ಕೆ ಗುಲಾಬಿ, ಲಂಗಕ್ಕೆ ತಿಳಿ ನೀಲಿ, ಬಣ್ಣವನ್ನು ಲೇಪಿಸುತ್ತಾರೆ.ಕಪ್ಪು ಬಣ್ಣದಿಂದ ಕಣ್ಣು, ಕಿವಿ, ಕೈ ಬೆರಳು, ಕಾಲ್ಬೆರಳು ಮತ್ತು ಆಭರಣಗಳನ್ನು ರೇಖೆಯಿಂದ ಬರೆಯಲಾಗುವುದು. ಶಿಲ್ಪಗಳು ಕೈ ಕಾಲುಗಳನ್ನು ಅಗಲವಾಗಿ ಮುಂದಕ್ಕೆ ಚಾಚಿ ಕುಳಿತ ಭಂಗಿಯಲ್ಲಿರುತ್ತದೆ. ಸೆಗಣಿ ಗೊಂಬೆಗಳನ್ನು ಸಂತಾನಪೇಕ್ಷಿಗಳು ಒಯ್ಯುತ್ತಾರೆಂದು ಪ್ರತೀಕ ಇದ್ದು, ಮಕ್ಕಳಲ್ಲಿ ತಾಯ್ತತನದ ಅರಿವು ಮೂಡಿಸಲು ಸೆಗಣಿ ಗೊಂಬೆಗಳನ್ನು ಖರೀದಿಸಿ ಮನೆಯಲ್ಲಿ ಪ್ರದರ್ಶಿಸುತ್ತಾರೆ.

ಹೀಗೆ ಸೆಗಣಿಗೊಂಬೆಯ ತಯಾರಿಕೆಯು ವಿಭಿನ್ನ ರೂಪದ ಕಲೆಯಾಗಿ ಮಕ್ಕಳಿಂದ ವೃದ್ಧರಾದಿಯಾಗಿ ಬಳಕೆಯಾಗುವ ಕಲಾತ್ಮಕ ವಸ್ತುಗಳನ್ನು ಸಿದ್ಧಪಡಿಸುವಲ್ಲಿ ಕಲಾವಿದರ ಶ್ರಮ ಸ್ಮರಣೀಯ ಎನ್ನಬಹುದು.

### ೨. ಚರ್ಮದ ಮೇಲೆ ರಚಿಸುವ ಚಿತ್ರಕಲೆ

#### ೨.೧. ಹಚ್ಚೆ ಚಿತ್ರಕಲೆ

ಕಲೆಗಳನ್ನು ಜನಪದ ಕಲೆ ಮತ್ತು ಶಿಷ್ಟ ಕಲೆ ಎಂದು ವಿಭಾಗಿಸಬಹುದು. ಜನಪದ ಕಲೆಗಳು ಜನಸಾಮಾನ್ಯರಾದ ಓದು ಬರಹ ಬಾರದ ಹಳ್ಳಿಯ ಜನರಿಂದ ಬಂದದ್ದು. ಶಿಷ್ಟ ಕಲೆಗಳು ಓದು ಬರಹ ಬಲ್ಲ ಜನರಿಂದ ಬಂದವುಗಳು. ಶಿಷ್ಟ ಕಲೆಗಳಿಗೆ ನಮ್ಮ ಜನಪದ ಕಲೆಗಳೇ ಮೂಲಬೇರು. ಶಿಷ್ಟ ಕಲೆಗಳು ತುಂಬಾ ಸೂಕ್ಷ್ಮ ಹಾಗೇ ಕೃತಕವಾಗಿರುತ್ತವೆ. ಜನಪದ ಕಲೆಗಳು ತೀರ ಸರಳ ಹಾಗೆ ಸಹಜವಾಗಿರುತ್ತವೆ. ಇವು ಕಲಿತವರ ಕಲಿಯದವರ ಮನಸ್ಸನ್ನು ಆಕರ್ಷಿಸುತ್ತವೆ. ಈ ಜನಪದ ಕಲೆಗಳು ನಮ್ಮ ಜನಪದರಿಗೆ ಮನರಂಜನೆಯ ಸಾಧನಗಳಾಗಿವೆ. ಮಾತ್ರವಲ್ಲದೆ, ಆಯಾ ಧರ್ಮದ ಸಂಕೇತಗಳಾಗಿವೆ.

ಜನಪದ ಕಲೆಗಳಲ್ಲಿ ಕುಣಿತ, ನಾಟಕ, ಚಿತ್ರ ಮೊದಲಾದ ಅನೇಕ ಪ್ರಕಾರಗಳಿವೆ. ಜನಪದರು ತಮಗೆ ಸುಖ ಸಂತೋಷವಾದಾಗ ಎಲ್ಲರೂ ಸೇರಿ ಕುಣಿದುಕುಪ್ಪಳಿಸುತ್ತಾರೆ. ದುಡಿದು ಬೇಸರವಾದಾಗ ಸಣ್ಣಾಟ ದೊಡ್ಡಾಟಗಳಂಥ ಬಯಲಾಟಗಳನ್ನು ಆಡುತ್ತಾರೆ. ಇದರಿಂದ ಮನಸ್ಸಿಗೆ ನೆಮ್ಮದಿ ಪಡೆಯುತ್ತಾರೆ. ತಾವು ಕಂಡ ಚಿತ್ರ ವಿಚಿತ್ರಗಳನ್ನು ಗೆರೆ ಕೊರೆಯುತ್ತಾರೆ.[೫] ಆ ಮೂಲಕ ಚಲುವು ಅಥವಾ ಅಂದವನ್ನು ಕಾಣುತ್ತಾರೆ. ಹಚ್ಚೆಯ ಕಲೆಯು ಚಿತ್ರಕಲೆಯ ರೂಪಕ್ಕೆ ಸೇರುತ್ತದೆ.

ಮುತ್ತೈದೆತನದ ಸಂಕೇತವಾಗಿರುವ ಹಣಚೆ, ಅಥವಾ ಹಚ್ಚೆ ಎಂಬುದು ಒಂದು ಜನಪದ ಕಲೆ. ಪರಂಪರಾಗತವಾದ ಈ ಕಲೆ ಇಂದಿಗೂ ನಮ್ಮ ಜನಪದರಲ್ಲಿ ಜೀವಂತವಾಗಿದೆ. ಈ ಕಲೆ ಎಲ್ಲರ ಮನಸ್ಸನ್ನು

---

೫. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೭೯

ಸೆಳೆಯುತ್ತದೆ. ಬಹುಶಃ ಆದಿಮಾನವ ತಾನು ಇನ್ನಷ್ಟು ಸುಂದರವಾಗಿ ಕಾಣಿಸಿಕೊಳ್ಳಬೇಕೆಂಬ ಹಂಬಲದಿಂದ ತನ್ನ ಮೈ ಮೇಲೆ ಸುಂದರವಾದ ಚಿತ್ತಾರಗಳನ್ನು ಬರೆಯಿಸಿಕೊಂಡಿರಬೇಕೆಂದು ತೋರುತ್ತದೆ. ಈ ಕಲೆ ತುಂಬಾ ಪ್ರಾಚೀನ ಕಾಲದಿಂದಲೂ ನಮ್ಮ ಜನಪದರಲ್ಲಿ ತುಂಬಾ ಆಕರ್ಷಕ ಹಾಗೂ ವ್ಯಾಪಕವಾಗಿ ಬೆಳೆದು ಕೊಂಡು ಬಂದಿದೆ.

ಹಚ್ಚೆ ಎನ್ನುವ ಪದವು ಪ್ರಾದೇಶಿಕವಾಗಿ ಭಿನ್ನತೆಯನ್ನು ಪಡೆದಿದೆ. ಇದನ್ನು ಕರ್ನಾಟಕದ ಬೇರೆ ಬೇರೆ ಕಡೆಗೆ ಅಚ್ಚೆ ಹಂಚಿ, ಅಣಚು ಹಣಚೆ, ಅಂಚಿ, ಅಚ್ಚಿ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಪಚ್ಚೆ, ಹಸಿರು ಎಂಬುದರಿಂದ ಹಚ್ಚೆ ಎಂಬ ಹೆಸರು ಬಂದಿದೆ. ತಮಿಳುಮತ್ತು ಮಲೆಯಾಳಿ ಭಾಷೆಯಲ್ಲಿ ಇದಕ್ಕೆಪಚೆ,ಪಚ, ಪಚ್ಚ, ಎಂಬ ಸಂವಾದಿ ರೂಪಗಳಿವೆ. ಅಣಚಿ ಎಂಬುದಕ್ಕೆ ಕನ್ನಡದಲ್ಲಿ ಮುತ್ತೈದೆ, ಸುಮಂಗಲಿ, ಸೌಭಾಗ್ಯವತಿ, ಗರತಿ ಮೊದಲಾದ ಸಾಂಸ್ಕೃತಿಕ ಅರ್ಥಗಳಿವೆ. ಅಣಚಿ, ಹಣಚಿಯಾಗಿ ಅದು ಮುಂದೆ ಅಚ್ಚೆ, ಹಚಿ, ಹಚ್ಚೆ ಎಂದಾಗಿರಬೇಕು.

### ೨.೨. ಹಚ್ಚೆಯ ಪ್ರಾಚೀನತೆ

ಹಚ್ಚೆಕಲೆಯ ಹುಟ್ಟಿನ ಬಗೆಗೆ ನಮಗೆ ಯಾವ ಖಚಿತವಾದ ವಿವರಣೆಯಾಗಲಿ ದಾಖಲೆಯಾಗಲಿ ದೊರಕುವುದಿಲ್ಲ. ಕೇವಲ ಉಹಾತ್ಮಕ ಆಧಾರಗಳ ನಿಟ್ಟುಕೊಂಡು ಇದರ ಹುಟ್ಟು ಬೆಳವಣಿಗೆಯನ್ನು ಗುರುತಿಸಬೇಕಾಗಿದೆ. ಹಚ್ಚೆಕಲೆಯ ಹುಟ್ಟನ್ನು ಮಾನವನ ನಾಗರಿಕ ಅರೆನಾಗರಿಕ ನಾಗರಿಕ ಹಂತದ ಬೆಳವಣಿಗೆಯಲ್ಲಿ ಕಾಣಬಹುದು. ಕಾಡು ಮಾನವ ನಿಸರ್ಗದತ್ತವಾಗಿ ಸಿಕ್ಕಿರುವ ಅನ್ನ, ನೀರು, ಗಾಳಿ, ಬೆಳಕನ್ನು ಪಡೆಯುವುದರ ಜೊತೆಗೆ ಕ್ರಮೇಣ ತನ್ನ ಇರುವಿಕೆಗಾಗಿ ಮತ್ತು ದೇಹದ ರಕ್ಷಣೆಗಾಗಿ ಅನೇಕ ಮಾರ್ಗೋಪಾಯಗಳನ್ನು ಕಂಡುಕೊಂಡನು. ಕಣ್ಣಿಗೆ ಸುಂದರವಾಗಿ ಕಾಣುವ ಬಣ್ಣಬಣ್ಣದ ಪಶುಪಕ್ಷಿ ಪ್ರಾಣಿಗಳನ್ನು ಹಾಗೂ ಬಗೆಬಗೆಯ ಗಿಡಮರಗಳನ್ನು, ಎಲೆಗಳನ್ನು ಕಂಡುತಾನು ಅಂದವಾಗಿ ಕಾಣಿಸಿಕೊಳ್ಳಬೇಕೆಂದು ಹಂಬಲಿಸಿದ. ಕಾಡು ಮಾನವ ಅಲ್ಲಿಯ ಎಲೆ ಮೊದಲಾದವುಗಳನ್ನು ದೇಹಕ್ಕೆ ತಿಕ್ಕಿ ತನ್ನ ಮೈ ಬಣ್ಣವನ್ನು ಬದಲಾಯಿಸಿಕೊಂಡು ಖುಷಿ ಪಡೆದ, ಸಾಲದಕ್ಕೆ ಆ ಬಗೆಯ ಮೈ ಬಣ್ಣವು ಶಾಶ್ವತವಾಗಿ ಉಳಿಯುವಂತೆ ಎಲೆಗಳಿಂದ ಬಣ್ಣ ತಯಾರಿಸಿಕೊಂಡು ಮೈ ಮೇಲೆ ತರತರಹದ ಚಿತ್ತಾರಗಳನ್ನು ಬರೆದುಕೊಂಡು ಇನ್ನಷ್ಟು ಖುಷಿಪಡೆದನು. ಬಹುಶಃ ಕಾಡುಮಾನವನ ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ತನ್ನ ಮೈ ಬಣ್ಣವನ್ನು ಅವುಗಳಂತೆ ಬದಲಾಯಿಸಿಕೊಂಡಿರುವುದು ಮೂಲಕಾರಣವಾಗಿರಬೇಕು ಈ ಬಗೆಯ ಬಣ್ಣ ಬದಲಾಯಿಸುವಿಕೆ ಕೇವಲ ಮನುಷ್ಯನಲ್ಲಿ ಮಾತ್ರವಲ್ಲ ಇದನ್ನು ಕಾಡಿನ ಯಾವುದೇ ಕ್ರಿಮಿ ಕೀಟಗಳಲ್ಲಿಯೂ ಕಾಣುತ್ತೇವೆ. ಬಣ್ಣಬದಲಾಯಿಸುವಿಕೆಯಿಂದ ಕಾಡುಮಾನವನಿಗೆ ಒಂದು ರೀತಿಯಿಂದ ರಕ್ಷಣೆಯ ಜೊತೆಗೆ ಆಕರ್ಷಣೆಯೂ ಆಗಿ ಪರಿಣಮಿಸಿರಬಹುದು.

ಹಚ್ಚೆ ಮೂಲತಃ ಸೌಂದರ್ಯದ ಪ್ರತೀಕವಾಗಿದೆ. ಅದು ಧಾರ್ಮಿಕ ಸಂಕೇತವೂ ವೈಯಕ್ತಿಕ ಲೈಂಗಿಕ ಕ್ರಿಯೆಗೆ ಕರೆಯೂ ಆಗಿದೆ. ಆದಿಮಾನವನಲ್ಲಿ ಹಚ್ಚೆ ದೈಹಿಕ ಆಕರ್ಷಣೆಯ ಜೊತೆಗೆ ಲೈಂಗಿಕ ಆಕರ್ಷಣೆಯ ದೃಷ್ಟಿಯಿಂದ ಬೆಳೆದು ಬಂದಿರುವ ಸಾಧ್ಯತೆಗಳಿವೆ. ಏಕೆಂದರೆ ಅನೇಕ ಬುಡಕಟ್ಟಿನವರಲ್ಲಿ ಹಚ್ಚೆ, ಶೀಲ,

ಚಾರಿತ್ರ್ಯ ಹಾಗೂ ಧರ್ಮರಕ್ಷಣೆಯ ಹಿನ್ನೆಲೆಯಲ್ಲಿ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಕೆಲವು ಬುಡಕಟ್ಟಿನ ಜನರಲ್ಲಿ ಹಚ್ಚೆ ಇಂದಿಗೂ ಶೀಲದ ಸಂಕೇತವಾಗಿರುವುದನ್ನು ಕಾಣಬಹುದು. ದೇಹವನ್ನು ಕುರುಪಗೊಳಿಸುವ ಇಂಥಕ್ರಿಯೆ ಅನೇಕ ಆದಿವಾಸಿ ಜನಾಂಗಗಳಲ್ಲಿ ಈಗಲೂ ಬಳಕೆಯಲ್ಲಿದೆ. ಕಾಡು ಮಾನವನಲ್ಲಿ ಯಾವ ಕಾರಣಕ್ಕೆ ಹುಟ್ಟಿಕೊಂಡ ಈ ಹಚ್ಚೆ ಕಲೆ ಇಂದು ನಾಡುಮಾನವನವರೆಗೆ ಬೆಳೆದು ಬಂದಿರುವುದು ತುಂಬಾ ಅಚ್ಚರಿಯನುಂಟು ಮಾಡುತ್ತದೆ.

### ೨.೩. ಹಚ್ಚೆ ಹಾಕುವ ಸಮುದಾಯ

ಕರ್ನಾಟಕದಲ್ಲಿ ಹಚ್ಚೆಹಾಕುವುದು ಕೆಲವು ಜನರ ಕುಲಕಸಬಾಗಿದೆ. ಸಾಮಾನ್ಯವಾಗಿ ಕೆಳವರ್ಗದ ಜನರು ಈ ಕಸಬನ್ನು ಮಾಡಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಹೆಚ್ಚಾಗಿ ಕೊರವಂಜಿಗರು ಗೊಲ್ಲರು, ದೊಂಬರು, ಜಾತಗಾರರು, ವೇಷಗಾರರು, ಕೊಟಬರು, ಬೆಸ್ತರು, ಗುಂಡೆಬೆಸ್ತರು, ಕಿಳ್ಳೆಕ್ಯಾತರು, ಒಡ್ಡರು ಈ ಮೊದಲಾದ ಜನಾಂಗದವರುಹಚ್ಚೆ ಹಾಕುವ ಕಸಬನ್ನು ಪರಂಪರೆಯಿಂದ ಮಾಡಿಕೊಂಡು ಬಂದಿರುತ್ತಾರೆ. ಸಾಮಾನ್ಯವಾಗಿ ಈ ಬುಡಕಟ್ಟಿನ ಜನರು ಅಲೆಮಾರಿಗಳಾಗಿದ್ದು. ಹೊಟ್ಟೆಪಾಡಿಗಾಗಿ ಊರೂರು ಸಂಚರಿಸಿ ಈ ಕಸಬನ್ನು ಮಾಡುತ್ತಾರೆ. ಆದ್ದರಿಂದ ಹಚ್ಚೆಕಲೆ ಈ ಜನರಿಗೆ ಒಂದು ರೀತಿಯಿಂದ ಜನಪದ ಕಲೆಯೂ ಹಾಗೂ ಕುಲಕಸುಬಾಗಿದೆ. ಹಚ್ಚೆಹುಯ್ಯಲು ಬುಡಕಟ್ಟಿನ ಜನರು ಕೇಲವು ವಿಶಿಷ್ಟ ಸಂದರ್ಭಗಳಲ್ಲಿ ಸಂಚರಿಸುತ್ತಾರೆ. ನಾಗರ ಪಂಚಮಿ ಮತ್ತು ದೀಪಾವಳಿ ಹಬ್ಬದ ಕಾಲಾವಧಿಯಲ್ಲಿ ಇಲ್ಲವೇ ಜಾತ್ರೆ ಮುಂತಾದ ಸಂದರ್ಭಗಳಲ್ಲಿ ಊರೂರು ಅಲೆಯುತ್ತ ತಮ್ಮ ಪರಿವಾರ ಸಮೇತ ಅಲೆಯುತ್ತಾರೆ. ಅಲೆಮಾರಿಗಳಾದ ಅವರು ಸಾಮಾನ್ಯವಾಗಿ ಊರ ಹೊರಗೆ ಡೇರೆ ಹೊಡೆದು ನಿರ್ದಿಷ್ಟ ಅವಧಿಯವರೆಗೆ ವಾಸ ಮಾಡುತ್ತಾರೆ. ಈ ಹಚ್ಚೆ ಹಾಕುವ ಕಲೆ ಸಾಮಾನ್ಯವಾಗಿ ಹೆಂಗಸರಿಗೆ ಮಾತ್ರ ಕರಗತವಾಗಿದೆ.

### ೨.೪. ಹಚ್ಚೆ ಹಾಕಲು ಉಪಯೋಗಿಸುವ ಸಾಧನ ಸಲಕರಣೆಗಳು

ಹಚ್ಚೆ ಹಾಕಲು ಉಪಯೋಗಿಸುವ ಸಾಧನವೆಂದರೆ ಸೂಜಿಯ ಕಟ್ಟು, ಇದನ್ನು ೭.೪.೩ ಹೀಗೆ ಮೊನಚಾದ ಹಾಗೂ ಸಮನಾದ ಸೂಜಿಗಗಳನ್ನು ಒಟ್ಟುಗೂಡಿಸಿ ಕಬ್ಬಿಣದ ಎರಡು ಪಟ್ಟಿಗಳ ನಡುವೆ ಬಾಚಣಿಗೆ ಆಕಾರವಾಗಿ ಜೋಡಿಸಿ ಬಿಗಿಯಾಗಿ ಕಟ್ಟಿರುವ ಈ ಸಾಧನಕ್ಕೆ ಚಕ್ರುವೆಂದು ಹೆಸರು ಹಚ್ಚೆ ಹೊಯ್ಯುವ ಮೊದಲು ಬಿದಿರಿನ ಕಡ್ಡಿಯನ್ನು ಬಣ್ಣದಲ್ಲಿ ಅದ್ದಿ ಮೈ ಮೇಲೆ ಚಿತ್ತಾರ ಬಿಡಿಸಿಕೊಳ್ಳುತ್ತಾರೆ.[೬] ಇದಕ್ಕಾಗಿ ಚಿಕ್ಕ ಚಿಕ್ಕ ಬಿದರಿನ ಕಡ್ಡಿಗಳನ್ನು ಕೊಳವೆಯೊಂದರಲ್ಲಿ ಇಟ್ಟುಕೊಂಡಿರುತ್ತಾರೆ. ಹಚ್ಚೆ ಹಾಕಲು ಬೇಕಾಗುವ ಬಣ್ಣವನ್ನು ತುಂಬಲು ಕುಡಿಕೆ ಇಲ್ಲವೆ ತಗಡಿನ ಡಬ್ಬಿಯನ್ನು ಉಪಯೋಗಿಸುತ್ತಾರೆ. ಕೆಲವರು ಬಾಟಲಿಗಳನ್ನು ಉಪಯೋಗಿಸುತ್ತಾರೆ. ಹಚ್ಚೆಹಾಕುವರು ಸಾಮಾನ್ಯವಾಗಿ ನುರಿತ ಕಲಾವಿದರಾಗಿರುವುದರಿಂದ ಹಾಕಿಸಿಕೊಳ್ಳುವವರಿಗೆ ಪ್ರೀಯವಾದ ಚಿತ್ರಗಳನ್ನು ತಕ್ಷಣದಲ್ಲಿಯೇ ಚಿತ್ರಿಸುವ ಕಲೆಗಾಕೆಯನ್ನು ಪಡೆದಿರುತ್ತಾರೆ. ಹಚ್ಚೆ ಹಾಕಲು ಉಪಯೋಗಿಸುವ ಈ ಎಲ್ಲ ಸಾಧನ ಸಲಕರಣೆಗಳನ್ನು ಬಟ್ಟೆಯಿಂದ ತಯಾರಿಸಿದ ಸಂಚಿಯೊಂದರಲ್ಲಿ ಇಟ್ಟುಕೊಳ್ಳುತ್ತಾರೆ.

---

೬. ಡಾ.ಎಸ್.ಸಿ.ಪಾಟೀಲರ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೬೧

೨.೫. ಬಣ್ಣತಯಾರಿಕೆ

ಹಚ್ಚೆಗೆ ಹಾಕುವ ಬಣ್ಣವನ್ನು ತಯಾರಿಸುವ ವಿಷಯದಲ್ಲಿ ಪ್ರಾದೇಶಿಕ ಭಿನ್ನತೆಗಳು ಕಂಡುಬರುತ್ತವೆ. ಆಯಾ ಭಾಗಗಳಲ್ಲಿ ಬೇರೆ ಬೇರೆ ರೀತಿಯಿಂದ ಈ ಬಣ್ಣವನ್ನು ತಯಾರಿಸುತ್ತಾರೆ. ಅವರ ಉದ್ದೇಶ ಒಂದೇ ಆಗಿದ್ದರೂ ಆಶಯಗಳನ್ನು ಭಿನ್ನವಾಗಿವೆ. ಸಾಮಾನ್ಯವಾಗಿ ಬಣ್ಣ ತಯಾರಿಕೆಯಲ್ಲಿ ಎರಡು ಮುಖ್ಯವಾದ ಅಂಶಗಳು ಎದ್ದು ಕಾಣಿಸುತ್ತವೆ.

೧. ಹಚ್ಚೆಗೆ ಹಾಕುವ ಬಣ್ಣ ಶಾಶ್ವತವಾಗಿ ಉಳಿಯಬೇಕು.

೨. ಹಚ್ಚೆ ಹಾಕುವುದರಿಂದ ಉಂಟಾಗುವ ನಂಜನ್ನು ಗುಣಪಡಿಸುವ ಸತ್ವ ಆ ಬಣ್ಣದಲ್ಲಿರಬೇಕು ಇವೆರಡರ ಸಾಧನೆಯೇ ಬಣ್ಣತಯಾರಿಕೆಯ ಮುಖ್ಯ ಉದ್ದೇಶವಾಗಿರುತ್ತದೆ. ಅಂದರೆ ಹಚ್ಚೆಯ ಬಣ್ಣ ನಂಜಿನ ಔಷಧಿಯೂ ಆಗಬೇಕು, ಅದು ಕೊನೆಯವರೆಗೆ ಅಳಿಸದೆ ಹಾಗೆಯೇ ಉಳಿಯಬೇಕೆನ್ನುವುದೇ ಅದರ ಹಿಂದಿರುವ ಆಶಯವಾಗಿದೆ. ಆದ್ದರಿಂದ ತಯಾರಕರು ತುಂಬಾ ಅನುಭವಿಕಲಾವಿದರಾಗಿದ್ದು ಹಚ್ಚಿನ ಎಚ್ಚರಿಕೆಯನ್ನು ವಹಿಸುತ್ತಾರೆ.

೨.೬. ಹಚ್ಚೆಹಾಕುವ ರಚನಾ ವಿಧಾನಗಳು

ಹಚ್ಚೆಯನ್ನು ಯಾರು ತಮಷ್ಟಕ್ಕೆ ಹಾಕಿಸಿಕೊಳ್ಳಲಾರರು ಒಬ್ಬರು ಇನ್ನೊಬ್ಬರಿಂದ ಹಚ್ಚೆ ಹುಯ್ಯಿಸಿಕೊಳ್ಳುತ್ತಾರೆ. ಹೆಣ್ಣುಗಂಡೆನ್ನದೆ ಮಕ್ಕಳು ಮುದುಕರೆನ್ನದೆ ಎಲ್ಲರೂ ಹಚ್ಚೆಹಾಕಿಸಿಕೊಳ್ಳುತ್ತಾರೆ.[೭] ಹಚ್ಚೆಯನ್ನು ಇಂಥವರೆ ಹಾಕಿಸಿಕೊಳ್ಳಬೇಕೆಂಬ ಯಾವ ನಿಯಮವು ಇಲ್ಲವಾದರೂ ಮುಪ್ಪಾವಸ್ಥೆಯಲ್ಲಿ ಹಚ್ಚೆಹಾಕಿಸಿಕೊಳ್ಳುವುದು ತುಂಬಾ ಕಷ್ಟದ ಕೆಲಸ. ಕಾರಣ ಮುಪ್ಪಾವಸ್ಥೆಯಲ್ಲಿ ಮೈಮೇಲಿನ ಚರ್ಮತೀರ ಸುಕ್ಕುಗಟ್ಟಿ ಹೋಗಿರುವುದರಿಂದ ಹಚ್ಚೆ ಹುಯ್ಯುವುದು ಕಷ್ಟವಾಗುತ್ತದೆ. ಆದರೂ ಕೆಲವೊಮ್ಮೆ ಮುದುಕರು ಅನಿವಾರ್ಯವಾಗಿ ಹಚ್ಚೆಹಾಕಿಸಿಕೊಳ್ಳುತ್ತಾರೆ.

ಹಚ್ಚೆಕಲಾವಿದರು ಹಚ್ಚೆಹಾಕುವಲ್ಲಿ ಎರಡು ವಿಧಾನಗಳನ್ನು ಅನುಸರಿಸುತ್ತಾರೆ.

೧. ಕೆಲವರು ಹಚ್ಚೆಯ ನಮೂನೆ ಚಿತ್ರಗಳನ್ನು ಒದಗಿಸಿಕೊಂಡು ಮೊದಲು ಬಿದಿರಿನ ಕಡ್ಡಿಯಿಂದ ಹಚ್ಚೆ ಮಸಿಯಿಂದ ಇಲ್ಲವೆ ಸಾಬೂನಿನ ನೀರಿನಿಂದ ನಿಗದಿತ ಭಾಗದಲ್ಲಿ ಗೆರೆಕೊರೆದು ಚಿತ್ತಾರ ಬಿಡಿಸಿಕೊಳ್ಳುತ್ತಾರೆ. ಆ ಮೇಲೆ ಆ ಚಿತ್ರದ ಆಕಾರಕ್ಕೆ ತಕ್ಕ ಹಾಗೆ ಸೂಜಿಯ ಕಟ್ಟಿನಿಂದ ಹಚ್ಚೆ ಹುಯ್ಯುತ್ತಾರೆ.

೨. ಕೆಲವು ಅನುಭವಿ ಕಲಾವಿದೆಯರು ಯಾವುದೇ ನಮೂನೆ ಚಿತ್ರಗಳನ್ನು ಇಟ್ಟುಕೊಳ್ಳದೆ ಹಚ್ಚೆ ಹಾಕಿಸಿಕೊಳ್ಳುವವರೆಗೆ ಪ್ರಿಯವಾದ ಹಾಗೂ ನಿರ್ದಿಷ್ಟವಾದ ಚಿತ್ತಾರಗಳನ್ನು ನೇರವಾಗಿ ಹುಯ್ಯುತ್ತಾರೆ.[೮]

ಈ ಮೇಲಿನ ಎರಡು ಬಗೆಯ ವಿಧಾನಗಳನ್ನು ಅನುಸರಿಸಿ ಹಚ್ಚೆ ಹಾಕುವಾಗ ದೇಹದ ಮೇಲಿನ ಚರ್ಮವನ್ನು ಬಿಗಿಯಾಗಿ ಹಿಡಿದು ನಯವಾಗಿ ಸೂಜಿಯ ಕಟ್ಟಿನಿಂದ ಚಿತ್ತಾರ ಬರೆಯುತ್ತಾರೆ. ಹೀಗೆ ಚುಚ್ಚುವಾಗ ಮೈಯಿಂದ ಚಿಮ್ಮಿದ ರಕ್ತವನ್ನು ತಣ್ಣೀರಿನಿಂದ ತೊಳೆದು ಸ್ವಚ್ಛಗೊಳಿಸಿ ಆ ಭಾಗಕ್ಕೆ ಮಸಿಯನ್ನು

---

೭. ಎಸ್.ಕೆ.ರಾಮಚಂದ್ರರಾವ್, ಕರ್ನಾಟಕ ಕಲೆಗಳು ಭೂಮಿಕೆ, ಪುಟ-೧೪

೮. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೯೪, ೯೫

ಸವರುತ್ತಾ ಹಚ್ಚೆಹಾಕಿದ ಭಾಗವು ನೋವಾಗಬಾರದೆಂದು ಮತ್ತು ಹಾಕಿದ ಮಸಿಯು ಹೊಳಪು ಬೀರಲೆಂದು ಅರಿಷಿಣ ಹಾಗೂ ಕೊಬ್ರಿ ಎಣ್ಣೆ ಕೊಡಿಸಿ ಹಚ್ಚುತ್ತಾರೆ. ಹೀಗೆ ಹಚ್ಚುವುದರಿಂದ ನಂಜಾಗುವುದಿಲ್ಲವೆಂದು ಅವರು ನಂಬುತ್ತಾರೆ.

**೨.೭. ಹಚ್ಚೆಯ ವಿವಿಧ ಆಶಯಗಳು**

ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಜನಾಂಗಗಳಲ್ಲಿ ಕೆಲವು ವಿಶಿಷ್ಟ ನಂಬಿಕೆಗಳಿರುವುದನ್ನು ಕಾಣುತ್ತೇವೆ.

೧. ಹಚ್ಚೆ ಇಲ್ಲದವರು ರಾಶಿ ಕಣದಲ್ಲಿ ಪವಿತ್ರ ಕಾರ್ಯಗಳಲ್ಲಿ ಹೋಗಬಾರದೆಂದು, ಅಂಥವರಿಂದ ನಷ್ಟ ಉಂಟಾಗುವುದೆಂದು ಕೆಲವು ಜನಾಂಗದವರು ನಂಬಿದ್ದಾರೆ.[೯]

೨. ಹಚ್ಚೆ ಇಲ್ಲದ ಹೆಂಗಸು ಮದುವೆ ಮುಂಜಿ ಮುಂತಾದ ಸಮಾರಂಭಗಳಲ್ಲಿ ಊಟಕ್ಕೆ ಬಡಿಸಬಾರದೆಂಬ ನಿಯಮವನ್ನು ಸಾಮಾನ್ಯವಾಗಿ ಹಿಂದೂ ಹಾಗೂ ಮಾರಾಠಿಗರಲ್ಲಿ ಕಾಣುತ್ತೇವೆ.

೩. ಲಂಬಾಣಿ ಹೆಣ್ಣುಮಕ್ಕಳು ಮೈ ನೆರೆಯುವ ಮೊದಲು ಹಚ್ಚೆ ಹಾಕಿಸಿಕೊಂಡರೆಅದು ಧರ್ಮಮುದ್ರೆ ಎಂದೂ, ಮೈ ನೆರೆತ ಮೇಲೆ ಹಾಕಿಸಿಕೊಂಡರೆ ಅದು ಪಾಪಮುದ್ರೆ ಎಂದು ಹಾಗೇ ಧರ್ಮ ಮುದ್ರೆ ಯಾವತ್ತೂ ಹಚ್ಚ ಹಸಿರಾಗಿರುತ್ತೆಂದೂ, ಪಾಪ ಮುದ್ರೆಯು ಯಾವತ್ತೂ ನೀಲಿ ವರ್ಣಗಳಲ್ಲಿ ಪಡೆಯುವುದಾಗಿಯು ಬಲವಾಗಿ ನಂಬುತ್ತಾರೆ.[೧೦]

೪. ಒಂದು ಕಾಲಕ್ಕೆ ಕೆಲವು ಜನಾಂಗದ ಹೆಂಗಸರು ಮುಸ್ಲಿಂರಿಂದಾಗುವ ಅತ್ಯಾಚಾರದಿಂದ ರಕ್ಷಿಸಿಕೊಳುವ ಸಲುವಾಗಿ ಮೈ ಮೇಲೆ ಹಚ್ಚೆ ಹಾಕಿಸಿಕೊಳ್ಳುತ್ತಿದ್ದುದು ಕಂಡುಬರುತ್ತದೆ. ಹಚ್ಚೆ ಹಾಕಿಸಿಕೊಂಡ ಇಂಥ ಮಹಿಳೆಯರನ್ನು ಮುಟ್ಟುವುದನ್ನು ಮುಸ್ಲಿಂಮರು ಅಧರ್ಮವೆಂದು ಬಗೆದಿದ್ದರು. ಈಗಲೂ ಮುಸ್ಲಿಂಮರು ಹಚ್ಚೆಯನ್ನು ತಿರಸ್ಕರಿಸುವುದನ್ನು ಕಾಣಬಹುದಾಗಿದೆ.[೧೧]

೫. ಹಾವು, ಚೇಳು ಮುಂತಾದ ಜೀವ ಜಂತುಗಳ ಚಿತ್ರಗಳನ್ನು ಮೈ ಮೇಲೆ ಬರೆಯಿಸಿಕೊಳ್ಳುವುದರಿಂದ ಅವು ಕಡಿದರೂ ನಂಜೇರುವುದಿಲ್ಲವೆಂದು ಕೆಲವು ಬುಡಕಟ್ಟಿನ ಜನರ ನಂಬಿಕೆಯಾಗಿದೆ.

೬. ಹಿಂದೂಗಳಲ್ಲಿ ಹಚ್ಚೆಹಾಕಿಸಿಕೊಂಡ ವ್ಯಕ್ತಿಯಿಂದ ರಾಶಿ ತುಂಬಿಸಿದರೆ ರಾಶಿ ಹುಲುಸಾಗುವುದೆಂದು ನಂಬಿದರೆ ಲಂಬಾಣಿಗರು ಇಂಥವರನ್ನು ದೂರೀಕರಿಸುವ ಸಂಗತಿ ಆಶ್ಚರ್ಯವನ್ನುಂಟು ಮಾಡುತ್ತದೆ.

೭. ಬಹುದಿನಗಳಿಂದ ಮೈ ಕೈ ನೋವು, ಸಂದು ಹಿಡಿಯುವುದು, ಕೈಕಾಲು ಊದಿಕೊಳ್ಳುವುದು ತಲೆನೋವುದು ಹಾಗೂ ಕಾಯಿಲೆಯಿಂದ ಬಳಲುತ್ತಿದ್ದರೆ ಆಯಾ ಸ್ಥಳಗಳಲ್ಲಿ ಹಚ್ಚೆ ಹುಯ್ಯಿಸಿಕೊಳ್ಳುವುದರಿಂದ ಇವುಗಳು ವಾಸಿಯಾಗುತ್ತವೆಂದು ತಿಳಿದು ಈಗಲೂ ಕೆಲವೆಡೆ ಹಾಗೆ ಮಾಡುವುದನ್ನು ಕಾಣುತ್ತೇವೆ.

೮. ಹಚ್ಚೆ ಹಾಕಿಸಿಕೊಂಡರೆ ಮಾಟ ಮಂತ್ರ ಭೂತ ಪಿಶಾಚಿಗಳಿಂದ ತಪ್ಪಿಸಿಕೊಳ್ಳಬಹುದೆಂಬ ನಂಬಿಕೆ ಕೆಲವು ಬುಟಕಟ್ಟಿನ ಜನರಲ್ಲಿದೆ.

---

೦೯. ಡಾ.ಜಿ.ಶಂ.ಪರಮಶಿವಯ್ಯ, ಕರ್ನಾಟಕದ ಜನಪದ ಸಮೀಕ್ಷೆ, ಪುಟ-೭

೧೦. ಡಾ.ಪಿ.ಕೆ.ಖಂಡೋಬಾ, ಕರ್ನಾಟಕದ ಲಂಬಾಣಿ ಜನಾಂಗದ ಒಂದು ಸಂಸ್ಕೃತಿ ಅಧ್ಯಯನ

೧೧. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೮೫

೯. ನ್ಯೂಗಿನಿಯ ದೇಶದ ಆದಿವಾಸಿ ಜನರ ಕಾಮುಕ ದೃಷ್ಟಿ ತಮ್ಮ ಮೇಲೆ ಬೀಳದಿರಲೆಂದು ಹೆಂಗಸರು ತಮ್ಮ ಮೊಲೆ ಮತ್ತು ಯೋನಿಯ ಮೇಲೆ ಚೇಳು, ಸಿಂಹ, ಹುಲಿ ಮುಂತಾದವುಗಳ ಚಿತ್ರಗಳನ್ನು ಹೂಯ್ಯಿಸಿಕೊಳ್ಳುತ್ತಾರೆ. ಇದರಿಂದ ದುಷ್ಟಶಕ್ತಿಗಳಿಂದ ಯಾವುದೇ ತೊಂದರೆ ಯಾಗುವುದಿಲ್ಲವೆಂದೂ ನಂಬುತ್ತಾರೆ.

೧೦. ಜಪಾನ ದೇಶದ ಹೆಂಗಸರು ತಮ್ಮ ನಿತಂಬ, ಮೊಲೆ ಹಾಗೂ ಯೋನಿಗಳ ಮೇಲೆ ಡ್ರಾಗನ್ ಸರ್ಪದ ಚಿತ್ರವನ್ನು ಬರೆಯಿಸಿಕೊಳ್ಳುವುದರಿಂದ ತಮ್ಮ ಮೇಲೆ ಪುರುಷರು ಕಾಮದೃಷ್ಟಿ ಬೀರುವುದಿಲ್ಲವೆಂದು ನಂಬುತ್ತಾರೆ.

೧೧. ನ್ಯೂಝಿಲೆಂಡಿನ ಜನ ತಮ್ಮ ಗುಪ್ತಾಂಗಗಳ ಮೇಲೆ ಹಚ್ಚೆ ಹಾಕಿಸಿಕೊಳ್ಳುವುದರಿಂದ ಗುಪ್ತರೋಗಗಳು ದೂರವಾಗಿರುತ್ತವೆಂದು ನಂಬುತ್ತಾರೆ.

೧೨. ರಾಮನ ತೊಟ್ಟಿಲು, ಜೋಗಿ ಜಡೆ, ಹನುಮಂತ, ಸೂರ್ಯ, ಚಂದ್ರ, ನಕ್ಷತ್ರ, ನಾಗರಹಾವು, ಮೀನು, ಚೇಳು, ಶಿಲುಬೆ ಮುಂತಾದವುಗಳ ಚಿತ್ರಗಳನ್ನು ಹಾಕಿಸಿಕೊಳ್ಳುವುದು ಭಾರತೀಯರು ತಾವು ನಂಬಿಕೊಂಡಿರುವ ದೈವದ ಸಂಕೇತಗಳಾಗಿವೆ.

ಮಾನವನು ಯಾವುದೋ ಕಾಲಘಟದಲ್ಲಿ ಹುಟ್ಟಿಕೊಂಡ ಹಚ್ಚೆಸಂಪ್ರದಾಯ ಒಂದು ವಿಶಿಷ್ಟ ಜನಪದ ಕಲೆಯಾಗಿದ್ದು ಇಂದು ಕಾಲಗರ್ಭದಲ್ಲಿ ಅದು ಹುದುಗಿ ಹೋಗುತ್ತಿರುವುದು. ವಿಪರ್ಯಾಸವೇ ಸರಿ. ಜನ ವಿದ್ಯಾವಂತರಾಗುತ್ತಾ ನಡೆದಂತೆ ನಮ್ಮ ಅನೇಕ ಜನಪದ ಸಂಪ್ರದಾಯ, ಆಚರಣೆಗಳು ಅರ್ಥವನ್ನು ಕಳೆದುಕೊಳ್ಳುತ್ತಿರುವುದು. ಸಹಜವೆ ಆಧುನಿಕತೆಯ ಬಿರುಗಾಳಿಗೆ ಸಿಕ್ಕು ನಶಿಸಿ ಹೋಗುತ್ತಿರುವ ಅನೇಕ ಜನಪದ ಕಲೆಗಳಲ್ಲಿ ಹಚ್ಚೆಯೂ ಒಂದು ಹಚ್ಚೆ ಹಾಸಿಕೊಳ್ಳುವ ಜನ ಕಡಿಮೆಯಾಗುತ್ತಾ ಹೋದಂತೆ ಹಚ್ಚೆಹಾಕುವ ಕಲಾವಿದೆಯರೂ ನಮ್ಮಿಂದ ಮರೆಯಾಗುತ್ತಿದ್ದಾರೆ. ಹಚ್ಚೆ ಇಂದು ನಮ್ಮಿಂದ ದೂರವಾದರೂ ಅದು ಜನಪದರ ಬದುಕಿನಲ್ಲಿಯಾಗಲಿ ನಾಗರಿಕ ಜೀವನದಲ್ಲಿಯಾಗಲಿ ಯಾವುದೊ ರೂಪದಿಂದ ಉಳಿದುಕೊಂಡು ಬರುವ ಸಾಧ್ಯತೆಗಳಿವೆ. ಅಂತೆಯೇ ಇತ್ತೀಚಿನ ಅಕ್ಯುಪಂಕ್ಚರ್, ಶಸ್ತ್ರ ಚಿಕಿತ್ಸೆ ಈ ಹಚ್ಚೆ ಕಲೆಯ ಮೂಲದೆಂದು ಹೇಳಲಾಗುತ್ತಿದೆ.

## ೨.೨. ತೊಗಲು ಗೊಂಬೆ ಚಿತ್ರಕಲೆ

ಜಾನಪದ ಕ್ಷೇತ್ರದಲ್ಲಿ ಬೇರೆ ಬೇರೆ ರೀತಿಯ ಮಾರ್ಗಗಳು ತೆಗೆದುಕೊಳ್ಳುತ್ತವೆ. ಪ್ರಾದೇಶಿಕತೆ, ಮಾರ್ಗಗಳು ಧಾರ್ಮಿಕತೆ ಸಾಂಸ್ಕೃತಿಕತೆಯ ಸಂಪ್ರದಾಯದ ಅನ್ಯನತೆ ಕಲಾಭಿರುಚಿಯಲ್ಲಿ ಹೃದಯವಂತಿಕೆ ಅನೇಕ ಗುಣಗಳಿಂದ ಜನಪದ ಕ್ಷೇತ್ರವು ತನ್ನದೇ ಆದ ದೇಶಿಯತೆಯನ್ನು ಉಳಿಸಿಕೊಂಡು ಬಂದಿವೆ.

ಯಾವುದೇ ಪ್ರದೇಶವಾದರೂ, ತನ್ನ ಸುತ್ತಮುತ್ತಲಿನಲ್ಲಿರುವ ಅನೇಕ ಅಂಶಗಳಾದ ಭೌಗೋಳಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಅಂಶಗಳಿಂದ ಪ್ರಭಾವಿತಗೊಂಡಿರುತ್ತವೆ. ದಿನನಿತ್ಯ ಬದುಕಿಲ್ಲಿ ಜನಪದ ಕ್ಷೇತ್ರವು ಮನುಷ್ಯನಲ್ಲಿ ಒಂದು ಪರಿಣಾಮಕಾರಿಯಾದ ಪ್ರಭಾವವನ್ನು ಉಂಟುಮಾಡಿದೆ.

ಎಂಬುದಕ್ಕೆ ಅನುಮಾನವೇ ಇಲ್ಲ ಆದುದರಿಂದ ಅಲ್ಲಿನ ಜನರಲ್ಲಿ ನಂಬಿಕೆಗಳು, ಸಂಪ್ರದಾಯ ಆಚರಣೇಗಳು, ಕಲಾಭಿವ್ಯಕ್ತಿಗಳು ಇನ್ನೂ ಅನೇಕ ಅಂಶಗಳು ಜನಪದ ಉಗಮಕ್ಕೆ ಕಾರಣವಾಗಿದೆ.

ಅನೇಕ ವರ್ಷಗಳ ಹಿಂದೆಯೇ ತೊಗಲುಗೊಂಬೆಯಾಟವು ಉಚ್ಛ್ರಾಯ ಸ್ಥಿತಿಯಲ್ಲಿ ಪಡೆದುಕೊಂಡಿತ್ತು. ಜಾನಪದ ಕಲಾಪ್ರಕಾರದ ಪ್ರಮುಖ ಅಂಗವಾದ ತೊಗಲುಗೊಂಬೆ ಕಲೆ ಪೌರಾಣಿಕ ಇತಿಹಾಸವನ್ನು ಸಾಮಾನ್ಯ ಜನರಿಗೆ ಮನವರಿಕೆ ಮಾಡಿಕೊಡುವುದರಲ್ಲಿ ಅಮೋಘಪಾತ್ರವಹಿಸಿತು. ಶಾತವಾಹನ, ಚಾಲುಕ್ಯ, ರಾಷ್ಟ್ರಕೂಟ ಹಾಗೂ ವಿಜಯನಗರ ಸಾಮ್ರಾಜ್ಯಗಳ ಪ್ರೋತ್ಸಾಹದಿಂದ ವಿಶ್ವವ್ಯಾಪ್ತಿಗಾಗಿ ಪ್ರಚಾರವಾಗಿಟ್ಟಿಸಿದ ಗೊಂಬೆ ಆಟದ ಕಲೆ ಇಂದು ಉಚ್ಛ್ರಾಯ ಸ್ಥಿತಿಯಿಂದ ಕೇವಲ ಹೆಸರಿಗೆ ಮಾತ್ರ ಉಳಿದೆ. ಪ್ರಸ್ತುತ ದಿನದಲ್ಲಿ ಅದನ್ನೇ ನಂಬಿಕೊಂಡು ಬದುಕುತ್ತಿದ ಅದೆಷ್ಟೋ ಕಲಾವಿದರು ಇಂದು ಬೀದಿಪಾಲಾಗಿದ್ದಾರೆ. ಇದರಲ್ಲಿ ಅನೇಕ ಕುಟುಂಬಗಳು ಜೀವನ ನಿರ್ವಹಣೆಗಾಗಿ ಬೇರೆದಾರಿಯನ್ನು ನೋಡಿಕೊಂಡಿದ್ದು ಈ ಪ್ರದರ್ಶನಕ್ಕೆ ಬಂದೊದಗಿದ ದೊಡ್ಡ ವಿಪತ್ತೆಂದೇ ಭಾವಿಸಬೇಕಾಗುತ್ತದೆ. ತೊಗಲುಗೊಂಬೆ ಕಲಾವಿದರು ಪರಿಶಿ,ಟ ಜನಾಂಗಕ್ಕೆ ಸೇರಿದ್ದು, ಈ ಕಲಾವಿದರಿಗೆ ಕಿಳಿಕ್ಯಾತ, ಸಿಳ್ಳೆಕ್ಯಾತ, ಕಟಬರರ ಆಟ ವಾಯಲ್‌ಕರ್ ಎಂಬ ಮೊದಲಾದ ಹೆಸರಿನಿಂದ ಗುರುತಿಸಲ್ಪಡುತ್ತಾರೆ. ಇವರಿಗೆ ತಮ್ಮದೇ ಆದ ಮಾತೃಭಾಷೆಯೊಂದಿದ್ದು, ಮರಾಠಿ ಮಿಶ್ರಿತ ಗುಡ್ಡಗಾಡು ಭಾಷೆ ಎನಿಸುತ್ತದೆ. ಸಿಳ್ಳೇಕ್ಯಾತ ಅಲೆಮಾರಿ ಬುಡಕಟ್ಟಿಗೆ ಸೇರಿದೆ. ಆದರೆ ಈ ಕಲಾವಿದರ ಮಾತೃಭಾಷೆ ಮರಾಠಿಯಾದರೂ ತನ್ನ ಮನೆಮಾತು ಕನ್ನಡ, ತೊಗಲುಗೊಂಬೆಯ ಕಥನ ತೆರೆದುಕೊಳ್ಳುವದೇ ಬಹುಜನ ಸೊಗಸಾದ ಭಾಷೆ ದೇಶಿ ಕನ್ನಡದಲ್ಲಿ ಮಾತನಾಡುತ್ತಾರೆ. ಕನ್ನಡದಲ್ಲಿಯೇ ಕಲೆಯನ್ನು ಪ್ರದರ್ಶಿಸುತ್ತಾರೆ.

ಮೊದಲನ ದಿನಗಳಲ್ಲಿ ರಂಗಸಜ್ಜಿಕೆಯ ಒಳಗಡೆ ತೂಗುದೀಪಗಳನ್ನು ಬಿಟ್ಟುಅದರ ತುಂಬಾ ಜೌಡಲ ಹರಳೆಣ್ಣೆ ಎಣ್ಣೆಯನ್ನು ಹಾಕಿ ಹತ್ತಿಯಿಂದ ಹಾಡಿದ ಬತ್ತಿಯಿಂದ ರಂಗಸಜ್ಜಿಕೆಯಲ್ಲಿ ಬೆಳಕನ್ನು ಮಾಡುತ್ತಾರೆ. ಈ ದೀಪಕ್ಕೆ ಕಕ್ಕಡ ದೀಪ ಎಂಬ ಹೆಸರಿನಿಂದಲೂ ಕಲೆಯುತ್ತಾರೆ. ಹೀಗೆ ಎಲ್ಲ ರೀತಿಯಲ್ಲಿ ಸಿದ್ಧತೆ ಮಾಡಿಕೊಂಡ ಮೇಲೆ ಪ್ರದರ್ಶನಕ್ಕೆ ತೊಡಗುತ್ತಾರೆ. ಆದರೆ ಕಾಲಬದಲಾದಂತೆ ವಿದ್ಯುತ್ ದೀಪಗಳ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾರೆ. ಕೆಲವೆಡೆ ಯಾವುದೇ ಬದಲಾವಣೆ ಇಲ್ಲ. ಸ್ಥೂಲ ರೂಪರೇಷೆ, ಅಲಂಕಾರ, ವರ್ಣಸಂಯೋಜನೆ ಮುಂತಾದ ವಿಧಾನವೇ ಹೋಲುವಂತಾಗಿದೆ.

### ೨.೨.೧. ತೊಗಲುಗೊಂಬೆಯ ವಸ್ತುವಿಷಯ

ಕರ್ನಾಟಕದ ತೊಗಲುಗೊಂಬೆಗಳಲ್ಲಿ ಧರ್ಮದ, ಪುರಾಣದ ಕಥಾವಸ್ತುವನ್ನು ಬಿಂಬಿಸಿ ಆಟ ಆಡಿಸುವ ಹಿನ್ನೆಲೆಯಲ್ಲಿ ಚಿತ್ರಣಗಳನ್ನು ರಚಿಸುತ್ತಾರೆ. ಗೊಂಬೆಯಾಟದಲ್ಲಿ ಗಣಪತಿಯ ಪ್ರಾರ್ಥನೆ ಮತ್ತು ಸರಸ್ವತಿಯ ಸುತ್ತಿಯೊಂದಿಗೆ ಆಯಾ ಚಿತ್ರಗಳನ್ನು ತೋರಿಸಿ, ಸಂದರ್ಭಾನುಸಾರವಾಗಿ ಅವುಗಳ ಪರಿಚಯವನ್ನು ಮಾಡಿಕೊಡುತ್ತಾರೆ. ಆಯಾ ದೇವತೆಗಳಲ್ಲಿ ಆಯಾ ವಾಹನ ಅಥವಾ ಆಯುಧಗಳ ಮೂಲಕ ಗುರುತಿಸುವುದುಂಟು ಇಂಥಚಿತ್ರಗಳು ಸಾಂಕೇತಿಕವಾಗಿರುತತವೆ.

ರಾಮಾಯಣದ ದೃಶ್ಯದಲ್ಲಿ ಶ್ರೀರಾಮನ ಆದರ್ಶ, ಸೀತೆಯ ಪಾತಿವ್ರತ್ಯ ರಾವಣ ಅಟ್ಟಹಾಸ, ಲಕ್ಷ್ಮಣ ಸೋದರ ಪ್ರೇಮ, ಮುಂತಾದ ದೃಶ್ಯಗಳ ನೈಜತೆಯನ್ನು ತೋರಿಸುತ್ತಾರೆ. ಗೊಂಬೆಯಾಟಗಾರರಲ್ಲಿ

ಹನುಮಂತನ ಗೊಂಬೆಗಳು ಅನೇಕ ರೀತಿಯಲ್ಲಿ ಇರುತ್ತವೆ. ಹನುಮಂತ ಇವರಿಗೆ ಪ್ರೀಯವಾದ ವಸ್ತು ಸೃಜನ ಸೀಲ ಜನಪದ ಕಲಾವಿದರಲ್ಲಿ ಮಹಾಭಾರತದ ಕಥನಗಳು ಉಪಕತೆಗಳೂ ಸೇರಿದಂತೆ ಸ್ವರ್ಗಾರೋಹಣವರೆಗೂ ಚಿತ್ರಗಳು ದೊರೆಯುತ್ತವೆ. ಆಯಾ ಪಾತ್ರದ ವೈಶಿಷ್ಟ್ಯ ಗುಣಗಳನ್ನು ಒಳಗೊಂಡಿರುತ್ತವೆ. ಶಕುನಿಯ ವಂಚಕ ಬುದ್ಧಿ ಮಂಥರೆಯ ತಾತ್ಸಾರ ಭೀಮ ಕೀಚಕರಂತಹ ಭವ್ಯ ಕಲ್ಪನೆ, ದ್ರೌಪದಿಯ ವಸ್ತ್ರಾಪಹರಣ ದ್ಯೂತ ಕ್ರಿಡೆ, ವನವಾಸ, ಸಂಧಾನ, ಕುರುಕ್ಷೇತ್ರ ಸ್ವರ್ಗಾರೋಹಣ, ಮುಂತಾದ ಹಿನ್ನೆಲೆಯಲ್ಲಿ ಚಿತ್ರಗಳು ಬಳಕೆ ಬರುವುದುಂಟು. ಈ ಜನಾಂಗದವರಲ್ಲಿ ಇವೆಲ್ಲವು ಕಂಠಪಾಠದಂತೆ ಸರಳವಾಗಿ ಹೊರಬಹುವುದನ್ನು ಕಾಣಬಹುದು.

ಪುರಾಣಗಳನ್ನು ಪ್ರದರ್ಶಿಸಿ ಮನರಂಜನೆ ನೀಡುವುದರ ಜೊತೆಗೆ ಸಮಾಜದಲ್ಲಿಯ ಓರೆಕೋರೆಗಳನ್ನು ತಿದ್ದುವುದರ ಸಲುವಾಗಿ ರೀತಿ ನೀತಿ ನಡವಳಿಕೆ ಒಳಿತು ಕೆಡಕನ್ನು ಸಹೃದಯನಿಗೆ ಆಭಾಸವಾಗದಂತೆ ತಿಳಿಪಡಿಸಬಲ್ಲರು, ಏಡ್ಸ್‌ನಂತಹ ಭಯಾನಕ ರೋಗಗಳ ನಿರ್ಮೂಲನೆಯನ್ನು ಅತೀ ವೇಗದ ಜನಸಂಖ್ಯೆಯ ನಿಯಂತ್ರಣ ಸಾಕ್ಷರತೆ ಹಾಗೂ ದೇಶದ ಭಾವೈಕ್ಯತೆ ಮುಂತಾದ ವಸ್ತುಗಳನ್ನು ಕೊಡ ನಿರೂಪಿಸಿ ಜನರ ಮನಸನ್ನು ಗೆಲ್ಲಬಲ್ಲರು.

ಕರ್ನಾಟಕದ ತೊಗಲುಗೊಂಬೆಯಾಟದಲ್ಲಿ ನದಿ ಸರೋವರ ಬೆಟ್ಟಗುಡ್ಡಗಳು ಪರ್ಣಕುಟೀರಗಳು, ಗಿಡ, ಮರ, ಹೂಬಳ್ಳಿಗಳು,ಮುಂತಾದ ನಿಸರ್ಗ ಚಿತ್ರಗಳನ್ನು ಒಂಟೆ, ಆನೆ, ಕುದುರೆ, ಪ್ರಾಣಿಪಕ್ಷಿಗಳು, ಯುದ್ಧ ಅರಣ್ಯ, ಮುಂತಾದ ಹಿನ್ನೆಲೆಗೆ ಅಗತ್ಯವಾದ ಚಿತ್ರಗಳನ್ನು ವರ್ಣರಂಜಿತವಾಗಿ ಚಿತ್ರಿಸಿರುತ್ತಾರೆ ಅವು ಸಂದರ್ಭಾನುಸಾರವಾಗೆ ಪ್ರದರ್ಶಿಸಲ್ಪಡುತ್ತವೆ.

### ೨.೨.೨. ಬಣ್ಣ ತಯಾರಿಕೆ ಮತ್ತು ಲೇಪನ

ಇಂದು ಸಿದ್ಧರೂಪದಲ್ಲಿ ದೊರಕುವ ಪರಿಕರಳ ಬಣ್ಣಗಳು, ಅವಶ್ಯಕತೆಗೆ ತಕ್ಕಂತೆಕ್ಷಣದಲ್ಲಿಯೇ ದೊರೆಯುತ್ತವೆ. ಆದರೆ ಕರ್ನಾಟಕದ ತೊಗಲುಗೊಂಬೆಯಾಟಗಾರರು ನೈಸರ್ಗಿಕವಾಗಿ ತಯಾರಿಸಿದ ಪ್ರಖರ ವರ್ಣಗಳನ್ನೇ ಬಳಸುತ್ತಾರೆ. ಅಂಥ ಸಾಮಗ್ರಿಗಳು ಮಾರುಕಟ್ಟೆಯಲ್ಲಿ ಸಿಗುವುದಿಲ್ಲ ಎಂಬುದು ಒಂದು ಕಾರಣವಾದರೆ ಕಾಯಿ ಎಲೆಗಳಿಂದ ತಯಾರಿಸಿದ ಬಣ್ಣಗಳು ಎಂದೆಂದಿಗೂ ತಮ್ಮ ಗುಣಗಳನ್ನು ಕಳೆದುಕೊಳ್ಳುವುದಿಲ್ಲ ಎಂಬುದು ಇನ್ನೊಂದು ಕಾರಣವಾಗಿದೆ. ಉದಾಹರಣೆಗಾಗಿ ನೀಲವರ್ಣಕ್ಕಾಗಿ ತುಂಬೆಸೊಪ್ಪಿನ ರಸ ಕಪ್ಪು ಬಣ್ಣಕ್ಕೆ ಕಾಡಿಗೆ ಅಥವಾ ತೆಂಗಿನ ಚಿಪ್ಪುಸುಟ್ಟು ಇದ್ದಿಲ್ಲನ್ನು ಬಳಸಿಕೊಳ್ಳುತ್ತಾರೆ. ಪ್ರದರ್ಶನ ವೇಳೆಯಲ್ಲಿ ಗೊಂಬೆಗಳನ್ನು ಎರಡು ಮುಖವಾಗಿ ಬಳಸುವುದರಿಂದ ವರ್ಣಗಳನ್ನು ಹಿಂಭಾಗಕ್ಕೂ ಮುಂಭಾಗಕ್ಕೂ ಲೇಪಿಸುತ್ತಾರೆ. ಕೆಂಪು, ನೀಲಿ ಮಿಶ್ರಿತ ಹಸಿರು ಪಾರದರ್ಶಕ ವರ್ಣಗಳೆಂದು ಇವುಗಳನ್ನು ದೇಹ ಆಯಾ ಭಾಗಕ್ಕೆ ಕಪ್ಪು ವರ್ಣವು ಪಾರದರ್ಶಕವೆಂದು ಅದನ್ನು ರೇಖಾವಿನ್ಯಾಸಕ್ಕೆ ಬಳಸುತ್ತಾರೆ. ತಮ್ಮ ನೆಲೆಯಲ್ಲಿ ಸಿಗುವ ಅಳಿಲು ಮತ್ತು ಕರುವಿನ ಕಿವಿಯ ಕೂದಲು, ಗಣೆಕೆಬಿದಿರು, ಗಲಗಿನ ಚೂಪಾದ ತುದಿ ಮುಂತಾದವುಗಳಿಂದ ಬಣ್ಣವನ್ನು ಲೇಪಿಸುತ್ತಾರೆ. ಸೂಕ್ಷ್ಮವಾದವುಗಳಿಗೆ ದೊಡ್ಡವರು ಚಿಕ್ಕವರಿಗೆ ಮಾರ್ಗದರ್ಶನ ಮಾಡುತ್ತಾ ಬಣ್ಣ ಹಾಕಿದರೆ ಮಿಕ್ಕಂತೆ ದೊಡ್ಡವರು ವರ್ಣಲೇಪನ ಕಾರ್ಯವನ್ನು ಪೂರ್ತಿಗೊಳಿಸುತ್ತಾರೆ.

ಬಣ್ಣ ಹಾಕಿದ ಗೊಂಬೆಗಳನ್ನು ಬಣ್ಣ ಮಾಸದಿರಲೆಂದು ನೆರಳಿನಲ್ಲಿ ಒಣಗಿಸುತ್ತಾರೆ. ಬಣ್ಣತುಂಬಿದ ತೊಗಲುಗೊಂಬೆ ನೇರವಾಗಿ ನಿಂತುಕೊಳ್ಳಲು ಅನುಕೂಲವಾಗುವಂತೆ ಬಿದಿರಿನ ಕಡ್ಡಿಯನ್ನು ಮಧ್ಯಕ್ಕೆ ಸೀಳಿ ಅದರಲ್ಲಿ ಗೊಂಬೆಗಳನ್ನು ಇಟ್ಟು ಅಲ್ಲಲ್ಲಿದಾರದಿಂದ ಹೊಲಿಯುತ್ತಾರೆ. ಗೊಂಬೆಗಳನ್ನು ಹಿಡಿದು ಆಡಿಸಲು ಬೇಕಾದ ಒಂದು ಅಡಿಯಷ್ಟು ಕಡ್ಡಿಯನ್ನು ಕೆಳಗೆ ಬಿಡುತ್ತಾರೆ. ತೊಗಲಿನ ಗೊಂಬೆಗಳಲ್ಲಿ ಕಾಲು, ಕೈ, ರುಂಡ, ಬೆರಳು ಪ್ರತಿಯೊಂದು ಅವಯುವಗಳ ಚಲನೆಗೆ ಅನೂಕೂಲವಾಗುವಂತೆ ಅವುಗಳ ಜೋಡಣೆ ಮಾಡಿ ಕಡ್ಡಿಗೆ ಹೊಂದಿಸಿ ಆಮುಖ ಈಮುಖ ಎಂದು ಕಲ್ಪನೆಯನ್ನು ಪ್ರದರ್ಶನದ ವೇಳೆಗೆ ಕಲಾವಿದ ತೋರಿಸುತ್ತಾನೆ. ಚಿಕ್ಕಗಾತ್ರದ ಗೊಂಬೆಗಳನ್ನು ಕುಳಿತು ಪ್ರದರ್ಶಿಸುತ್ತಾರೆ. ದೊಡ್ಡಗಾತ್ರದ ಗೊಂಬೆಗಳನ್ನು ನಿಂತುಕೊಂಡೆ ಆಡಿಸಬೇಕಾಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ತೊಗಲುಗೊಂಬೆ ಅಥವಾ ಪ್ರದರ್ಶನಕ್ಕೂ ಚಿತ್ರಕಲೆಗೂ ಹೆಚ್ಚಿನ ಸಂಬಂಧ ಇಲ್ಲವಾದರೂ ತೊಗಲುಗೊಂಬೆಗಳ ರಚನೆ ಅಲಂಕರಮ, ವರ್ಣವಿನ್ಯಾಸಾ ದಿನಗಳಲ್ಲಿ ಚಿತ್ರಕಲೆಯೊಂದಿಗಿನ ನೇರ ಸಂಬಂಧವನ್ನು ಗುರುತಿಸಿಕೊಳ್ಳಬಹುದಾಗಿದೆ.

ಆದರೆ ಸಧ್ಯದ ಪರಿಸ್ಥಿತಿಯಲ್ಲಿ ಈ ಕಲಾವಿದರಿಗೆ ಪ್ರೋತ್ಸಾಹ ದೊರಕದಿರುವುದರಿಂದ ಕಲಾವಿದರು ತಮ್ಮ ಪ್ರದರ್ಶನಗಳು ಕಡಿಮೆ ಮಾಡಿರುವುದು ಅಥವಾ ಇವುಗಳ ಪ್ರದರ್ಶನವೇ ಮಾಡದೆ ಈ ತೊಗಲುಗೊಂಬೆ ಚಿತ್ರಪಟಗಳು ಕಬ್ಬಿಣದ ಪೆಟ್ಟಿಗೆಯಲ್ಲಿ ಮುಚ್ಚಿಬರುವುದು ನನ್ನ ಸಂಶೋಧನೆಯ ಸಮಯದಲ್ಲಿ ಕಂಡುಕೊಂಡಿದ್ದೇನೆ. ಇದಕ್ಕೆ ಸರಕಾರವು ಗಮನ ಹರಿಸಿ ಈ ಕಲಾವಿದರಿಗೆ ಮಾಸಿಕ ವೇತನ ಅಥವಾ ಇನ್ನಾವುದೋ ತರಹ ಇವರ ಹತ್ತಿರದ ಚಿತ್ರಪಟಗಳನ್ನು ಒಂದು ಗ್ಯಾಲರಿ ಅಥವಾ ಒದು ಕಲೆ ಇವುಗಳ ಪ್ರದರ್ಶನ ಮಾಡಬೇಕು ಇಲ್ಲದಿದ್ದರೆ ಈ ಕಲಾವಿದರ ಜೊತೆಗೆ ಅಮ್ಯೂಲ್ಯವಾದ ತೊಗಲುಗೊಂಬೆ ಚಿತ್ರಗಳು ಸಾವಿರಾರು ವರ್ಷಗಳಿಂದ ಕಾಯ್ದಿರಿಸಿಕೊಂಡು ಬಂದಿರುವುದು ಅಳಿದುಹೋಗುವ ಅಂಚಿನಲ್ಲಿ ಕಂಡು ಬರುತ್ತಿವೆ.

### ೨.೨.೩. ಮದರಂಗಿಯ ಚಿತ್ರಕಲೆ

ಚರ್ಮದ ಮೇಲಿನ ಚಿತ್ರಕಲೆಯಲ್ಲಿ ಶಾಶ್ವತವಾದುದು. ಹಚ್ಚೆಯಾದರೆ, ಅಶಾಶ್ವತವಾದ ಚಿತ್ರಕಲೆಯಾಗಿ ಮದರಂಗಿ ಬೆಳೆದು ಬಂದಿದೆ. ಸಂಪ್ರದಾಯ, ಕಲಾತ್ಮಕತೆ,ಸೌಭಾಗ್ಯಗಳೆಲ್ಲ ಮದರಿಂಗಿಯ ರೂಪದಲ್ಲಿ ಸ್ತ್ರೀಯಕ್ಕೆ ಕಾಲು ಮುಖಗಳ ಮೇಲೆ ಸ್ಥಾನ ಪಡೆದಿವೆ. ಸ್ತ್ರೀಯರಂತೆ ಪುರುಷರು ಮದರಂಗಿಯಿಂದ ಶೃಂಗಾರಗೊಳ್ಳುವುದಿದೆ. ಹೆಚ್ಚಾನು ಹೆಚ್ಚು ಮದರಿಂಗಿ ಬಾಲಿಕೆಯನ್ನೊಳಗೊಂಡು ಪ್ರೌಢ ಸ್ತ್ರೀಯರಿಗೆ ಸಲಾದಂತಹದು.

### ರಂಗೋಲಿಯ ವಿವಿಧ ಅರ್ಥಗಳು

ಹಿಂದಿಯಲ್ಲಿ ಮೆಹಂದಿ, ಮರಾಠಿಯಲ್ಲಿ ಮಂದಿಯಾಚೆ, ತೆಲಗಿನಲ್ಲಿ ಗೌರಿಂಟಾಡು, ಇಂಗ್ಲಿಷ್‌ನಲ್ಲಿ ಹೆನ್ನಾ, ಪ್ರಪಂಚ ವ್ಯಾಪ್ತಿ ಸ್ತ್ರೀಯರು ಸೌಂದರ್ಯ ಪ್ರಜ್ಞೆ ಕಲಾಭಿಮುಖವಾಗಿ ಏಕಪ್ರಕಾರವಾಗಿದೆಯೆನ್ನುವುದಕ್ಕೆ ಹಚ್ಚೆಯ ಹಾಗೆ ಮದರಂಗಿಯ ಚಿತ್ರ ಬಿಡಿಸಿಕೊಳ್ಳುವ ವಿಧಾನ ಸಾಕ್ಷಿಯಾಗಿದೆ. ದೇಶ ಭಾಷೆ ಪ್ರದೇಶಗಳನ್ನು

ಮೀರಿ ಮದರಂಗಿ ಕಲೆ ಜನಪ್ರಿಯವಾಗಿದೆ. ಮೂಲತಃ ಪರ್ಶಿಯಾದಿಂದ ಹನ್ನೆರಡನೆಯ ಶತಮಾನದಲ್ಲಿ ಇದು ಭಾರತ ಪ್ರವೇಶಿಸಿತೆಂಬ ಅಭಿಪ್ರಾಯವಿದೆ. ಆದರೆ ವಿಜ್ಞಾನ ಪ್ರಪಂಚಕ್ಕೆ ಮದರಿಂಗಿ ತಯಾರಾಗುವ ಹಸಿರೆಲೆಯ ಮಾಹಿತಿ ಇತ್ತೀಚೆಗೆ ದೊರೆತು ಇಂಥ ಅಭಿಪ್ರಾಯ ನೀಡಿರಬಹುದು.[೧೨] ನಿಸರ್ಗದ ಜೀವಿಗಳಾದ ಜನಪದರಿಗೆ ಮದರಂಗಿಯಬಣ್ಣದ ಸಸಿ ಎಂದೇ ದೊರೆತಿದೆ. ಮದರಂಗಿ ಹನ್ನೆರಡನೆಯ ಶತಕಕ್ಕೆ ಪೂರ್ವ ಇತಿಹಾಸವಿದೆ.ಉತ್ತರ ಭಾರತ ಪ್ರವೇಶಿಸಿದ ಮುಸ್ಲಿಂ ಜನಾಂಗ ಮದರಂಗಿಯನ್ನು ಹೆಚ್ಚು ಬಳಸುತ್ತಿದ್ದರಿಂದ ಆ ಕಾಲ ಘಟವನ್ನು ಹೇಳುತ್ತಿರಬೇಕೆನಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಅದು ಎಂದೋ ತನ್ನ ಸ್ಥಾನವನ್ನು ಗಟ್ಟಿಗೊಳಿಸಿಕೊಂಡಿದೆ.

### ೨.೨.೪. ಮದರಂಗಿಯ ಪ್ರಾಚೀನ ಉಲ್ಲೇಖ

ಕ್ರಿ.ಪೂ.೩ನೇಯ ಶತಮಾನ ಸುಶುತ್ರ ಸಂಹಿತಾ, ಗ್ರಂಥದಲ್ಲಿ ಕಂಡು ಬರುವ ಹರೀತಕೀಚೂರ್ಣ ಅರಿಷ್ಟಪತ್ರಂ ಚೂತತ್ವಚಂ ದಾಡಿಂ ಪುಷ್ಪ ವೃಂತಕಂ, ಪತ್ರಂ ಚ ದದ್ಯಾತ್ ಮದಯಂತಿ ಕಾಯಾ ಲೇಪೋ ಅಂಗರಾಗೋ ಯೋಗಾಹ್ಯ, ಈ ಶ್ಲೋಕದಲ್ಲಿ ಅರಳಿಕಾಯಿಚೂರ್ಣ ರಿಟ ತಪ್ಪ ಅರಿಷ್ಟಪತ್ರ ಮಾವಿನ ತೋಟೆ, ದಾಳಿಂಬ ಹೂವಿನ ಕೆಳಭಾಗ ಮದರಂಗಿಯ ತೊಪ್ಪಲನ್ನು ಶರೀರಕ್ಕೆ ಹಚ್ಚಿಕೊಳ್ಳುವ ವಿಷಯ ನಿರೂಪಿತವಾಗಿದೆ. ಆಯುರ್ವೇದಿಯ ಶಬ್ದಕೋಶದಲ್ಲಿ ಅಂಗರಾಗವೆಂದರೆ ಗಾತ್ರ ರಂಜನ ಅಂದರೆ ಅವಯುವಗಳಿಗೆ ಬಣ್ಣ ಕೊಡುವುದು ಎಂಬ ಅರ್ಥವಿದೆ. ಸಂಸ್ಕೃತ ನಿಘಂಟಿನಲ್ಲಿ ಅಂಗರಾಗಕ್ಕೆ Application of unguments oforof the body cosmatics ಎಂದು ಹೇಳಲಾಗಿದೆ.[೧೩]

ಸಲಕರಣೆಗಳು ಮದರಂಗಿ ತಯಾರಿಕೆಯೊಳಗೊಂಡು ಅದನ್ನು ಹಚ್ಚುವ ಸಲಕರಣೆಗಳು ಇಂತಿವೆ. ೧. ಮದರಂಗಿಪುಡಿಯ ಡಬ್ಬಿ, ೨. ಮಿಶ್ರಣದ ಪಾತ್ರೆ, ೩. ಕಡ್ಡಿ, ೪. ಬಿಳಿಯ ಬಟ್ಟೆ ಮುಂತಾಗಿ.

ಡಬ್ಬಿ ಇದರಲ್ಲಿ ಮದರಂಗಿಯ ಎಲೆಯ ಪುಡಿಯನ್ನು ಸಂಗ್ರಹಿಸಿಟ್ಟಿರುತ್ತಾರೆ. ಆ ಪುಡಿಯನ್ನು ತಾವೇ ಸಿದ್ಧಗೊಳ್ಳಬಹುದು. ಇಲ್ಲವೆ ಬೇರೆಯವರಿಂದ ಪಡೆದು ಸಂಗ್ರಹಿಸಿಕೊಂಡಿರುತ್ತಾರೆ. ಇದನ್ನೇ ಮದರಂಗಿ ಪಾತ್ರೆ ಅಥವಾ ಡಬ್ಬಿ ಎಂದು ಕರೆಯುತ್ತಾರೆ.

### ೨.೨.೫. ಮದರಂಗಿಯ ಹಚ್ಚುವ ಸಾಧನಗಳು

#### ಮಿಶ್ರಣದ ಪಾತ್ರೆ

ಮದರಂಗಿಯನ್ನು ಹಚ್ಚಿಕೊಳ್ಳುವ ಸಂದರ್ಭದಲ್ಲಿ ಮದರಂಗಿಯ ಮಿಶ್ರಣವನ್ನು ತಯಾರಿಸಿಟ್ಟುಕೊಳ್ಳುವ ಪಾತ್ರೆ ಇದಾಗಿದೆ. ತಮಗೆ ಎಷ್ಟು ಬೇಕೋ ಅಷ್ಟನ್ನು ಪಾತ್ರೆಯಲ್ಲಿ ತಯಾರಿಸಿಕೊಂಡು ಮಿಕ್ಕಿದರೆ ಹಾಗೆಯೇ ಉಳಿಸುತ್ತಾರೆ. ಇಲ್ಲದಿದ್ದರೆ ಚೆಲ್ಲಿ ತೊಳೆದಿಡುತ್ತಾರೆ.

#### ಕಡ್ಡಿ

ಹಳ್ಳಿಗಳಲ್ಲಿ ಸಾಮಾನ್ಯವಾಗಿ ದೀಪದ ಕಡ್ಡಿಯಿಂದ ಮದರಂಗಿಯ ಚಿತ್ರ ಬರೆಯುತ್ತಾರೆ. ದಂತದ ಕಡ್ಡಿ, ಚಂದನದ ಕಡ್ಡಿ, ಪ್ಲಾಸ್ಟಿಕ್ ಕಡ್ಡಿಗಳನ್ನು ಉಪಯೋಗಿಸುತ್ತಾರೆ. ಇದಕ್ಕಾಗಿ ಇತ್ತೀಚೆಗೆ ಪೆನ್ನಿನಂತಹ

೧೨. ಮ.ಶ್ರೀಧರ ಮೂರ್ತಿ, ೬೪ ಕಲೆಗಳು, ಪುಟ-೧೦

೧೩. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೧೧೨

ವಸ್ತುವನ್ನು ಬಳಸಲು ಪ್ರಾರಂಭಿಸಿದ್ದಾರೆ. ಇಂತಹ ಸಾಧನದಲ್ಲಿ ಮದರಂಗಿ ದ್ರಾವಣವನ್ನು ತುಂಬಿ ಪೆನ್ನಿನ ಹಾಗೆ ಬರೆಯುತ್ತ ಹೋದಂತೆ ಬಣ್ಣ ಇಳಿಯುತ್ತ ಹೋಗುತ್ತದೆ. ಪೇಟೆಯಲ್ಲಿ ಟ್ರೆಸ್ಸಿಂಗ್ ಪದ್ಧತಿಯೂ ಬೆಳೆದಿದೆ. ಹೆಚ್ಚಾಗಿ ಹಳ್ಳಿಗಳಲ್ಲಿ ಕಡ್ಡಿಗಳ ಬಳಕೆಯೇ ಹೆಚ್ಚು.

ಬಿಳಿಯ ಬಟ್ಟೆ

ಮದರಂಗಿ ಹಚ್ಚುವಾಗ ಚಿತ್ರದ ಗೆರೆಗಳು ಕೆಟ್ಟರೆ, ಅವುಗಳನ್ನು ಅಳಿಸಿ ಮತ್ತೆ ಸರಿಯಾದ ರೀತಿಯಾದ ಸುಳುವುಗಳನ್ನು ಬಿಡಿಸಲು ಈ ಬಟ್ಟೆಯನ್ನು ಬಳಸುತ್ತಾರೆ. ಇವು ಮದರಂಗಿಯ ಚಿತ್ರಬಿಡಿಸಲು ಬೇಕಾಗುವ ಅವಶ್ಯಕ ಸಾಮಗ್ರಿಗಳು.

ಮದರಂಗಿಯ ಬಣ್ಣ

ಗ್ರಾಮೀಣರು ಮದರಂಗಿಯ ಬಣ್ಣವನ್ನು ತುಂಬ ಸರಳವಾಗಿ ತಯಾರಿಸುತ್ತಾರೆ. ಮದರಂಗಿ ಗಿಡದ ತೊಪ್ಪಲನ್ನು ಚೆನ್ನಾಗಿ ಒಣಗಿಸಿ, ಕುಟ್ಟಿ ಪುಡಿ ಮಾಡುತ್ತಾರೆ. ಈ ಪುಡಿಯನ್ನು ತೆಳ್ಳನೆಯ ಬಟ್ಟೆ ಇಲ್ಲವೆ ಹಿಟ್ಟು ಸೋಸುವ ಸಾರಣಿಗೆಯಲ್ಲಿ ಜರಡಿಯಲ್ಲಿ ಹಾಕಿ ಸೋಸುತ್ತಾರೆ. ಸೋಸಿದ ಪುಡಿಯನ್ನು ಒಂದು ಪಾತ್ರೆಯಲ್ಲಿ ಇಟ್ಟುಕೊಂಡಿರುತ್ತಾರೆ.[೧೪] ಹಚ್ಚಿಕೊಳ್ಳುವ ಸಂದರ್ಭದಲ್ಲಿ ಮದರಂಗಿಯ ಪುಡಿಯನ್ನು ಬೇರೆ ದ್ರಾವಣಗಳ ಮಿಶ್ರಣದೊಂದಿಗೆ ಸೇರಿಸಿ ಮದರಂಗಿಯ ಬಣ್ಣ ಸಿದ್ಧಗೊಳಿಸುತ್ತಾರೆ. ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ವಿಧಾನ ಹೀಗಿದೆ.

೨.೨.೬. ಮದರಂಗಿ ಹಚ್ಚುವ ವಿಧಾನ

ದೀಪದ ಕಡ್ಡಿಯಿಂದ ಇಲ್ಲವೆ ದ್ರಾವಣ ಅಂಟಿಕೊಳ್ಳುವ ಚೂಪು ತುದಿಯ ಯಾವುದೇ ಕಡ್ಡಿಯ ಸಹಾಯದಿಂದ ಮದರಂಗಿಯ ರಂಗುರಂಗಿನ ಚಿತ್ರಗಳನ್ನು ಬಿಡಿಸಿಕೊಳ್ಳುತ್ತಾರೆ. ಮುಖ್ಯವಾಗಿ ಎರಡು ರೀತಿಯಲ್ಲಿ ಮದರಂಗಿಯನ್ನು ಹಚ್ಚಿಕೊಳ್ಳುತ್ತಾರೆ.

೧. ತಾವೇ ಹಚ್ಚಿಕೊಳ್ಳುವುದು, ೨.ಅನ್ಯರು ಹಚ್ಚುವುದು

೧. ತಾವೇ ಹಚ್ಚಿಕೊಳ್ಳುವುದು

ಸಾಕಷ್ಟು ತಾಳ್ಮೆ, ಶ್ರದ್ಧೆ, ನಯ ನಾಜೂಕುಗಳಂಥ ವ್ಯಕ್ತಿತ್ವವನ್ನು ರೂಢಿಸಿಕೊಂಡವರು ಮಾತ್ರ ಸ್ವಯಂ ಚಿತ್ರ ಬಿಡಿಸಿಕೊಳ್ಳುವುದು ಸುಲಭವಾಗುತ್ತದೆ. ತಮ್ಮ ಭಾವನೆಗಳಿಗೆ ರೂಪ ಕೊಟ್ಟಂತೆ, ರೇಖಾ ವಿನ್ಯಾಸಗಳನ್ನು ಕಲಾತ್ಮಕವಾಗಿ ಬಿಡಿಸಿಕೊಳ್ಳುವವರು, ಮದರಂಗಿಯಿಂದ ಹೆಚ್ಚು ಸಂತೋಷಪಡುತ್ತಾರೆ. ತಮ್ಮ ಕಲಾಪ್ರೌಢಿಮೆಯೊಡನೆ ತಮ್ಮ ಪರಿಶ್ರಮವೂ ಸೇರಿಕೊಂಡು ಮದರಂಗಿಯ ಬಣ್ಣ ಇನ್ನಷ್ಟು ಮುದ್ದತೆ ನೀಡುತ್ತದೆ. ಸ್ವಯಂ ಚಿತ್ರ ವಿನ್ಯಾಸ ಮಾಡಿಕೊಳ್ಳಬೇಕೆನ್ನುವವರು ತಮ್ಮ ಹಿರಿಯರಿಂದ ಪರಿಸರದಿಂದ ಕಲಿತುಕೊಂಡಿರುತ್ತಾರೆ.

---

೧೪. ತರಂಗ, ಸೆಪ್ಟಂಬರ್ ೧೯೯೦, ಮಾದಕ ಚಲುವಿನ ಮದರಂಗಿ, ಯು.ಬಿ.ರಾಜಲಕ್ಷ್ಮಿ, ಪುಟ-೬೨

೨. ಅನ್ಯರು ಹಚ್ಚುವುದು

ಹಬ್ಬ, ಹುಣ್ಣಿಮೆ, ಉತ್ಸವ, ಮದುವೆಯ ವಧು ಸಿಂಗಾರದಂತಹ ಸಂದರ್ಭಗಳಲ್ಲಿ ಮದರಂಗಿ ಚಿತ್ರ ಬಿಡಿಸುವ ನುರಿತ ಸ್ತ್ರೀ ಪುರುಷರು ಚಿತ್ರ ವಿನ್ಯಾಸ ಮಾಡುತ್ತಾರೆ. ಹಾಗೆ ನುರಿತವರು ತಮ್ಮವರೇ ಆಗಿರಬಹುದು, ಇಲ್ಲವೆ ಅನ್ಯರೂ ಆಗಿರಬಹುದು. ಯಾರೇ ಬಿಡಿಸಿರಲಿ ಹಚ್ಚಿಸಿಕೊಳ್ಳುವವರಲ್ಲಿ ಚಿತ್ರಗಳ ಚೆಲುವಿನ ಹಂಬಲವಂತೂ ಸ್ವಾಭಾವಿಕವಾಗಿರುತ್ತದೆ.

೨.೨.೭. ಮದರಂಗಿಯ ಚಿತ್ರ ವಿನ್ಯಾಸಗಳ ವರ್ಗೀಕರಣ

ದಕ್ಷಿಣ ಭಾರತದಲ್ಲಿ ಜನಪದ ಕಲೆಯಾಗಿ ಪರಿಗಣಿತವಾಗುವ ಮದರಂಗಿಯ ಚಿತ್ರಕಲೆ ಇನ್ನೂ ತನಕ ಅಧ್ಯಯನದ ವಿಷಯವಾಗಿ ಅಭ್ಯಸಿಸಲ್ಪಟ್ಟಿಲ್ಲ. ಉತ್ತರ ಭಾರತದ ಅನೇಕ ಪ್ರದೇಶಗಳಲ್ಲಿ ಜನಪ್ರಿಯವಾಗಿರುವ ಈ ಕಲೆಯನ್ನು ಕುರಿತು ತಕ್ಕ ಮಟ್ಟಿನ ಅಧ್ಯಯನ ನಡೆದಿದೆ. ಕನ್ನಡದಲ್ಲಿ ಬಿಡಿ ಲೇಖನಗಳಾಗಿ ಜನಪ್ರಿಯ ಪತ್ರಿಕೆಯಲ್ಲಿ ಮಾತ್ರ ಪ್ರಕಟಗೊಂಡುದನ್ನು ಬಿಟ್ಟರೆ ತಲಸ್ಪರ್ಶಿಯಾದ ಅಧ್ಯಯನ ನಡೆದಿಲ್ಲವೆಂದೇ ಹೇಳಬೇಕು.

ಮದರಂಗಿ ಚಿತ್ರಕಲೆಯನ್ನು ಅಧ್ಯಯನ ದೃಷ್ಟಿಯಿಂದ ಧಾರ್ಮಿಕ, ಧಾರ್ಮಿಕೇತರದ ಮದರಂಗಿಯ ಚಿತ್ರಕಲೆಯೆಂದು ವಿಂಗಡಿಸಬಹುದಾಗಿದೆ. ಅದರಲ್ಲಿಯೇ ಸ್ತ್ರೀ, ಪುರುಷ ವರ್ಗೀಕರಣವನ್ನು ಮಾಡಿಕೊಳ್ಳಬಹುದು. ಈ ವರ್ಗೀಕರಣವನ್ನು ವಿವರವಾಗಿ ಹೀಗೆ ರೇಖಿಸಬಹುದಾಗಿದೆ.

ಮದರಂಗಿ ಕಲೆ

೧. ಧಾರ್ಮಿಕ ಚಿತ್ರ ವಿನ್ಯಾಸ ಧಾರ್ಮಿಕೇತರ ಚಿತ್ರವಿನ್ಯಾಸ

೨. ಸ್ತ್ರೀಯರ ಚಿತ್ರ ಪುರುಷರ ಚಿತ್ರಸ್ತ್ರೀಯರ ಚಿತ್ರಪುರುಷರಚಿತ್ರ

ಮದರಂಗಿ ಚಿತ್ರವಿನ್ಯಾಸದ ತಂತ್ರ

ಮದರಂಗಿಯ ಚಿತ್ರವಿನ್ಯಾಸಗಳು ಕಂದು ಬಣ್ಣದಲ್ಲಿರುತ್ತವೆ. ಮದರಂಗಿಯ ಬಣ್ಣದಲ್ಲಿ ಮಿಶ್ರಣಗೊಂಡ ಅಂಶಗಳು ಚರ್ಮದಲ್ಲಿ ಚೆನ್ನಾಗಿ ಹಿಡಿದುಕೊಳ್ಳುವುದರಿಂದ ಹಲವು ದಿನಗಳವರೆಗೆ ಚಿತ್ರಗಳು ಉಳಿದುಕೊಳ್ಳುತ್ತವೆ. ಇಲ್ಲಿ ಮಾನವಾಕೃತಿಗಳಿಗೆ ಪ್ರಾಮುಖ್ಯತೆಯಿರುವುದಿಲ್ಲ. ಆದರೆ ಭೂಮಿತಿ, ಬಳ್ಳಿ, ಆಕೃತಿ ಪ್ರಧಾನವಾದ ಸುಳುವುಗಳೊಂದಿಗೆ ಸ್ವಸ್ತಿಕ, ಶ್ರೀ, ಶುಭ, ಲಾಭ, ಓಂ, ಸೂರ್ಯ ಇತ್ಯಾದಿ ಸಂಕೇತಗಳನ್ನು ಹೆಚ್ಚು ಚಿತ್ರಿಸಿರುತ್ತಾರೆ. ವಿವಿಧ ಆಭರಣಗಳ ಮಾದರಿಯ ಚಿತ್ರವಿನ್ಯಾಸಗಳೂ ಮದರಂಗಿ ಕಲೆಯಲ್ಲಿ ಕಾಣಸಿಗುತ್ತವೆ.

ಮದರಂಗಿಯ ಉಪಯುಕ್ತತೆ

ಮದರಂಗಿಯನ್ನು ಸೌಂದರ್ಯದ ಸಾಧನವಾಗಿ ಕಂಡಂತೆ ವೈದ್ಯಕೀಯ ಚಿಕಿತ್ಸೆಗಾಗಿಯೂ ಬಳಸುತ್ತಾರೆ. ಒಲವಿನ ಪ್ರತೀಕವಾದ ಮದರಂಗಿ ಉಷ್ಣ ಪ್ರಕೃತಿಯವರಿಗೆ ತಂಪು ನೀಡುತ್ತದೆ. ಇದು ಚರ್ಮರೋಗಗಳ ನಿವಾರಣೆ ಮಾಡುವುದಲ್ಲದೆ ಶರೀರದ ಸ್ವಾಸ್ಥ್ಯವನ್ನೂ ಕಾಪಾಡುತ್ತದೆ. ಚರ್ಮರೋಗಗಳು ವಿಶೇಷವಾಗಿ ಅಂಗೈ ಅಂಗಾಲಿನಿಂದ ಹರಡುತ್ತುವಂತೆ, ಹೀಗಾಗಿ ಅಂಗೈ ಮತ್ತು ಅಂಗಾಲಿಗೆ ಮದರಂಗಿ ಹಚ್ಚಿಕೊಳ್ಳುವುದರಿಂದ

ಬಿಳುಪು ತೊನ್ನು, ಕುಷ್ಟರೋಗಗಳು ದೂರವಾಗುವುವೆಂದು ಹೇಳುತ್ತಾರೆ. ಮದರಂಗಿ ಹಚ್ಚುವುದರಿಂದ ಕೂದಲು ಉದುರುವುದು ನಿಲ್ಲುತ್ತದೆ. ಸಂತಾನವಿಲ್ಲದ ಸ್ತ್ರೀಯರಿಗೆ ಸಂತಾನಭಾಗ್ಯ ಲಭಿಸುತ್ತದೆಯೆಂಬ ವಿಶ್ವಾಸ ಜನಪದರಲ್ಲಿದೆ.

**ಮದರಂಗಿಯ ಸ್ಥಿತಿಗತಿ**

ಬಣ್ಣದ ಖಯಾಲಿಯಾಗಿ, ಚಿತ್ರವಿನ್ಯಾಸದ ಕಲೆಯಾಗಿ, ಪ್ರೀತಿ ಪ್ರೇಮಕ್ಕೆ ಸಂಕೇತವಾಗಿ, ಸೌಭಾಗ್ಯದ ಕುರುಹಾಗಿ ಜನಪದರಲ್ಲಿ ಪ್ರಾಚೀನ ಕಾಲದಿಂದ ಬೆಳೆದು ಉಳಿದುಕೊಂಡು ಬಂದ ಮದರಂಗಿಯ ಕಲೆ, ನಗರ ನಾಗರಿಕತೆಯ ಕೃತಕ ವ್ಯವಸ್ಥೆಯಿಂದಾಗಿ, ಜನಪದರಿಂದ ಮರೆಯಾಗುತ್ತ ನಡೆದಿದೆ. ಇತ್ತ ಜನಪದರಿಂದ ಮರೆಯಾದಂತೆ, ಅತ್ತ ಪಟ್ಟಣ ಪ್ರದೇಶಗಳಲ್ಲಿ ಫ್ಯಾಶನ್ ಆಗಿ ವ್ಯಾಪಾರ ರೂಪ ಪಡೆಯುತ್ತಲಿದೆ. ಜನಪದರ ಮದರಂಗಿ ಕಲೆಯನ್ನೇ ತಮ್ಮ ಜೀವನೋಪಾಯದ ಮಾರ್ಗವನ್ನಾಗಿ ಮಾಡಿಕೊಂಡ ಕೆಲವರು ನಗರದ ಯುವಕ, ಯುವತಿಯರಿಗೆ, ಶ್ರೀಮಂತ ವರ್ಗದವರಿಗೆ ಕಲೆಯನ್ನು ವಿಕ್ರಯಿಸುತ್ತಿದ್ದಾರೆ. ನಗರ ಬ್ಯೂಟಿಪಾರ್ಲರ್‌ಗಳು ಈ ಕಲೆಯನ್ನು ಮಾರಾಟ ಮಾಡುವ ಕೇಂದ್ರ ಸ್ಥಳಗಳಾಗಿವೆ.[೧೫]

ಯಾವುದೇ ಜನಪದ ಕಲೆಗಳು ನಗರಕ್ಕೆ ಕಾಲಿಟ್ಟರೆ ಹೀಗೆಯೇ ಆಗುತ್ತವೆಯೆಂಬುದು ಸತ್ಯವಾಗಿಬಿಟ್ಟಿದೆ. ಅಂಗಳದ ರಂಗೋಲಿ, ಮೈಯ್ಯಂಗಳದ ಹಚ್ಚೆ, ಅಂಗೈ ಅಂಗಾಲುಗಳ ಮದರಂಗಿಯ ಕಲೆ ಇವು ಜನಪದ ಬದುಕಿನಲ್ಲಿ ಸಹಜವಾಗಿ ಬಾಳುವಂತೆ, ನಗರದಲ್ಲಿ ಬಾಳಲಾರವು. ಒಟ್ಟಿನಲ್ಲಿ ಮದರಂಗಿ ಕಲೆ, ಇಂದಿನ ಕೃತಕ ವರ್ಣಮಯ ಜಗತ್ತಿನ ವ್ಯವಸ್ಥೆಯಿಂದಾಗಿ ಹಳ್ಳಿಗಳಲ್ಲಿ ತನ್ನ ಬಣ್ಣ ಕಳೆದುಕೊಳ್ಳುವ ಹಂತದಲ್ಲಿದೆಯೆಂದೇ ಹೇಳಬೇಕಾಗಿದೆ.

**೩. ಬಟ್ಟೆಯ ಮೇಲೆ ರಚಿಸುವ ಚಿತ್ರಕಲೆ**

**೩.೧. ಕೌದಿಯ ಚಿತ್ರಕಲೆ**

ನಗ್ನಾವಸ್ಥೆಯ ಮಾನವನಿಗೆ ಕಾಲಕ್ರಮದಲ್ಲಿ ಮಾನಾಭಿಮಾನದ ಭಾವಗಳು ಹೆಚ್ಚು ಕಾಡತೊಡಗಿದಾಗ ಅವನ ಮೈ ಮೇಲಿನ ಹೊದಿಕೆ ಅನಿವಾರ್ಯವಾಗತೊಡಗಿತು. ಮೈ ಮೇಲೆ ತೊಡುವ ಬಟ್ಟೆಗಳು ಮಳೆಗಾಳಿ ಬಿಸಿಲುಗಳಿಂದ ರಕ್ಷಿಸಿಕೊಳ್ಳಲು ಹೊದಿಕೆಗಳು ಅವಶ್ಯಕ ಸಾಧನಗಳಾಗತೊಡಗಿದವು. ಮರದ ತೊಗಟೆ, ಎಲೆಯಂಥ ವಸ್ತುಗಳ ಬಟ್ಟೆ ಮತ್ತು ಹೊದಿಕೆಯ ಕಾಲಾನಂತರದಲ್ಲಿ ಇಂದಿನ ನೂಲಿನ ಬಟ್ಟೆ ಮತ್ತು ಆ ಬಟ್ಟೆಯ ಹೊದಿಕೆಗೆ ಮನುಷ್ಯ ಕಾಲಿಟ್ಟನ್ನು ಈ ಹಿನ್ನೆಲೆಯಲ್ಲಿ ಜನಪದರು ಹಾಸು ಹೊದಿಕೆಗಾಗಿ ಬಳಸುವ ಕೌದಿಯೂ ಒಂದು ಅವಶ್ಯಕ ಸಾಧನವಾಯಿತು.

**೩.೧.೧. ಕೌದಿ ಅರ್ಥ ಸ್ವರೂಪ**

ಶಬ್ದಕೋಶಗಳಲ್ಲಿ ಕೌದಿ, ಪದಕ್ಕೆ ಕಂತೆ, ಹಳೆಯ ಅರಿವೆಯಹೊಸ ಹೊದಿಕೆ ತುಂಡು ಬಟ್ಟೆಗಳನ್ನು ಕೂಡಿಸಿ ಹೊಲಿದ ಹೂಚ್ಚಡವೆಂದು ಅರ್ಥಗಳಿವೆ.

---

೧೫. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ,

ಕರ್ನಾಟಕದಲ್ಲಿ ಕೌದಿಯನ್ನು ಕವುಂದಿ, ಕವಿದಿ, ಕೌಂದಿ, ಕಂತೆ ಎಂದು ಕರೆಯುತ್ತಾರೆ. ಕೌದಿ ತಮಿಳಿನಲ್ಲಿ ಕವನ್ನಿ, ಕವನ್ನಿಗ್ಗೈ ಮರೆಯಾಳೆದಲ್ಲಿ ಕವಿಯನ್ ಮರಾಠಿಯಲ್ಲಿ ಕಂಥಾ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿದೆ.

ಹೀಗೆ ಭಾರತದುದ್ದಕ್ಕೆ ಕೌದಿ ಕಾಣಬರುವಂಥ ವಸ್ತುವಾಗಿದೆ. ಕೌದಿ ಗ್ರಾಮೀಣ ಜನರ ಅವಶ್ಯಕ ಹೊದಿಕೆ ಹಾಸಿಗೆಯಾಗಿ ಪರಿಣಮಿಸಿದೆ. ಭಾರತದಲ್ಲಿ ಎಲ್ಲೆಡೆಯೂ ಕೌದಿ ಎಂಬ ಪದ ಪ್ರಯೋಗವೇ ಚಾಲ್ತಿಯಲ್ಲಿದೆ.[೧೬] ಮನೆಯಲ್ಲಿ ಹಳೆಯ ಹಾಗೂ ಹರಿದ ಸೀರೆ ಗಂಡಸರ ಹಳೆಯ ಹಾಗೂ ಹರಿದ ಅಂಗಿ ಧೋತರ ಚಿಕ್ಕಮಕ್ಕಳ ಹಳೆಯ ಹರಿದ ಬಟ್ಟೆಗಳನ್ನು ಕಲಾತ್ಮಕವಾಗಿ ಕತ್ತರಿಸಿ ಒಂದರ ಮೇಲೊಂದು ತೇಪೆ ಹಚ್ಚಿ ದಾರದ ದೊಡ್ಡ ಹೊಲಿಗೆ ಹಾಕುತ್ತಾರೆ. ವಿವಿಧ ರೀತಿಯ ಚಿತ್ರವಿನ್ಯಾಸಗಳು ತೇಪೆ ಹಚ್ಚುವ ತುಂಡು ಬಟ್ಟೆಯ ಮೂಲಕ ಕಾಣುವಂತೆ ಕೌದಿಯನ್ನು ದಾರಗಳಿಂದ ಹೋಲಿಯುತ್ತಾರೆ. ಗ್ರಾಮಾಂತರ ಪ್ರದೇಶಗಳಲ್ಲಿ ತವರುಮನೆಯಿಂದ ಹಡೆದು ಬರುವ ಹೆಣ್ಣುಮಕ್ಕಳಿಗೆ ತವರುಬಣ್ಣದ ಕುರುಹಾಗಿ ಕೌದಿಯನ್ನು ಉಡುಗೋರೆಯಾಗಿ ಕೊಡುವ ಸಂಪ್ರದಾಯವನ್ನು ಪಾಲಿಸುವುದರೊಂದಿಗೆ ಜನಪದರು ತುಂಡು ಅರಿವೆಯಲ್ಲಿ ದಾರದ ಹೊಲಿಗೆಯಲ್ಲಿ ತಮ್ಮ ಕಲಾ ಪ್ರೌಢಿಮೆಯನ್ನು ತೋರುವುದು ವೈಶಿಷ್ಟ್ಯಪೂರ್ಣವೆನಿಸಿದೆ.

ಕ್ರಿ.ಶ.ಸುಮಾರು ೨ನೆಯ ಶತಮಾನದ ಆಯುರ್ವೇದ ಶಾಸ್ತ್ರ ಕೃತಿಯಾದ ಚರಕ ಸಂಹಿತಾದಲ್ಲಿ ಕೌದಿಯನ್ನು ಕಂಥಾ ಎಂದು ಕರೆಯಲಾಗಿದೆ. ಇದು ಕೌದಿಯನ್ನು ಉಲ್ಲೇಖಿಸುವ ಪ್ರಾಚೀನ ದಾಖಲೆಯಾಗಿದೆ.

### ೩.೧.೨. ಕೌದಿ ಹೊಲಿಯುವಿಕೆ

ಜನಪದರು ಯಾವುದೇ ಕೆಲಸವನ್ನು ಆರಂಭಿಸುವ ಮುನ್ನ ಹಿರಿಯನ್ನಾಗಲಿ, ಮಠದ ಸ್ವಾಮಿಗಳನ್ನಾಗಲಿ, ಜ್ಯೋತಿಷಿಗಳನ್ನಾಗಲಿ ಕಂಡು ಅವರ ಅಭಿಪ್ರಾಯದ ಮೇರೆಗೆ ತಮ್ಮ ಕೆಲಸಕ್ಕೆ ತೊಡಗುತ್ತಾರೆ. ಅಂಥದೊಂದು ಶುಭದಿನವನ್ನು ಗೊತ್ತುಮಾಡಿಕೊಂಡು ಹೆಣ್ಣು ಮಕ್ಕಳು ಕೌದಿಯನ್ನು ಹೊಲಿಯಲು ಇಲ್ಲವೆ ಹೋಲಿಸಲು ಪ್ರಾರಂಭಿಸುತ್ತಾರೆ.

ಸಾಮಾನ್ಯವಾಗಿ ಯುಗಾದಿ ಪಾಡ್ಯ ಕೆರೆಯಂಬಲದಿನ ಅಥವಾ ಯಾವುದಾದರೂ ಒಳ್ಳೆಯ ದಿನವನ್ನು ಕೌದಿಗೆ ಶುಭಮಹೋರ್ತವೆಂದು ನಿಶ್ಚಯಿಸುತ್ತಾರೆ. ಕೆಲವು ಸಲ ಮಹೋರ್ತಕ್ಕಿಂತ ವಾರವು ಬಹಳ ಮುಖ್ಯವೆಂದು ಹೇಳುತ್ತಾರೆ. ಶನಿವಾರ ಇಲ್ಲವೆ ಬುಧವಾರ ಮಾತ್ರ ಕೌದಿ ಯ ಲ್ಯಾವಿ ಮಾಡಬೇಕೆಂಬ ನಿಯಮ ವಿದೆ. ಧನಿಷ್ಠಾ ನಕ್ಷತ್ರದ ಸಮಯವಾದ ಪಂಚಕದ ಸಂದರ್ಭದಲ್ಲಿ ಕೌದಿಯನ್ನು ಹೊಲಿಯುವುದಾಗಲಿ ಮತ್ತು ಹೊಲಿಗೆ ಮುಗಿಸುವುದಾಗಲಿ ಮಾಡಬಾರದೆಂಬ ನಿಯಮ ಜನಪದರಲ್ಲಿದೆ.[೧೭]

ಕೌದಿಯನ್ನು ಹೆಚ್ಚಾಗಿ ಬೇಸಿಗೆಯ ಕಾಲಕ್ಕೆ ಹೊಲಿಯುತ್ತಾರೆ. ಇನ್ನುಳಿದ ಸಮಯದಲ್ಲಿ ಅರಿವೆಗಳು ತಂಪಾಗುವದರಿಂದ ಸೂಜಿ ಸರಿಯಾಗಿ ನಾಟುವುದಿಲ್ಲ. ಬೇಸಿಗೆಯಲ್ಲಿ ಕೌದಿಯ ಪದರು ಅರಿವೆಗಳ ತುಂಡುಗಳನ್ನು ಬಿಸಿಲಿಗೆ ಒಣಹಾಕಿ ಹೊಲಿಗೆಗೆ ತೊಂದರೆಯಾಗದಂತೆ ಮಾಡಿಕೊಳ್ಳುತ್ತಾರೆ.

---

೧೬. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ,

೧೭. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೧೩೦, ೧೩೧, ೧೩೨

ಕೆಲವರು ವರ್ಷದುದ್ದಕ್ಕೂ ಕೌದಿ ಹೊಲಿಯುವುದನ್ನು ಹವ್ಯಾಸವಾಗಿರಿಸಿಕೊಂಡಿದ್ದಾರೆ. ಬೆಳಗಾವಿ ಜಿಲ್ಲೆಯ ಕಡೆಗೆ ಮಣ್ಣೆತ್ತಿನ ಅಮವಾಸ್ಯೆ ಅಂದರೆ ಜುಲೈ ತಿಂಗಳ ಬಿಟ್ಟರೆ ಉಳಿದ ಹನ್ನೊಂದು ತಿಂಗಳವೂ ಕೌದಿ ಹೊಲಿಯುತ್ತಿರುತ್ತಾರೆ. ಮುದುಕಿಯರು ಸಮಯ ಕಳೆಯುವುದಕ್ಕಾಗಿ ಕೌದಿಯನ್ನು ಹೊಲಿದರೆ. ಇದ್ದನ್ನೇ ವೃತ್ತಿಯಾಗಿಸಿಕೊಂಡವರು ದಿನದ ಸಮಯವೆಲ್ಲವೂ ಹೊಲಿಯುತ್ತಾರೆ. ಕೆಲವರು ಕೆಲಸ ಮುಗಿಸಿಕೊಂಡು ಮಧ್ಯಾಹ್ನದ ವೇಳೆಯಲ್ಲಿ ಮಾತ್ರ ಹೊಲಿಯುತ್ತಾರೆ.

### ೩.೧.೩. ಕೌದಿ ಹೊಲಿಯುವ ವಿವಿಧ ಹಂತಗಳು

ತಮಗೆ ಬೇಕಾದ ಅಳತೆಯಲ್ಲಿ ಸೀರೆ ಧೋತರ ಮೊದಲಾದ ಯಾವುದಾದರೂ ಹಳೆಯ ಅರಿವೆಗಳನ್ನು ಕತ್ತರಿಸಿ ಸಿದ್ಧ ಮಾಡಿಕೊಳ್ಳುತ್ತಾರೆ. ಎರಡು ಅಥವಾ ಮೂರು ಪದರೂ ಮಾಡಿ ಆರು ಅಥವಾ ಎಂಟು ಇಂಚುಗಳಿಗೆ ಒಂದರಂತೆ ಹೊಲಿಗೆ ಹಾಕುತ್ತಾರೆ. ಇದು ಕೌದಿ ಹೊಲಿಯುವ ಪೂರ್ವಭಾವಿ ಸಿದ್ಧತೆ ಲ್ಯಾವಿ ಮಾಡುವುದು ಸ್ವಲ್ಪ ಪ್ರಯಾಸಕರ ಕೆಲಸ ನಾಲ್ಕಾರು ಜನ ಹೆಣ್ಣುಮಕ್ಕಳು ಸೇರಿ ಲ್ಯಾವಿ ಕೆಲಸ ಪೂರೈಸುತ್ತಾರೆ. ಮೊದಲು ದೊಡ್ಡ ಅರಿವೆಯನ್ನು ಸಮನಾಗಿ ಹೆಚ್ಚು ಕಡಿಮೆಯಾಗದಂತೆ ಅರಿವೆ ಹಾಕಿಕೊಂಡು ಹೊಲಿಗೆ ಆರಂಭಿಸುತ್ತಾರೆ. ಇದನ್ನೇ ಲ್ಯಾವಿ ಮಾಡುವುದು ಎಂದು ಕರೆಯುತ್ತಾರೆ.

### ಕೌದಿ ಹೊಲಿಯುವ ಎರಡನೇ ಹಂತ

ಲ್ಯಾವಿಯ ನಂತರ ಬಿಸಿಲಲ್ಲಿ ಚೆನ್ನಾಗಿ ಒಣಗಿಸಿ ಪೂಜೆಸಲ್ಲಿಸಿ ಕೌದಿ ಹೊಲಿಯುವ ಎರಡನೇಯ ಹಂತದ ಕೆಲಸವನ್ನು ಪ್ರಾರಂಭಿಸುತ್ತಾರೆ. ಕೌದಿ ಹೊಲಿಯಲು ಕುಳಿತರೆ ಕೌದಿಯ ಎಲ್ಲ ಕಡೆಗೆ ಹೊಲಿಗೆ ಸುತ್ತುವರೆದು ಅಂದರೆ ಚೌರಸ ಆಕಾರವಾಗಿ ದಾರದ ಹೊಲಿಗೆ ಬೀಳುವ ತನಕ ಹೊಲಿಯಲು ಕುಳಿತವರು ಮೇಲೇಳಬಾರದೆಂಬ ನಿಯಮವಿದೆ.

ಈ ಸಂದರ್ಭದಲ್ಲಿ ಬೆಕ್ಕು ಅಡ್ಡಬರಬಾರದು, ಕೌದಿಯನ್ನು ದಾಟಬಾರದು ಹಾಗೇನಾದರು ಆದರೆ ಹಾಕಿದ ಹೊಲಿಗೆಯನ್ನು ಬಿಚ್ಚಿ ಮತ್ತೆ ಹಾಕುವುದು ಉಂಟು ಕುಳಿತ ಸಮಯಕ್ಕೆ ಹೊಲಿಗೆ ಮುಗಿಯಲಾರದು ಸಾಕೆನಿಸಿದಾಗ ಕೌದಿಯನ್ನು ಎಂಟು ಮಡಿಕೆ ಮಾಡಿ ಅದರ ಮೇಲೆ ಭಾರವಾದ ಕಲ್ಲು ಅಥವಾ ಯಾವುದಾದರೂ ಭಾರವಾದ ವಸ್ತುವನ್ನು ಹೇರಿ ಇಡುತ್ತಾರೆ. ತೋಯಿಸಿದ ಅರಿವೇಯನ್ನು ಬಿಸಿಲಲ್ಲಿ ಒಣಗಿಸುವುದರಿಂದ ಅದು ಬಿರುಸಾಗಿ ಹೊಲಿಯಲು ಸರಿಯಾಗುವುದಿಲ್ಲ, ಅದನ್ನು ಮಡಚಿ ಇಡುವುದರಿಂದ ಮೃದುವಾಗುತ್ತದೆ. ಹೊಲಿಗೆ ಸರಳವಾಗುತ್ತದೆ.

### ಕೌದಿಹೊಲಿಯುವ ಕೊನೆಯ ಹಂತ

ನಾಲ್ಕು ಜನ, ನಾಲ್ಕು ಬದಿಗಳಲ್ಲಿ ಏಕಕಾಲದಲ್ಲಿ ಕುಳಿತು ಕೌದಿಯನ್ನು ಹೊಲಿಯಬಹುದು. ಕೌದಿ ವೃತ್ತಿಯರು ಹೆಚ್ಚು ಜನರು ಕಂಡುಕೊಂಡು ಅತ್ಯಂತ ವೇಗವಾಗಿ ಹೊಲಿದು ಮುಗಿಸುತ್ತಾರೆ. ಲ್ಯಾವಿ ಮಾಡಿದ ಕೌದಿಯ ಮೇಲೆ ವಿವಿಧ ಬಣ್ಣಗಳ ಅರಿವೆಯ ತುಡಿತಗಳನ್ನು ಕ್ರಮವಾಗಿ ಜೋಡಿಸುತ್ತ ಹೊಲಿಯುವರು ಕೌದಿಯ ಅಂಚುಗಳಿಗೆ ಸೀರೆಯ ದಡಿಯನ್ನೇ ಹಚ್ಚುತ್ತಾರೆ.[೧೮] ಅದು ಒಂದೇ ಬಣ್ಣದ ಹೆಚ್ಚಾಗಿ ಒಂದೇ

---

೧೮. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೧೩೨, ೧೩೩

ಆಳತೆಯುಳ್ಳದಾಗಿರುತ್ತದೆ. ಒಂದೊಂದು ಸಲ ಸೀರೆಯ ದಡಿಗಳಿಂದಲೇ ಇಡಿ ಕೌದಿಯನ್ನು ಮುಗಿಸುತ್ತಾರೆ. ಒಬ್ಬರು ಪ್ರತಿದಿನ ನಾಲ್ಕರಿಂದ ಐದು ತಾಸು ಕುಳಿತು ಹೊಲಿದರೆ ಸುಮಾರು ಹದಿನೈದು ದಿನಗಳಲ್ಲಿ ದೊಡ್ಡ ಕೌದಿ ಮುಗಿಯಬಹುದು.

### ೩.೧.೪. ಕೌದಿ ಹೊಲಿಯುವವರಿಗೆ ಸಂಭಾವನೆ

ಕೌದಿ ವೃತ್ತಿಯುವರು ಕೌದಿ ಹೊಲಿಯಲು ಅರಿವೆ ಒಯ್ಯೂವಾಗ ಮತ್ತು ಹೊಲಿದು ಮುಗಿಸಿಕೊಂಡು ತಂದು ಕೊಡುವಾಗ ಉಡಿಯಕ್ಕಿ ಹಾಕಿ ಹಣ ಕಾಳುಗಳೊಡನೆ ಹೊಸ ಅರಿವೆ ಕೊಡುವುದುಂಟು. ಹೊಲಿಗೆಯ ವಿನ್ಯಾಸಗಳ ಸೌಂದರ್ಯದಿಂದ ಕೆಲವು ಸಲ ಕೌದಿಯ ಬೆಲೆ ಹೆಚ್ಚಾಗುತ್ತದೆ. ಆಗ ಮೊಳಕ್ಕೆ ಹತ್ತು ರೂಪಾಯಿಗೂ ಮಿಕ್ಕಿ ನಿಗದಿ ಪಡಿಸಬಹುದು.[೮] ಕೆಲವರು ಅರಿವೆ ದಾರ ಕೊಟ್ಟು ಕೇವಲ ಹೊಲಿದ ಕೂಲಿಯನ್ನು ಕೊಡುತ್ತಾರೆ. ಸುಮಾರಾಗಿ ನೂರು ರೂಪಾಯಿಯಿಂದ ನೂರಾ ೫೦ ರೂಪಾಯಿ ತನಕ ಐದರಿಂದ ಹತ್ತು ಕಿಲೋ ತೂಕದ ಕೌದಿಗೆ ಬೆಲೆ ಕಟ್ಟಬಹುದು, ಹಳೆ ತಲೆಮಾರಿನ ಜನರು ಧಾನ್ಯ, ವಸ್ತ್ರಗಳೊಡನೆ ಚಾಜ ವೆಂದು ತಮಗೆ ತಿಳಿದಷ್ಟು ಹಣವನ್ನು ಕೊಡುತ್ತಾರೆ.

### ೩.೧.೫. ಕೌದಿಯು ತಯಾರಿಸುವ ಸಾಮಗ್ರಿಗಳು

ಕೌದಿ ತಯಾರಿಸಲು ಈ ಕೆಳಗಿನ ಸಾಮಗ್ರಿಗಳು ಅವಶ್ಯಕತೆ ಇರುತ್ತದೆ.

೧. ಸೂಜಿ, ೨. ಬಿಳಿದಾರ, ೩. ಹಳೆ:ಹೊಸ ಅರಿವೆ ಹಾಗೂ ಅರಿವೆಯ ತುಂಡುಗಳು ಮತ್ತು ಕತ್ತರಿ ಕುಡುಗೋಲು.

### ಕೌದಿ ಚಿತ್ರಗಳು

ಅಜಿತಕುಮಾರ ಮುಖರ್ಜಿಯವರು ಕೌದಿ ಕಂಥ್ಯಾಯನ್ನು ಅದರ ಉಪಯೋಗದ ದೃಷ್ಟಿಯಿಂದ ಹೀಗೆ ವಿಂಗಡಿಸಿದ್ದಾರೆ. ೧. ವ್ಯಕ್ತಿಗಳ ಹೊದಿಕೆಯ ಕೌದಿ, ೨. ವಸ್ತುಗಳ ಹೊದಿಕೆಯ ಕೌದಿ, ೩. ತಲೆ ದಿಂಬು ಚೀಲದ ಕೌದಿ ಮತ್ತು ೪ ಚೀಲಗಳಾಗಿ ಕೌದಿ ಇವು ಬಂಗಾಲದಲ್ಲಿಯ ಕೌದಿಗಳ ಕುರಿತು ಹೇಳಿದ ವಿಚಾರಗಳಾಗಿರುತ್ತವೆ.

ಕರ್ನಾಟಕದ ಕೌದಿಗಳಲ್ಲಿ ಮುಖ್ಯವಾಗಿ ೧. ದೊಡ್ಡವರ ಕೌದಿ ಸಾಮಾನ್ಯವಾಗಿ ಏಳು ಅಡಿ ಉದ್ದ ಐದು ಮೊಳ ಅಗಲ ಇರುತ್ತದೆ. ಮಲಗಿದರೆ ಹೊರಗೆ ಕಾಣಿಸುವುದಿಲ್ಲ. ತಮ್ಮ ಪ್ರಮುಖ ಮತ್ತು ಅನಿವಾರ್ಯ ಅವಶ್ಯಕತೆಯನ್ನು ಗಮನಿಸಿ ಇಂಥ ಕೌದಿ ತಯಾರಾಗುತ್ತವೆ. ಹೀಗಾಗಿ ಹಳ್ಳಿಗಳಲ್ಲಿ ಪ್ರತಿ ವರ್ಷವೂ ಹೊಸ ಕೌದಿ ಹೊಲಿಸುತ್ತಾರೆ. ಹಳ್ಳಿಗಳಲ್ಲಿ ಕೌದಿಗಳಿಲ್ಲದ ಮನೆಗಳೇ ಇಲ್ಲ ಕೌದಿಯ ವಿಶಿಷ್ಟ ಗುಣವೆಂದರೆ ಬೇಸಿಗೆಯಲ್ಲಿ ತಂಪಾಗಿಯೂ ಚಳಿಗಾಲದಲ್ಲಿ ಬೆಚ್ಚಗಾಗಿಯೂ ಇರುವುದು, ಹೀಗೆ ಸರ್ವ ಋತು ಸಹಕಾರಿಯಾಗಿ ಕೆಲಸ ಮಾಡುವುದರಿಂದ ಕೌದಿ ಅತ್ಯಂತ ಪ್ರಿಯವಸ್ತುವಾಗಿದೆ. ಒಂದು ಕೌದಿ ಐದರಿಂದ ಹತ್ತು ವರ್ಷದವರೆಗೆ ಬಾಳಿಕೆ ಬರುವಷ್ಟು ಹೆಚ್ಚು ತಾಳಿಕೆಯ ಗುಣವನ್ನು ಹೊಂದಿರುತ್ತದೆ.

## ಚಿಕ್ಕವರ ಕೌದಿ

ಚಿಕ್ಕವರ ಕೌದಿ ಐದು ಮೊಳ ಉದ್ದ, ನಾಲ್ಕು ಮೊಳ ಅಗಲವಾಗಿರುತ್ತದೆ. ಪ್ರಾದೇಶಿಕವಾಗಿ ಈ ಅಳತೆಯಲ್ಲಿ ಭಿನ್ನತೆಗಳಿರುತ್ತದೆ. ತೊಟ್ಟಿಲು ಅಳತೆಯ ಚಿಕ್ಕ ಕೌದಿಗಳಿಗೆ ತೊಟ್ಟಿಲು ಕೌದಿಗಳೆಂದು ಹೆಸರು. ಇವು ಚಿಕ್ಕಮಕ್ಕಳಿಗಾಗಿ ಹೊಲಿಯಲ್ಪಟ್ಟಿದ್ದು ತೆಳ್ಳಗಿರುತ್ತದೆ. ಮಕ್ಕಳ ಜನನದ ಪೂರ್ವದಲ್ಲಿಯೇ ಮನೆಯ ಅಜ್ಜಿ ತಾಯಿ, ಇಲ್ಲವೆ ಕೌದಿ ವೃತ್ತ ಮೂಲದವರಿಂದ ಈ ಕೌದಿಗಳನ್ನು ತಯಾರಿಸಿಡುವರು.

ದೊಡ್ಡವರ ಹಾಗೂ ಚಿಕ್ಕಮಕ್ಕಳ ಕೌದಿಗಳಲ್ಲಿ ಹಾಸಿಗೆಯ ಕೌದಿ ಹಾಗೂ ಹೊದಿಕೆಯ ಕೌದಿಯೆಂದು ವಿಂಗಡಣೆ ಮಾಡಬಹುದು. ಹಾಸಿಗೆಯ ಕೌದಿಗಳು ಹೊದೆದುಕೊಳ್ಳುವ ಕೌದಿಗಳಿಗಿಂತ ದಪ್ಪವಾಗಿರುತ್ತವೆ. ಬೇಗ ಹರಿಯಬಾರದೆಂದೂ ಮಲಗಿಕೊಳ್ಳುವ ಹಾಸಿಗೆ ಮೆತ್ತಗೆ ಇರಬೇಕೆಂದೂ ಇವುಗಳನ್ನು ದಪ್ಪಗೆ ಹೊಲಿಯುತ್ತಾರೆ. ಇನ್ನೂ ಕೆಲವು ಸಲ ಹೊದಿಕೆಯ ಕೌದಿಗಳು ಬಳಸುತ್ತ ಹಳೆಯವಾದಂತೆ ಅದನ್ನು ಹಾಸಿಕೊಳ್ಳಲು ಉಪಯೋಗಿಸುವರು.

## ಹೊರ ಮೈ (ಬದಿ) : ಒಳಮೈ ಕೌದಿಗಳು - ದೊಡ್ಡವರ

ಕೌದಿಗಳಲ್ಲಿ ಕಲಾತ್ಮಕತೆಯನ್ನು ಗುರುತಿಸುವಾಗ ಕೌದಿಯ ಹೊರಮೈ, ಒಳಮೈ ವಿಳಾಸಗಳನ್ನು ನೋಡಬೇಕು, ಹೊರಮೈ ಬದಿ ಕೌದಿಗಳಲ್ಲಿ ಚಿತ್ರಗಾರಿಕೆ ಕಾಣಬಹುವುದಿಲ್ಲ. ಸೀರೆಯ ಅಂಚುಗಳನ್ನು ಕೌದಿಯ ಒದಿಯಲ್ಲಾಗಲೀ ಮಧ್ಯದಲ್ಲಿಯಾಗಲಿ ದೊಡ್ಡಪಟ್ಟಿಗಳು ಬರುವಂತೆ ಹೊಲಿಯುತ್ತಾರೆ. ಕೆಲವು ಸಲ ಕತ್ತರಿ ಅಥವಾ ಗುಣಕ ಚಿಹ್ನೆಯ ರೀತಿಯಲ್ಲಿ ಕೌದಿಯ ಪಟ್ಟಿ ಜೋಡಿಸಿರುತ್ತಾರೆ. ಇಲ್ಲದಿದ್ದರೆ ನಾಲ್ಕು ಮೂಲೆಗಳಿಂದ ಕೌದಿಯ ಮಧ್ಯದವರೆಗೆ ಗುಬ್ಬಿಯ ಕಾಲುಗಳ ವಿನ್ಯಾಸ ಹಾಕಿ ಹೊಲಿದಿರುತ್ತಾರೆ. ಒಟ್ಟಿನಲ್ಲಿ ತಮ್ಮ ಅಭಿರುಚಿಗೆ ತಕ್ಕಂತೆ ಹೊರಮೈ ವಿನ್ಯಾಸ ಮಾಡಿರುತ್ತಾರೆ. ಇನ್ನುಳಿದ ಕಡೆ ವರ್ಣದ ಅರಿವೆ ಇರುವುದರಿಂದ ಹೊರಮೈ ಕೌದಿಯೂ ನೋಡಲು ಆಕರ್ಷಕವಾಗಿರುತ್ತವೆ.

ಮಕ್ಕಳ ಕೌದಿಗಳಲ್ಲಿ ಕೌದಿ ಚಿತ್ರಗಳಿರುವ ಹೊರ ಮೈ ವಿನ್ಯಾಸಗಳಿರುತ್ತವೆ. ತಕ್ಕಮಟ್ಟಿಗೆ ಎರಡೂ ಬದಿಗಳಲ್ಲಿ ಸುಳುವು ಪಕ್ಷಿಪ್ರಾಣಿಗಳ ಚಿತ್ರಗಳು ಅಲ್ಲಲ್ಲಿ ಕಂಡುಬರುತ್ತದೆ.

ಒಳಮೈ ಕೌದಿಗಳಲ್ಲಿ ಕಲಾವಿದೆಯರ ಅದ್ಭುತ ಸೃಷ್ಟಿ ಕಣ್ಮುಂದೆ ಕಟ್ಟುತ್ತದೆ. ರಂಗು ರಂಗಿನ ನೂರಾರು ಚಿತ್ರ ವಿನ್ಯಾಸಗಳು ಇಲ್ಲಿ ಸ್ಥಾನ ಪಡೆದಿರುತ್ತವೆ. ಕೌದಿಯ ಹೊರಮೈ ಸಾದಾ ಸರಳ ವಿನ್ಯಾಸದಲ್ಲಿದ್ದರೆ ಒಳಮೈ ಅಲಂಕಾರಿಕವಾಗಿರುತ್ತದೆ.

ಹೊದ್ದುಕೊಂಡಾಗ ಕೌದಿಯ ಹೊರಮೈ ಮೇಲ್ಬದಿಗೆ ಬಂದರೆ ಹಾಸಿದಾಗ ಕೆಳಬದಿಗೆ ಬರುತ್ತದೆ. ಇದನ್ನು ತಿರುವು ಮರುವು ಹೊಡೆದುಕೊಂಡರೆ ಚಿತ್ರಗಳಿರುವ ಒಳಮೈಯನ್ನು ಹೊರಗಡೆ ಮಾಡಿ ಕೆಟ್ಟ ಕನಸುಗಳು ಬೀಳುತ್ತದೆ. ಸಾಲ ಹೆಚ್ಚಾಗುತ್ತದೆ. ಒಳ್ಳೆಯದಾಗುವುದಿಲ್ಲ ಅನಿಷ್ಟಕಾರಕವೆಂದು ನಂಬಲಾಗುತ್ತದೆ. ಊಟಕ್ಕೆ ಬಡಿಸುವ ಎಲೆಯನ್ನು ತಿರುವು ಮುರುವು ಹಿಡಿಯಬಾರದು ಎಂದು ಜನಪದರು ಹೇಳುತ್ತಾರೆ. ಇಂತಹ ಆಶಯವೇ ಕೌದಿಯ ಹಾಸು ಹೊದಿಕೆಯ ಹಿನ್ನೆಲೆಯಲ್ಲಿ ಬಂದಿರಬೇಕೆನಿಸುತ್ತದೆ.

ಕೌದಿಯ ಚಿತ್ರಗಳು ಕೌದಿಯ ವಿನ್ಯಾಸಗಳಲ್ಲಿ ಕಂಡುಬರುವ ಚಿತ್ರಗಳು ಈ ಕೆಳಗಿನಂತಿರುತ್ತವೆ.

೧. ರಾಮಾಯಣ, ೨. ಮಹಾಭಾರತ ಚಿತ್ರ, ೩. ಐತಿಹಾಸಿಕ ಚಿತ್ರ, ೪. ಧಾರ್ಮಿಕ ಚಿತ್ರ, ೫. ಅಲಂಕಾರಿಕ ಚಿತ್ರ, ೬. ಸಂಕೀರ್ಣಮಾದರಿಯ ಚಿತ್ರ ಇವುಗಳನ್ನು ಒಂದೊಂದಾಗಿ ಹೀಗೆ ವಿವರಿಸಬಹುದು.

೧. ರಾಮಾಯಣ ಮಹಾಭಾರತ ಚಿತ್ರ

ಉತ್ತರ ಕರ್ನಾಟಕದ ಕೌದಿಗಳಲ್ಲಿ ರಾಮನ ತೊಟ್ಟಿಲು, ಸೀತೆ, ಲವಕುಶ, ರಾಮ ಲಕ್ಷ್ಮಣ ಮಾಯಾಮೃಗ, ರಾವಣ, ರಾಮ ರಾವಣರ ಯುದ್ಧ ಯಜ್ಞದ ಕುದುರೆ, ಲವಕುಶರ ಯುದ್ಧ, ಸಮುದ್ರೋಲಂಘನದ ಹನುಮಂತ ಸಂಜೀವಿನಿ ತರುತ್ತಿರುವ ಹನುಮಂತ ಮೊದಲಾದ ರಾಮಾಯಣಕ್ಕೆ ಸಂಬಂಧಿಸಿದ ಚಿತ್ರಗಳು ಅಭಿಮನ್ಯು, ಚಕ್ರವ್ಯೂಹ, ರಾಧಾ ಕೃಷ್ಣ ಪಗಡೆಯಾಟ, ಪಗಡೆಮನಿ, ಪಾಂಡವರು, ಕರ್ಣ, ಧರ್ಮರಾಜನ ಪಾದ ಮುಂತಾದ ಮಹಾಭಾರತದ ಪ್ರಸಂಗದ ಚಿತ್ರಗಳು ವ್ಯಾಪಕವಾಗಿ ಕಂಡುಬರುತ್ತವೆ. ಈ ಎರಡು ರೀತಿಯ ಚಿತ್ರಗಳು ವ್ಯಕ್ತಿಯಿಂದ ವ್ಯಕ್ತಿಗೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ.

೨. ಐತಿಹಾಸಿಕ ಚಿತ್ರ

ಐತಿಹಾಸಿಕ ಸ್ಥಳ ಘಟನೆ ವ್ಯಕ್ತಿಗಳಿಗೆ ಸಂಬಂಧಿಸಿದ ಚಿತ್ರಗಳು ಕೌದಿಯಲ್ಲಿ ಚಿತ್ರಣಗೊಂಡಿರುತ್ತವೆ. ಉಳವಿ, ಹಂಪಿ, ಗೋಕರ್ಣ, ಶ್ರೀಶೈಲ, ತಿರುಪತಿ ಮೈಲಾರಗುಡ್ಡ ಮಲ್ಲಾಪುರ ಹೀಗೆ ಐತಿಹಾಸಿಕ ಸ್ಥಳಗಳ ಜಾತ್ರೆಯ ನೆನಪಿನ ದ್ಯೋಕವಾಗಿ ತೇರುಗುಡಿ ಉತ್ಸವದ ಚಿತ್ರಗಳು ಕೌದಿಯಲ್ಲಿ ಸ್ಥಾನ ಪಡೆದಿರುತ್ತವೆ, ಇದರಂತೆ ಕುಮಾರರಾಮ, ಬಸವೇಶ್ವರ, ಸಿದ್ಧಾರೂಢರು, ಗರಗದ ಮಡಿವಾಳಪ್ಪ, ಬಸವಣ್ಣ ಶಿವಶರಣರು ಕಲ್ಯಾಣದ ಅನುಭವ ಮಂಟಪ, ಏಸುಕ್ರಿಸ್ತ, ಬುದ್ಧ, ಮಹಾವೀರ ಮಹ್ಮದ ಪೈಗಂಬರ ಮುಂತಾದ ಐತಿಹಾಸಿಕ ಧಾರ್ಮಿಕ ಪುರುಷರ ಚಿತ್ರಗಳೂ ಕೌದಿಗಳಲ್ಲಿರುತ್ತವೆ.

೩. ಧಾರ್ಮಿಕ ಚಿತ್ರ

ಹಿಂದೂ-ಮುಸ್ಲಿಂ, ಕ್ರೈಸ್ತ-ಬೌದ್ಧ, ಜೈನ-ವೀರಶೈವ ಮೊದಲಾದ ಮತದ ಜನರು ತಮ್ಮ ಆರಾಧ್ಯ ದೈವಗಳನ್ನು ನೆನೆಯುವುದು, ಪೂಜಿಸುವುದು ಸಹಜ ಆಯಾ ಧರ್ಮಿಯರ ಧರ್ಮವನ್ನು ಸಂಕೇತಿಸುವ ಚಿತ್ರಗಳು ಕೌದಿಯಲ್ಲಿರುತ್ತವೆ.

ಈಶ್ವರ, ಬುದ್ಧ, ಬಸವ, ಲಿಂಗ, ಸ್ವಸ್ತಿಕ, ತೀರ್ಥಂಕರ, ಶುಭ ಲಾಭ, ಹನುಮಂತ, ಓಂ ಪುಣ್ಯಕ್ಷೇತ್ರ ಸ್ಥಳೀಯ ಮಠ, ಮಂದಿರ, ದೇವರ ಚಿತ್ರಗಳು ಉತ್ತರ ಕರ್ನಾಟಕದ ಕೌದಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

೪. ಸಾಮಾಜಿಕ ನೈಸರ್ಗಿಕ ಚಿತ್ರ

ಕೃಷಿಗೆ, ನಿಸರ್ಗಕ್ಕೆ ಸಂಬಂಧಿಸಿದ ಚಿತ್ರ ಜಾತ್ರೆ, ಉತ್ಸವ ಮದುವೆಗೆ ಸಂಬಂಧಿಸಿದ ಚಿತ್ರ ನೃತ್ಯಭಂಗಿಯ ಚಿತ್ರ ಜನಪದ ಆಟಗಳಿಗೆ ಸಂಬಂಧಿಸಿದ ರೇಖಾ ಚಿತ್ರಗಳು ಪ್ರದೇಶ ನಿಷ್ಠ, ಜನಾಂಗ ನಿಷ್ಠ ಹಾಗೂ ವ್ಯಕ್ತಿ ನಿಷ್ಠವಾಗಿ ಕೌದಿಗಳಲ್ಲಿ ರಚಿತಗೊಂಡಿರುತ್ತದೆ.

ಪಗಡೆ ಬಜಾರ, ಐದರ ಪಗಡಿ, ನಾಲ್ಕರ ಪಗಡಿ ಚಕಾರಮನಿಕೊಳ್ಳಲು ಬಾಮಿ, ತೇರು, ಬಾಸಿಂಗ, ದಂಡೆ, ಗೆಳತಿಯರು, ಸೂರ್ಯ, ಚಂದ್ರ, ನಕ್ಷತ್ರ, ನವಿಲು ಗಿಳಿ, ಆನೆ, ಒಂಟೆ, ಎಲೆಬಳ್ಳಿ, ಬಾಳೆಗೊನಿ,

ಗುಬ್ಬಕಾಲು, ಹಕ್ಕಿಕಾಲು ಮುಂತಾದ ಸಾಮಾಜಿಕ ಹಾಗೂ ನೈಸರ್ಗಿಕ ಚಿತ್ರಗಳು ಈ ಪ್ರದೇಶದಲ್ಲಿಯ ಕೌದಿಗಳಲ್ಲಿ ದಟ್ಟವಾಗಿ ಕಾಣಸಿಗುತ್ತವೆ.

೫. ಅಲಂಕಾರಿಕ ಚಿತ್ರ

ಕೌದಿಗಳಲ್ಲಿ ಮುಕ್ಕಾಲು ಭಾಗ ಅಲಂಕಾರಿಕ ಚಿತ್ರಗಳಿರುತ್ತವೆ. ತುಂಡು ತೇಪೆ ಹಚ್ಚುವಲಿ ವಿವಿಧ ರೀತಿಯ ಹೊಲಿಗೆಯ ವಿನ್ಯಾಸದಲ್ಲಿಯೂ ಕೌದಿಯ ಅಲಂಕಾರ ಕಾಣುತ್ತೇವೆ. ಸುಳುವು, ಹೂ ಬಳ್ಳಿ, ಹಣ್ಣು, ಹಕ್ಕಿಯ ಕಾಲು, ಪ್ರಾಣಿಯ ಹೆಜ್ಜೆ, ಸ್ವಸ್ತಿಕ ಮೊದಲಾದ ಸಂಕೇತಗಳು ಅಲಂಕಾರಗಳಾಗಿ ಕೌದಿಯಲ್ಲಿ ಸ್ಥಾನ ಪಡೆದಿವೆ.

ಕೌದಿಯ ನಾಲ್ಕು ಕಡೆಯ ಅಂಚು ಅಂಲಕಾರಗೊಂಡಿರುತ್ತದೆ. ಕೆಲವು ಸಲ ಕೌದಿಯ ಮಧ್ಯದಲ್ಲಿ ಬಿಂದುವನ್ನು ಮಾಡಿಕೊಂಡು ನಾಲ್ಕು ಮೂಲೆಗೆ ಕೊಡುವ ರೇಖಾಲಂಕಾರವು ಕೌದಿಯ ಸೌಂದರ್ಯವನ್ನು ಹೆಚ್ಚಿಸುತ್ತದೆ.

೩.೧.೬. ಕೌದಿ ವಿನ್ಯಾಸಗಳ ಪ್ರಾದೇಶಿಕಗಳ ಪ್ರಬೇಧಗಳು

ಕೌದಿ ವಿನ್ಯಾಸಗಳಲ್ಲಿ ಅನೇಕ ಸಾಮ್ಯತೆಗಳಿರುವ ಹಾಗೆ ವೈಷಮ್ಯತೆಗಳೂ ಇರುತ್ತವೆ. ಕೌದಿಯನ್ನು ರಚಿಸುವಲ್ಲಿ ಸಾಮಾನ್ಯವಾಗಿ ಎರಡು ಪ್ರಮುಖ ಅಂಶಗಳು ಕಂಡು ಬರುತ್ತದೆ.

೧. ದೇಹದ ರಕ್ಷಣೆಗಾಗಿ, ೨. ನಿರಪಯೋಗಿ ಅರಿವೆಯ ಸದುಪಯೋಗಕ್ಕಾಗಿ, ಹಾಗೆಯೇ ಇನ್ನೂ ಎರಡು ರೀತಿಯಲ್ಲಿ ವಿಭಾಗಿಸಿ ಹೇಳಬಹುದಾಗಿದೆ.

೧. ಅಲಂಕಾರಿಕ ಕೌದಿ

೨. ಅಲಂಕಾರಿಕೇತರ ಕೌದಿ

ಈ ಎರಡೂ ರೀತಿಯ ಕೌದಿಗಳಲ್ಲಿ ಅಲಂಕಾರಿಕ ಕೌದಿಗಳು ಕಡಿಮೆ ಸಂಖ್ಯೆಯಲ್ಲಿ ಉತ್ತರ ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿ ಕಂಡುಬಂದರೆ, ಸಾಮಾನ್ಯ ರೀತಿಯ ಕೌದಿಗಳು ಅಂದರೆ ಅಲಂಕಾರಿಕೇತರ ಕೌದಿಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಗೊತ್ತಾಗುತ್ತದೆ. ಅಲಂಕಾರಿಕೇತರ ಕೌದಿಗಳನ್ನು ಹೊಲಿಯಲು ಬೇಕಾಗುವ ವೇಳೇ ಅತ್ಯಂತ ಕಡಿಮೆ ಆದರೆ ಅಲಂಕಾರಿಕ ಅಂದರೆ ಚಿತ್ರವಿನ್ಯಾಸಗಳನ್ನೊಳಗೊಂಡ ಕೌದಿಯನ್ನು ಹೊಲಿಯ ಬೇಕಾದರೆ ಹೆಚ್ಚು ಸಮಯ ಹಿಡಿಯುತ್ತದೆ. ಅಲಂಕಾರಿಕ ಕೌದಿಗಳನ್ನು ಹೆಚ್ಚಾಗಿ ಹವ್ಯಾಸಿಕಲಾವಿದರು. ಹೆಚ್ಚಾಗಿ ಹೆಣ್ಣು ಮಕ್ಕಳು ತಮ್ಮ ಬಿಡುವಿನ ವೇಳೆಯಲ್ಲಿ ರಚಿಸಿದರೆ ಅಲಂಕಾರಿಕ ಕೌದಿಗಳನ್ನು ವೃತ್ತಿಕಾರ ಕುಟುಂಬಗಳು ಕಡಿಮೆ ವೇಳೆಯಲ್ಲಿ ಒಂದೇ ದಿನದಲ್ಲಿ ನಾಲ್ಕಾರು ಜನ ಕೂಡಿ ಹೊಲಿದು ಮುಗಿಸುತ್ತಾರೆ. ಅಲಂಕಾರಿಕ ಕೌದಿಗಳು ಉಡುಗೊರೆಯ ಕೌದಿಗಳಾಗಿರುತ್ತವೆ. ಮತ್ತು ವಿಶೇಷವಾದ ಸಂದರ್ಭದಲ್ಲಿ ಮದುವೆಯ ಸಮಯದಲ್ಲಿ ನೆಂಟರ ಮನೆಗೆ ಬಂದಾಗ ಈ ಕೌದಿಗಳನ್ನು ಉಪಯೋಗಿಸುವುದುಂಟು.

ಕೌದಿಯಲ್ಲಿ ಚಿತ್ರಗಳು ಆಕಾರ ಪಡೆಯುವುದು ಎರಡು ರೀತಿಯಿಂದ ಒಂದು ದಾರದ ರೇಖಾ ವಿನ್ಯಾಸಗಳಿಂದಾದ ಚಿತ್ರ ಎರಡು ವಿವಿಧ ಆಕಾರದ ಬಣ್ಣದ ಅರಿವೆಯ ತುಕಡಿಗಳ ಸಂಯೋಜನಾ ಚಿತ್ರವಿನ್ಯಾಸ.

ಸುಳುವು, ಪಶುಪಕ್ಷಿ,ಹೂ ಎಲೆ ಬಳ್ಳಿಯಂತಹ ಚಿತ್ರಗಳು ದಾರದಿಂದ ರೇಖೆಯ ರೂಪ ಪಡೆದು ಕೌದಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇಂತ ಚಿತ್ರಗಳೇ ಹೆಚ್ಚಾಗಿರುತ್ತವೆ.

ಕೌದಿಯ ಸರ್ವಸಮಗ್ರ ಸೌಂದರ್ಯವಿರುವುದು ಬಣ್ಣದ ವಿನ್ಯಾಸದ ಚಿತ್ರಗಳಲ್ಲಿಬಣ್ಣದ ಅರಿವೆಯ ತುಕಡಿಗಳ ಚೌಕಾಕೃತಿ, ತ್ರಿಕೋನಾಕೃತಿ, ಆಯತಾಕೃತಿ, ಭೂಮಿತಿಯಾಕೃತಿ ಚಿತ್ರಗಳು ಇಲ್ಲಿ ಹೆಚ್ಚಾಗಿರುತ್ತವೆ. ಹೊಲಿಗೆ ಮುಗಿದ ಮೇಲೆ ಈ ಬಣ್ಣದ ಪಟ್ಟಿಗಳು ಕೌದಿಯ ಮೇಲೆ ಬಣ್ಣಹಚ್ಚಿದಂತೆ ಕಾಣಿಸುತ್ತವೆ. ಇಲ್ಲಿ ಕಲಾವಿದರ ಕಲಾ ಪ್ರತಿಭೆಯ ವೈಭವವನ್ನು ಕಾಣಬಹುದಾಗಿದೆ. ಇಷ್ಟ ದೈವದ ಚಿತ್ತಾರ ಧಾರ್ಮಿಕ ಚಿಹ್ನೆಗಳೂ ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ ಮುಸ್ಲಿಂ ಜನಾಂಗದವರ ಕೌದಿಗಳಲ್ಲಿ ಅರ್ಧಚಂದ್ರಾಕೃತಿ, ನಕ್ಷತ್ರ, ಹಿಂದೂಗಳ ಕೌದಿಗಳಲ್ಲಿ ಪಾಂಡವರ ಪಗಡೆಯಾಟ, ಸೀತೆಯ ಸೆರಗು, ಈಶ್ವರಹನುಮಂತ, ಕೃಷ್ಣ, ಕ್ರೈಸ್ತರ ಮನೆಯ ಕೌದಿಗಳಲ್ಲಿ ಶಿಲುಬೆಯಾಕೃತಿಗಳು ಕಂಡುಬರುತ್ತವೆ. ಇಲ್ಲಿ ಬಣ್ಣ ಕುಂಚಗಳಿಲ್ಲದೇ ಹಳೆಯ ಬಣ್ಣದ ಬಿಳಿ ಅರಿವೆ ಹಾಗೆ ಅರಿವೆಯ ತುಕಡಿಗಳ ಸುಂದರ ವರ್ಣಸಂಯೋಜನೆ ಕೌದಿಗಳಲ್ಲಿದೆ.

### ೩.೨. ಕಸೂತಿ ಚಿತ್ರಕಲೆ

ನಿತ್ಯದ ಬದುಕನ್ನು ಹಸನಾಗಿ ನಡೆಸುವಂತೆ ಒಂದು ಸೂತ್ರದಲ್ಲಿ ಧರ್ಮವು ಸಂಬಂಧಿಸಿದೆ. ಈ ಧರ್ಮಪ್ರಜ್ಞೆಯ ಆಚಾರ ವಿಚಾರಗಳು ಹಲವಾರು ಸಂಪ್ರದಾಯಗಳಿಗೆ, ನಂಬಿಕೆಗಳಿಗೆ ಮೌಲ್ಯಗಳಿಗೆ ಕಾರಣವಾಗಿ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರ, ಶಿಲ್ಪ ಮುಂತಾದ ಕಲೆಗಳು ಹುಟ್ಟಿ ವಿಕಾಸಗೊಂಡವು. ಅಂತಹ ಕಲೆಗಳ ಬೆಳವಣಿಗೆ ವಿಕಾಸಗಳೇ ಸಾಂಸ್ಕೃತಿಕ ವೈಭವವನ್ನು ಸೂಚಿಸುತ್ತದೆ.

ಕನ್ನಡಿಗರ ಕನ್ನಡ ನೆಲವು ಜನಪದ ಕಲೆಗಳ ಕಣಜವಾಗಿದೆ. ಕಸೂತಿ ಕಲೆಯು ಧರ್ಮಮೂಲವಾಗಿ ಬೆಳೆದು ಬಂದಿದೆ. ಧಾರ್ಮಿಕ ಸಂಪ್ರದಾಯಗಳು, ಪ್ರಕೃತಿಯ ಶಕ್ತಿಮೂಲಗಳು, ಮನುಷ್ಯನ ಸೊಸ್ತ ಶಕ್ತಿಗಳು ಅಡಕವಾಗಿರುವ ಸೌಂದರ್ಯ ತುಂಬಿರುವ. ವೃತ್ತಮಾಲವಾಗಿರುವ ಕಲೆಯೇ ಕಸೂತಿ ಕಲೆಯಾಗಿದೆ.

ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಕಸೂತಿ ಬಿಡಿಸುವ ಸಂಪ್ರದಾಯವಿದೆ. ಕಸೂತಿ ಕಲೆ, ಮಾನವ ಸಂಸ್ಕೃತಿ ಕಾಲಕ್ರಮೇಣ ಹೇಗೆ ರೂಪಗೊಂಡಿತು, ಎಂಬುದನ್ನು ತೋರಿಸಬಲ್ಲ ವಿಶಿಷ್ಟ ಪ್ರಕಾರ ಕಸೂತಿ ಕಲೆ ವಿಶ್ವದ ಅನೇಕ ದೇಶಗಳಲ್ಲಿ ಉಳಿದುಕೊಂಡು ಹಾಗೆ ಸಾರ್ವತ್ರಿಕವಾಗಿ ಪ್ರಪಂಚದ ಎಲ್ಲ ಕಡೆ ಹೊರೆಯುವ ಭಾರತದಲ್ಲಿ ಎಲ್ಲಾ ರಾಜ್ಯಗಳಲ್ಲಿಯೂ ಕಸೂತಿ ನಕ್ಷೆಗೆ ತಮ್ಮದೇ ಆದ ಪ್ರಾಂತೀಯ ವೈಶಿಷ್ಟ್ಯವಿದೆ ಹಾಗೂ ಪ್ರಸಿದ್ಧಿಯಿದೆ. ಕರ್ನಾಟಕದಲ್ಲಿ ಕಸೂತಿ ಎಂದು ಕರೆಯಲ್ಪಡುವ ಈ ಕಲೆಗೆ ಪಂಜಾಬದಲ್ಲಿ ಪೊಲ್ಕಾರಿ, ಕಾಶ್ಮೀರ ಹಾಗೂ ಬಿಹಾರದಲ್ಲಿ ಕಶಿದು, ಬಂಗಾಲದಲ್ಲಿ ಕಾಂತಾ ಓರಿಸ್ಸಾದಲ್ಲಿ ಅಪ್ಲಿಕ್, ಗುಜರಾತದಲ್ಲಿ ಕಚ್ ಕಾದಿಯಾವರ, ಉತ್ತರ ಪ್ರದೇಶದಲ್ಲಿ ಚಿಕನಕಾರಿ, ಹಿಮಾಚಲ ಪ್ರದೇಶದಲ್ಲಿ ಛಂಬಾರುಮಾಲ್, ರಾಜಸ್ಥಾನದಲ್ಲಿ ಭರತಕಾಮ್ ಮತ್ತು ಮಹಾರಾಷ್ಟ್ರದಲ್ಲಿ ಕಶೀದಾ ಕಸುದಾ ಎಂಬ ಪ್ರಾದೇಶಿಕವಾದ ಬೇರೆ ಬೇರೆ ಹೆಸರುಗಳಿರುತ್ತವೆ.[೧೯] ಅದರಲ್ಲೂ ಕರ್ನಾಟಕ ಕಸೂತಿ ಕಲೆಯು ಪ್ರಾಚೀನ ಇತಿಹಾಸ ಉಳ್ಳ

---

೧೯. ಕನ್ನಡ ನಿಘಂಟು, ಕ.ಸಾ.ಪ ಸಂಪುಟ-೨, ಪುಟ-೧೬೩೪

ಕಲೆಯಾಗಿದೆಯೆಂದು ಹೇಳಿಕೊಳ್ಳಲು ಕನ್ನಡಿಗರಾದ ನಮಗೆ ಹೆಮ್ಮೆಯ ವಿಷಯ ಕರ್ನಾಟಕ ಕಸೂತಿಯು ಹೆಚ್ಚಾಗಿ ಆಸ್ಟ್ರೀಯಾ, ಹಂಗೇರಿ ಹಾಗೂ ಸ್ಪೇನ್ ದೇಶಗಳ ಕಸೂತಿಯನ್ನು ಹೋಲುತ್ತದೆ.

ಈ ಕಸೂತಿ ಕಲೆಯೂ ಮೇಲೋತ್ಪತ್ತಿಯ ಕುರಿತು ಯಾರಿಂದ, ಯಾವಾಗ ಬಂದಿತೆಂದು ನಿಖರವಾಗಿ ಹೇಳಲು ಯಾವ ಆಧಾರಗಳೂ ಸಾಲವು ತಮ್ಮ ನಿತ್ಯದ ಚಟುವಟಿಕೆಗಳನ್ನು ಕಲಾತ್ಮಕವಾಗಿ ಕಂಡ ಜನಪದರು. ಹಾಸು, ಹೊದಿಕೆ, ಮನೆ ನೆಲ ಹಾಗೂ ಸ್ವದೇಹದ ಅಂಗಾಂಗ, ಗೋಡೆ ಮುಂತಾದ ಕಡೆಗಳಲ್ಲಿ ತಮಗೆ ಅಂದ ಕಂಡಂತೆ ಚಿತ್ರಾಲಂಕಾರಗಳನ್ನು ಬಿಡಿಸಿದರು. ಅವುಗಳಲ್ಲಿ ದಾರದ ಸಾಧನದ ಚಿತ್ರ ವಿನ್ಯಾಸವೇ ಕಸೂತಿಯಾಗಿದೆ. ಕರ್ನಾಟಕದಲ್ಲಿ ಈ ಕಲೆಯು ಕರ್ನಾಟಕ ಕಸೂತಿ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಕಸೂತಿ ಎಂಬುದು ಕೈ ಸೂಚಿ ಎಂಬುದರಿಂದ ಬಂದಿತು ಸೂಚಿ ಎಂದರೆ ನೂಲುದಾರ ಎಂದರ್ಥ. ಕಸೂತಿ ಎಂದರೆ ಬಣ್ಣದ ದಾರಗಳಿಂದ ಬಟ್ಟೆಗಳಿಗೆ ಕಾಡುವ ಹೆಣಿಗೆಯ ಅಲಂಕಾರ, ವಸ್ತ್ರದ ಮೇಲೆ ಸೂಜಿ, ದಾರಗಳಿಂದ ಹೆಣೆದು ಮಾಡಿದ ಅಲಂಕಾರ, ವಸ್ತ್ರದ ಸೂಜಿದಾರಗಳಿಂದ ಹೆಣೆದು ಮಾಡಿದ ಅಲಂಕಾರವನ್ನೇ ಕಸೂತಿ ಎನ್ನುತ್ತಾರೆ.



ಮಹೇಂಜೋದಾರೊದ ಕಂಚಿನ ಸೂಜಿಗಳನ್ನು ಬಹುಶಃ ಕಸೂತಿಗಾಗಿಯೇ ಉಪಯೋಗಿಸುತ್ತಿದ್ದಿರಬಹುದೆನಿಸುತ್ತದೆ. ಸಿಂಧೂನದಿ ನಾಗರಿಕತೆಗಳ ಸಂಶೋಧನೆಯಲ್ಲಿ ಸಿಕ್ಕಿರುವ ಅನೇಕ ಉಡುಪುಗಳಲ್ಲಿ ಉತ್ಕೃಷ್ಟವಾದ ಕಸೂತಿಯ ನಮೂನೆಗಳಿವೆ. ಋಗ್ವೇದದಲ್ಲಿ "ಹಿರಣ್ಯವೇ ಶನ್" ಶಬ್ದವಾದ ಧರಿಸಿ ಅಲಂಕಾರದಲ್ಲಿಯೂ ಭಾರತದಲ್ಲಿ ಚಿನ್ನದ ಕಸೂತಿ ಇತ್ತೆಂದು ಹೇಳಲಾಗುತ್ತಿದೆ. ಭಾರತದ ಕಸೂತಿಯಲ್ಲಿ ಚಿನ್ನದ ಎಳೆ ಹಾಗೂ ರತ್ನ ಉಪಯೋಗಿಸುತ್ತಿದ್ದುದನ್ನು ಮೆಗಾಸ್ತನೀಸ್ (ಕ್ರಿ.ಪೂ.೩.೨೦) ಹೇಳುತ್ತಾನೆ.

ಭಾರತಕ್ಕೆ ಬಂದ ವಿದೇಶಿ ಪ್ರವಾಸಿಗರಾದ ಹ್ಯೂಯನ್‌ತ್ಸ್ಯಾಂಗ್, ಮೆಗಾಸ್ತನೀಸ್, ನಿಕೋಲೊಕಾಂಟಿ, ಮಾರ್ಕೊಪೋಲೋ ಇವರ ಪ್ರವಾಸಕಥನದಲ್ಲಿ ಭಾರತದ ಬೆಲೆ ಬಾಳುವ ಮಾರಾಟದ ಸರಕುಗಳಾದ ಸಾಂಭಾರಪದಾರ್ಥ, ಹಸ್ತಿದಂತ, ಶ್ರೀಗಂಧಗಳೊಡನೆ, ಜರತಾರಿಯನ್ನು ಸೇರಿಸಿ ನೇಯ್ದು ಮತ್ತು ಕಸೂತಿ ಮಾಡಿದ ರೇಷ್ಮೆ ಮತ್ತು ಹತ್ತಿವಸ್ತ್ರಗಳ ಪ್ರಸ್ತಾಪವೂ ಇದೆ.

ಈ ಕಸೂತಿಯು ಈಗಲೂ ಕೆಲವೊಂದು ಸ್ಥಳಗಳಲ್ಲಿ ಮಿರಜ,ಸಾಂಗ್ಲಿ, ಬಿಜಾಪುರ, ಹುಬ್ಬಳ್ಳಿ, ಹಾಗೂ ಧಾರವಾಡ ಜಿಲ್ಲೆಯ ಕೆಲವೊಂದು ಗ್ರಾಮೀಣ ಪ್ರದೇಶಗಳಾದ ನರೇಂದ್ರ, ನರಗುಂದ, ನವಲಗುಂದ, ವೀರಾಪುರ, ಅಮ್ಮೀನಭಾವಿ, ಮಮ್ಮಿಗಟ್ಟಿ, ಗೋವನಕೊಪ್ಪ, ಎತ್ತಿನಗುಡ್ಡ, ನಿಗದಿ, ಮುಗದ, ಕಲಕೇರಿ, ಹಾವೇರಿ, ಗದಗ, ಕಲಘಟಗಿ, ಮನಗುಂಡಿ, ಮನಸೂರು ಹಾಗೂ ಮುಂಡರಗಿ ಮುಂತಾದ ಪ್ರದೇಶಗಳಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ.[೨೦] ಹೆಚ್ಚು ಕಡಿಮೆ, ಪ್ರತಿಯೊಂದು ಮನೆಯಲ್ಲೂ ಒಂದು ಮೀಟರ್ ಸಾದಾ ದಪ್ಪನೆಯ ನೂಲು ಬಟ್ಟೆಯ ಮೇಲೆ ಎಲ್ಲ ತರಹದ ಕಸೂತಿ ನಕ್ಷೆಗಳನ್ನು ಬಿಡಿಸಿದ ಒಂದು ನಮೂನೆ ಇರಲೇಬೇಕು. ಈ ನಮೂನೆಯೇ ಸ್ಯಾಂಪಲ್ ಈ ಕಲೆಯನ್ನು ವಂಶಪಾರಂಪರ್ಯವಾಗಿ ಮುಂದುವರಿಸಿಕೊಂಡು

---

೨೦. ಡಾ.ಎಸ್.ಸಿ.ಪಾಟೀಲ, ಕರ್ನಾಟಕದ ಜನಪದ ಚಿತ್ರಕಲೆ, ಪುಟ-೧೦೨

ಹೋಗಲು ಒಂದು ಆಧಾರದ ಹೊತ್ತಿಗೆಯಾಗಿದೆ. ಕೆಲವರ ಮನೆಯಲ್ಲಿ ಮ್ಯಾಟಿ ಬಟ್ಟೆಯ ಮೇಲೆ ಬಿಡಿಸಿದ ದೃಷ್ಟಾಂತಗಳಿವೆ. ಈ ನಮೂನೆಯನ್ನು ಮಹಿಳೆಯರನ್ನು ತಮ್ಮ ಗಂಡಂದಿರಿಗೆ ಹೊಲಕ್ಕೆ ಬುತ್ತಿ ಕೊಡಲು ಹೋಗುವಾಗ ಅಂದ ಕಾಣಲು ಬುತ್ತಿಯ ಹೊದಿಕೆಯಾಗಿ ಉಪಯೋಗಿಸುವರು. ಹಾಗೂ ಹಬ್ಬ ಹರಿದಿನಗಳಲ್ಲಿ ದೇವರ ಮುಂದೇ ಅಲಂಕಾರದ ಹೊಂದಿಕೆಗಾಗಿ ಬಳಸುವುದು ಈಗಲೂ ರೂಢಿಯಲ್ಲಿದೆ.

**೩.೨.೧. ಕಸೂತಿ ಹೊಲಿಗೆ ಪ್ರಕಾರಗಳು**

ಕರ್ನಾಟಕದ ಕಸೂತಿಯಲ್ಲಿ ಮುಖ್ಯವಾಗಿ ನಾಲ್ಕು ಪ್ರಕಾರದ ಹೊಲಿಗೆಗಳಿವೆ.

**೧. ಗಾವಂಟಿ**

ಗಾವಂಟಿ ಎಂಬ ಹೆಸರು ಗಂಟು ಶಬ್ದದಿಂದ ರೂಪಗೊಂಡಿತು. ಒಂದು ದಿಸೆಯಲ್ಲಿ ಹಾಕಿದ ಸಮ ಎಳೆಯ ನಡುವಿನ ಅಂತರವನ್ನು ಹಿಮ್ಮುಖವಾಗಿ ತುಂಬುತ್ತಾ ಬರುವದರಿಂದ ಇದಕ್ಕೆ ಡಬಲ್‌ಸಮ ಎಳೆ ಎಂದೂ ಸಹಕರೆಯುತ್ತಾರೆ. ಈ ಹೊಲಿಗೆಯನ್ನು ಉದ್ದ, ಅಡ್ಡ ಹಾಗೂ ವಕ್ರ ದಿಸೆಯಲ್ಲಿಯೂ ಸಹ ಬಿಡಿಸುವುದರಿಂದ ನಕ್ಷೆಗಳ ನಮೂನೆಗಳು ರೇಖಾಕಾರದಲ್ಲಿರುತ್ತವೆ.

**೨. ಮುರ್ಗಿ**

ಡಬಲ್ ಸಮ್ಮ ಎಳೆಯನ್ನು ಮುರ್ಗಿಯಾಕಾರದಲ್ಲಿ ಅಥವಾ ಏಣಿ ಮೆಟ್ಟಿಲಾಕಾರದಲ್ಲಿ ತುಂಬುವುದರಿಂದ ಈ ಹೊಲಿಗೆಗೆ ಮುರ್ಗಿ ಹೊಲಿಗೆಯೆಂದು ಕರೆಯುತ್ತಾರೆ.

**೩. ನೇಗಿ**

ನೇಗಿ ಹೊಲಿಗೆಗೆ ರಫು ಹೊಲಿಗೆಯೆಂದು ಕರೆಯುತ್ತಾರೆ. ಯಾವಾಗಲೂ ಅಡ್ಡದಿಸೆಯಲ್ಲಿ ಸಮ ಹಾಗೂ ಅಸಮ ಎಳೆಗಳನ್ನು ಹಾಕುವುದರಿಂದ ಹಾಕಿದ ನಕ್ಷೆಯ ನಮೂನೆಗಳು ನೇಯ್ದ ಡಿಸೈನ್ ಬಟ್ಟೆಗಳನ್ನು ಹೋಲುವುದರಿಂದ ಈ ಹೊಲಿಗೆಗೆ ನೇಗಿ ಎಂಬ ಹೆಸರು ಬಂದಿದೆ.

**೪. ಮೆಂತ್ಯ**

ಈ ಹೊಲಿಗೆ ಮೆಂತ್ಯಕಾಳನ್ನು ಹೋಲುವುದೆಂದು ಕೆಲವರ ನಂಬಿಕೆ ಆದ್ದರಿಂದ ಮೆಂತ್ಯ ಹೊಲಿಗೆ ಅಥವಾ ಕ್ರಾಸ್ ಹೊಲಿಗೆ ಎಂದೂ ಸಹ ಕರೆಯುತ್ತಾರೆ. ಮೆಂತ್ಯ ನಕ್ಷೆಗಳು ನೋಡಲು ದಟ್ಟವಾಗಿದ್ದು, ನಕ್ಷೆಗಳನ್ನು ಬಿಡಿಸಲು ಹೆಚ್ಚು ನೂಲು ಹಿಡಿಯುವುದು.

**೩.೨.೨. ಕಸೂತಿಕಲೆಯ ವೈಶಿಷ್ಟ್ಯತೆಗಳು**

ಕಸೂತಿಯನ್ನು ಗ್ರಾಮೀಣ ಪ್ರದೇಶಗಳಲ್ಲಿ ರೇಷ್ಮೆ ನೂಲು ಇಲ್‌ಕಲ್ ಸೀರೆ, ಕುಂಚಿಗೆ, ಖಣ ಬಟ್ಟೆಯಿಂದ ಹೊಲಿಸಿದ ಕುಪ್ಪಸ ಹಾಗೂ ಕಂಬಳಿಗಳ ಮೇಲೆ ಹಾಕುತ್ತಾರೆ. ಬಣ್ಣ ಗ್ರಾಮೀಣ ಮಹಿಳೆಯುಸಹ ತನ್ನ ಸೀರೆಯ ಸೆರಗಿನಲ್ಲಿ ಒಂದಿಂಚು ಅಗಲದ ಕಸೂತಿ ಬಿಡಿಸಿದ ಸಾದಾ ಸೀರೆ ಧರಿಸುವುದನ್ನು ನೋಡಿದರೆ, ನಮ್ಮ ಕಸೂತಿ ಕಲೆಯ ಶ್ರೀಮಂತಿಕೆ ಹಾಗೂ ಜನಪ್ರಿಯತೆ ಮನದಟ್ಟಾಗುತ್ತದೆ. ಕನ್ನೆಯು ಪ್ರಾಪ್ತವಯಸ್ಕಳಾಗುವ ಮೊದಲೇ ಕಸೂತಿಯನ್ನು ಕಲಿತುಕೊಳ್ಳುವುದು, ಇಲ್ಲಿಯ ಸಂಪ್ರದಾಯ ತಮಗೆ ಬೇಕಾದ ಕಸೂತಿಯ ನಕ್ಷೆಗಳನ್ನು ತಮ್ಮ ತಾಯಂದಿರು ಅಜ್ಜಿ, ಮುತ್ತಜ್ಜಿಯರು ಕಸೂತಿಹಾಕಿ ತಂದಿರಿಸಿದ ನಮೂನೆಯಿಂದಲೇ

ಆಯ್ದುಕೊಳ್ಳುತ್ತಾರೆ. ಈ ಕಸೂತಿಗಾಗಿ ಬಿಜಾಪುರ, ಧಾರವಾಡ, ಹುಬ್ಬಳಿ ಮಾರುಕಟ್ಟೆಗಳಲ್ಲಿ ಲಭ್ಯವಾಗುವ ಹೊಸೆಯದ ರೇಷ್ಮೆದಾರಗಳನ್ನೇ ಬಳಸುತ್ತಾರೆ. ಆದರೆ ಈಗಿನ ಪೀಳಿಗೆಯ ಜನರು ಹೊಸೆದ ರೇಷ್ಮೆದಾರಗಳಾದ ಆ್ಯಂಕರ್, ಡೋಲಿಗಳನ್ನು ಬಳಸುತ್ತಾರೆ.[೨೧]

ಕಸೂತಿ ಹೊಲಿಗೆಯನ್ನು ಹೊಸೆಯದ ಐದಾರು ಎಳೆಗಳನ್ನು ಒಂದೇ ಸಲಕ್ಕೆ ಪೋಣಿಸಿ, ಎಳೆಗಳ ಕೊನೆಗೆ ಗಂಟನ್ನು ಹಾಕದೇ ಬಟ್ಟೆಯ ಎಳೆಗಳನ್ನು ಎಣಿಸಿ ನಕ್ಷೆಯನ್ನು ಚಿತ್ರಿಸಿಕೊಳ್ಳದೇ ನೇರವಾಗಿ ನಕ್ಷೆಯಾಕಾರವನ್ನು ಕಲ್ಪಿಸಿಕೊಂಡು ನೀಟಾಗಿ ಹಾಕುವುದೇ ಈ ಕಸೂತಿಯ ಇನ್ನೊಂದುವೈಶಿಷ್ಟ್ಯ ಚಿತ್ರದ ಗಾತ್ರ ಮತ್ತು ಆಕಾರಕ್ಕೆ ಮೈಭಾಗದಲ್ಲಿಯೂ ತಮ್ಮ ಅಭಿರುಚಿಗಳಿಗನುಗುಣವಾಗಿ ಕಸೂತಿಯ ನಕ್ಷೆಗಳನ್ನು ಬಿಡಿಸುತ್ತಾರೆ. ಗ್ರಾಮೀಣ ಮಹಿಳೆಯರಲ್ಲಿ ಇರುವ ಕಸೂತಿ ನಕ್ಷೆಯ ನಯನಗಾರಿಕೆ, ಅಂದ ಚಂದ ಹಾಗೂ ನಕ್ಷೆಯ ಕುರಿತು ಇರುವ ಕಲ್ಪನಾ ಶಕ್ತಿ ಆಗಾಧವಾದುದು. ಇದು ಮಹಿಳೆಯ ಚಾಣಾಕ್ಷತನ ಸಾಮರ್ಥ್ಯ, ಸಾಧನೆ ಹಾಗೂ ಜಾಣ್ಮೆಯನ್ನು ಎತ್ತಿ ತೋರಿಸುತ್ತದೆ.

### ೩.೨.೩. ಕಸೂತಿಯ ವಿನ್ಯಾಸಗಳು

ಗ್ರಾಮೀಣ ಕಸೂತಿ ಕಲೆಯು ಮನುಷ್ಯ ಪ್ರಕೃತಿಯೊಂದಿಗೆ ಪ್ರಾಣಿ ಪಕ್ಷಿಗಳೊಂದಿಗೆ ದೇವ ದೇವತೆಗಳೊಂದಿಗೆ ಹೆಣ್ಣಿನೊಂದಿಗೆ ಹೊಂದಿದ ನಿಲುವನ್ನೇ ತೋರಿಸುವ ನಿಲವುಗನ್ನಡಿಯಾಗಿದೆ.

ಪ್ರಾಕೃತಿಕವಾಗಿ ಗಿಡ, ಹೂ, ಬಳ್ಳಿ, ಪ್ರಾಣಿ ಪಕ್ಷಿಗಳ ನಕ್ಷೆಗಳು ಅತಿಹೆಚ್ಚಿನ ಮಹತ್ವವನ್ನು ಪಡೆದಿವೆ. ಗಿಡ ಬಳ್ಳಿಗಳಲ್ಲಿ ತುಳಸಿಗಿಡಕ್ಕೆ ಅತಿ ಹೆಚ್ಚಿನ ಧಾರ್ಮಿಕ ಮಹತ್ವವನ್ನು ನೀಡಲಾಗಿದೆ. ದ್ರಾಕ್ಷಿ, ಬಳ್ಳಿ, ಮೆಂತ್ಯ, ಬಳ್ಳಿ, ತೊಂಡೆ ಬಳ್ಳಿ, ಬಟಗಡ್ಲಿ ಬಳ್ಳಿ, ಚೆನಂಗಿ ಬಳ್ಳಿ, ತೆಂಗಿನ ಹೂವಿನ ಪಟ್ಟಿ ಗುಂಡಾಳು ಮತ್ತು ಗೋಡಂಬಿ ಪಟ್ಟಿಗಳನ್ನು ಯಾವುದೇ ಬಟ್ಟೆಗಳಿಗೆ ಅಂಚು ಬಾರ್ಡರ್‌ಹಾಕಲು ಸಹ ಬಳಸುತ್ತಾರೆ. ಹೂವುಗಳಲ್ಲಿ ಕಮಲ ಹೂವಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ. ಈ ಹೂವು ಲಕ್ಷ್ಮಿ ದೇವಿಯ ಪ್ರತೀಕವೆಂದೇ ನಂಬುತ್ತಾರೆ. ಧಾರ್ಮಿಕತೆ ಹಾಗೂ ಮಂದಿರಗಳ ಪ್ರಭಾವದಿಂದ ದೇವಸ್ಥಾನದ ಗೋಪುರಗಳು, ರಥಗಳು, ತೇರು, ಪಲ್ಲಕ್ಕಿ, ದೇವ ದೇವತೆಗಳು ದೀಪಸ್ತಂಭ, ಶಿವಲಿಂಗ, ಶಿವನ ಬಾಸಿಂಗ ನಂದಿ, ಮನುಷ್ಯಾಕೃತಿ, ಸ್ವಸ್ತಿಕ ಹನುಮಂತ, ಸೂರ್ಯಶಂಖ, ರಾಮನ ತೊಟ್ಟಿಲು, ಕಾಳಿಂಗಕೊಳ,ಅಷ್ಟಕೊಳ, ರಾಮನ ಅಳಿಲು ಇತ್ಯಾದಿ ನಕ್ಷೆಗಳನ್ನು ಬಿಡಿಸುತ್ತಾರೆ. ಪಕ್ಷಿಗಳಲ್ಲಿ ನವಿಲು ಗುಬ್ಬಿ, ಪಾರಿವಾಳ, ಹಂಸ ಇತ್ಯಾದಿಗಳನ್ನು ಬಿಡಿಸುತ್ತಾರೆ. ಧಾರ್ಮಿಕ ಜಾತ್ರೆ ಉತ್ಸವಗಳಲ್ಲಿ ಇವುಗಳನ್ನು ಈಗಲೂ ಬಳಸುವ ರೂಡಿಯಲ್ಲಿದೆ. ಈ ಕಸೂತಿಯಲ್ಲಿ ಬಿಡಿಸಿದ ಅಂಬಾರಿ ಆನೆಯ ಠೀವಿ ಎಂಥವರನ್ನೂ ಮಂತ್ರ ಮುಗ್ಧರನ್ನಾಗಿ ಮಾಡುವುದು.

### ನೂಲಿನ ಬಣ್ಣ ಮತ್ತು ವರ್ಣ ಸಂಯೋಜನೆ

ಬಣ್ಣದ ನೂಲು ಹಾಗೂ ಕಸೂತಿ ಬಿಡಸುವ ಬಟ್ಟೆಯನ್ನು ಆಯ್ದುಕೊಳ್ಳುವಲ್ಲಿ ಎರಡು ಅಂಶಗಳನ್ನು ಗ್ರಾಮೀಣ ಮಹಿಳೆಯರು ಗಣನೀಯವಾಗಿ ಗಮನಿಸಿದ್ದಾರೆ. ಬಿಡಿಸಿದ ಕಸೂತಿಯು ಬಟ್ಟೆಯ ಮೇಲೆ

---

೨೧. ಡಾ.ಎಸ್.ಸಿ.ಪಾಟೀಲರ, ಕರ್ನಾಟಕದ ಜನಪದ ಚಿತ್ರಕಲೆ,

ಶಾಶ್ವತವಾಗಿ ಉಳಿಯಬೇಕು ಹಾಗೂ ಬಟ್ಟೆಯ ಮೇಲೆ ಬಿಡಿಸಿದ ಕಸೂತಿ ಎದ್ದು ಕಾಣುವಂತಿರಲು ಗಾಢ ದಟ್ಟ ಬಣ್ಣಗಳ ನೂಲನ್ನೇ ಆಯ್ದುಕೊಳ್ಳುತ್ತಾರೆ.

ಕಸೂತಿಯನ್ನು ಹಸಿರು ಕೆಂಪು, ಕೇಸರಿ, ಜಾಂಬಳಿ, ಹಳದಿ, ಬಿಳಿ, ಕೆಂಪು, ನೀಲಿ, ಹಳದಿ, ಕೆಂಪು, ಬಿಳಿ, ಹಸಿರು, ಹಳದಿ, ಗುಲಾಬಿ ಜಾಂಬಳಿ, ಹಾಗೂ ನೀಲಿ ಕೇಸರಿ ಬಣ್ಣದ ನೂಲುಗಳು ಹೊಂದಾಣಿಕೆಯಾಗುವಂತೆ ನಕ್ಷೆಗಳನ್ನು ವರ್ಣರಂಜಿತವಾಗಿ ಆಕರ್ಷಕ ವಿನ್ಯಾಸಗಳಲ್ಲಿ ಬಿಡಿಸುತ್ತಾರೆ. ಈ ಮೇಲೆ ಹೇಳಿದ ನೂಲಿನ ವರ್ಣ ಸಂಯೋಜನೆಯನ್ನು ಕುರಿತು ಅವಲೋಕಿಸಿದಾಗ, ಗ್ರಾಮೀಣ ಮಹಿಳೆಯನ್ನು ಕುರಿತು ಅವಲೋಕಿಸಿದಾಗ, ಗ್ರಾಮೀಣ ಮಹಿಳೆಯಲ್ಲಿರುವ ಬಣ್ಣದ ಅಭಿರುಚಿ ಹಾಗೂ ಕಲಾತ್ಮಕವಾಗಿ ಬಣ್ಣಗಳ ಹೊಂದಾಣಿಕೆ ಮಾಡಿ ಬಿಡಿಸುವ ಕಸೂತಿಯ ಅಭಿರುಚಿಯು ನಿಜವಾಗಿಯೂ ಪ್ರಶಂಸನೀಯವಾದುದು. ಕಸೂತಿ ಬಿಡಿಸಿದ ಇಲಕಲ್ ಸೀರೆಗಳನ್ನು ಉಡಲು ಪ್ರತಿಯೊಬ್ಬ ಗ್ರಾಮೀಣ ಮಹಿಳೆಯೂ ಹೆಮ್ಮೆ ಪಡುತ್ತಾಳೆ. ಮದುವೆ, ಮುಂಜಿ, ಹಬ್ಬ ಹರಿದಿನಗಳಲ್ಲಿ ಹಾಗೂ ಇತರ ಸಮಾರಂಭಗಳಲ್ಲಿ ಕಸೂತಿ ಸೀರೆ ಉಟ್ಟು ಅಲ್ಲಿ ಕಲೆತ ತನ್ನ ಗೆಳತಿಯರು, ತಮ್ಮ ಕಲೆಯನ್ನು ಹಾಡಿ ಹೊಗಳಿದಾಗಲೇ ತಮ್ಮ ಕಲಾ ಸಾಧನೆಯು ಸಾರ್ಥಕವಾಗುವುದೆಂಬ ಅವರ ನಂಬಿಕೆ, ನಿಜಕ್ಕೂ ತಳ್ಳಿಹಾಕದ ವಿಷಯವಾಗಿದೆ.

### ೩.೨.೪. ಕಸೂತಿ ನಕ್ಷೆಗಾಗಿ ಬಳಸುವ ಬಟ್ಟೆಯ ಪ್ರಕಾರಗಳು

ಗ್ರಾಮೀಣ ಮಹಿಳೆಯರು ದಿನನಿತ್ಯವು ಧರಿಸುವ ನೂಲಿನ ಸೆರಗಿನ ಅಂಚಿಗೆ, ಒಂದಿಂಚು ಅಗಲದ ಗುಬ್ಬಿಯ ಬಾರ್ಡರ್ ಹಳದಿ ಬಿಳಿ ಬಣ್ಣದಲ್ಲಿ ಕಸೂತಿ ಬಿಡಿಸುವುದನ್ನು ಕಾಣುತ್ತೇವೆ. ಇನ್ನೂ ಹಬ್ಬ ಹರಿದಿನಗಳಲ್ಲಿ ಹಾಗೂ ಸಮಾರಂಭಗಳಿಗೆ ಉಡುವ ಇಳಕಲ್ ರೇಷ್ಮೆ ಸೀರೆಗಳಿಗೆ ರೇಷ್ಮೆ ಕುಪ್ಪಸಗಳಿಗೆ ಎಲ್ಲ ಪ್ರಕಾರದ ಕಸೂತಿ ನಕ್ಷೆಗಳನ್ನು ಬಿಡಿಸುತ್ತಾರೆ. ಹೊದೆಯುವ ಕಂಬಳಿಗಳ ಅಂಚಿನಲ್ಲಿ ತೆಂಗಿನ ಹೂವಿನ ಪಟ್ಟಿ, ಜೋಡು ಮೆಂತ್ಯ ಪಟ್ಟಿ ಗುಂಡಾಳು ಪಟ್ಟಿ ಅಥವಾ ಗೋಡಂಬಿ ಪಟ್ಟಿಯ ಬಾರ್ಡರ್ ಬಿಡಿಸಿರುತ್ತಾರೆ.

ಪ್ರತಿ ಹತ್ತರದಲ್ಲಿ ಒಂದು ಚಿಕ್ಕ ಮಗುವು ಕಸೂತಿ ಬಿಡಿಸಿದ ಕುಂಚಿಗೆಯನ್ನು ಕಟ್ಟಿಕೊಂಡಿರುವುದನ್ನು ಗ್ರಾಮೀಣ ಪ್ರದೇಶಗಳಲ್ಲಿ ಕಾಣುತ್ತೇವೆ. ಲಂಗ ಜಂಪರು, ಇಲ್‌ಕಲ್ ಸೀರೆ, ಟೇಬಲ್, ಕವರ ಚೀಲಗಳು, ಕಿಟಕಿ ಬಾಗಿಲು ಪರದೆಗಳಿಗೂ ಕಸೂತಿ ಬಿಡಿಸುವುದು, ಈಗಲೂ ರೂಢಿಯಲ್ಲಿದೆ. ಈ ಕಸೂತಿ ನಕ್ಷೆಗಳನ್ನು ಮ್ಯಾಟಿ ಬಟ್ಟೆ, ಸಾದಾ ಬಟ್ಟೆ, ರೇಷ್ಮೆ ಸೀರೆಗಳು, ಖಣಬಟ್ಟೆ, ಸಾದಾವಾಯಿಲ್ ಸೀರೆಗಳು, ಕಂಬಳಿ ಇತ್ಯಾದಿಗಳಲ್ಲಿ ಬಿಡಿಸುತ್ತಾರೆ. ಮಹಿಳೆಯರು ಕಸೂತಿಯನ್ನು ತಮ್ಮ ಮಧ್ಯಾಹ್ನದ ಬಿಡುವಿನ ವೇಳೆಯಲ್ಲಿ ಮಾತ್ರ ಹಾಕುವ ಹವ್ಯಾಸವಿಟ್ಟುಕೊಂಡಿರುತ್ತಾರೆ. ಒಂದು ಸೀರೆಯ ಸೆರಗಿನ ಅಂಚು ಹಾಕಲು ಸುಮಾರು ಎರಡರಿಂದ ನಾಲ್ಕು ತಿಂಗಳು ಬೇಕಾಗುತ್ತದೆ. ಹೆಚ್ಚು ನುರಿತವರು ಒಂದೇ ತಿಂಗಳಲ್ಲಿ ಬಿಡಿಸುವರು. ಕರ್ನಾಟಕದಲ್ಲಿ ಕೆಲವು ಗ್ರಾಮೀಣ ಮಹಿಳೆಯರು ಕಸೂತಿ ಬಿಡಿಸುವುದನ್ನು ಉಪ ಕಸುಬನ್ನಾಗಿ ಮಾಡುತ್ತಿದ್ದಾರೆ. ಹೆಚ್ಚಾಗಿ ಎಲ್ಲ ಗ್ರಾಮೀಣ ಮಹಿಳೆಯರು ಮಾರ್ಚ್‌ನಿಂದ ಜೂನ್ ತಿಂಗಳವರೆಗೆ ಹೊಲದ ಕೆಲಸದಿಂದ ಬಿಡುವಿರುವ, ಈ ಕಾಲಾವಧಿಯಲ್ಲಿ ಕಸೂತಿ ಕೆಲಸವನ್ನು ಪೂರ್ಣಗೊಳಿಸುತ್ತಾರೆ.

ಕರ್ನಾಟಕ ಕಸೂತಿಯೂ ಕ್ರಮೇಣವಾಗಿ ಎಲ್ಲೋ ಸ್ಥಾಯಿಯಾಗಿ ಫ್ಯಾಷನ್ ಲೋಕದಲ್ಲಿ ನಿತ್ಯ ನೂತನ ಎನಿಸಿಕೊಂಡಿದೆ. ಕಸೂತಿಯು ಸದಾ ನೂಲು ಇಲಕಲ್ ರೇಷ್ಮೆ ಸೀರೆ, ವಾಯಿಲ್, ಅರ್ಗ್ಗಂಡಿ, ಕುರ್ತಾ,

ಚೂಡಿದಾರ, ಕಮೀಜ್, ಲಂಗ ದಾವಣಿ, ಶಾಲು, ಪರದೆಗಳು, ಗೋಡೆ ಅಲಂಕಾರದ ಬಟ್ಟೆಗಳಲ್ಲೂ ಬಿಡಿಸುತ್ತಾರೆ. ಕರ್ನಾಟಕ ನವೀನ ವಿನ್ಯಾಸಗಳಲ್ಲಿ ವರ್ಣರಂಜಿತ ನೂಲಗಳಿಂದ ಬಿಡಿಸಿದ ಕಸೂತಿಯ ಸೀರೆಗಳು ಮೂಲ ಬೆಲೆಗಿಂತ ಮೂರು ಅಥವಾ ನಾಲ್ಕು ಪಟ್ಟು ಹೆಚ್ಚಾಗಿದ್ದು, ಅತಿ ಧಾರಾಳವಾಗಿ ಮಾರಾಟವಾಗುತ್ತಿವೆ.

### ೩.೨.೫. ಕಸೂತಿಕಲೆಯ ಬಗೆಗೆ ನಂಬಿಕೆಗಳು

ಮನುಷ್ಯ ಪ್ರಕೃತಿಯಿಂದ ಅನೇಕ ಪ್ರೇರಣೆಗಳನ್ನು ಪಡೆದುಕೊಂಡ ಅದರಲ್ಲಿ ಕಸೂತಿಹಾಕುವ ಕಲೆ ಕೂಡ ಒಂದು ಎಂದು ಕೆಲವರ ಅಭಿಪ್ರಾಯ ಕಾಲಾನುಕಾಲದಿಂದ ಜನರ ಬದುಕು ವಿಕಾಸವಾದ್ದುದ್ದೇ ಪ್ರಕೃತಿಯಿಂದ ಜಗತ್ತಿನ ಎಲ್ಲ ಬುಡಕಟ್ಟು ಜನಾಂಗವೂ ಒಂದೊಂದು ಪ್ರಾಣಿಯನ್ನು ತಮ ಕುಲದೇವತೆಯಂದು ಹೆಸರಿಸಿ ಅದನ್ನು ಬೇಟೆಯಾಡದಂತೆ ಅದರ ಮಾಂಸ ಉಪಯೋಗಿಸದಂತೆ ರಕ್ಷಿಸುವ ನಿಷೇಧ ರೂಪದ ಆಚರಣೆಯನ್ನು ಇಂದಿಗೂ ಕಾಣುತ್ತೇವೆ.[೨೨]

ವೃಕ್ಷಾರಾಧನೆಯೂ ಕೂಡ ಪ್ರಾಚೀನ ಸಂಗತಿಯೇ ತುಳಸಿ ಹಬ್ಬದಿಂದ ಹಿಡಿದು ಇನ್ನಿತರ ಮುಖ್ಯ ಹಬ್ಬಗಳೆಲ್ಲ ಒಟ್ಟು ಪ್ರಕೃತಿಯಾರಾಧನೆಯೇ ಆಗಿದ್ದು, ಅವು ಅನಾದಿ ಕಾಲದಿಂದಲೂ ಮನುಷ್ಯನ ಮತ್ತು ಪ್ರಕೃತಿಯ ಗಾಢ ಸಂಬಂಧವನ್ನು ಸಾರಿ ಹೇಳುತ್ತವೆ.

ತಮ್ಮ ದೈನಂದಿನ ಬದುಕು ಸೂತ್ರವಾಗಿ ಸಾಗುವ ಸಲುವಾಗಿ ಪ್ರಾಚೀನ ಮಾನವ ನಿಸರ್ಗದ ಮೊರೆಹೊಕ್ಕು ನಿಸರ್ಗದ ಮೊರೆಹೊಕ್ಕು ಅಗೋಚರ ಶಕ್ತಿಗಳ ಆರಾಧನೆಗೆ ತೊಡಗಿ, ಆರಾಧಿಸಲು ಚಿತ್ರ ರಚನೆ ಹಾಗೂ ಇತರ ಕುಶಲಕಲೆಗೆ ಕೈ ಹಾಕಿರುವ ಸಾಧ್ಯತೆಗಳಿವೆ. ಉತ್ತರ ಕರ್ನಾಟಕದ ಕೆಲವು ಗವಿಗಳಲ್ಲಿ ಚಿತ್ರರಚಿಸುವುದನ್ನು ನೋಡಿದರೆ, ಅವು ತಾಂತ್ರಿಕ ಹಿನ್ನೆಲೆಯಲ್ಲಿ ರಚಿಸಲ್ಪಡುವ ತಮ್ಮ ಉದ್ದೇಶ ಈಡೇರಿಸಿಕೊಳ್ಳಲು ಆರಾಧನೆ ಮಾಡಿರಬೇಕು. ಈಗಲೂ ಮಾಟ, ಮಂತ್ರ, ಭಾನಾಮತಿ ತಾಂತ್ರಿಕರು ಗೌಪ್ಯ ಸ್ಥಳಗಳಲ್ಲಿ ಸಾಧನೆ, ಆರಾಧನೆ ಮಾಡುವುದನ್ನು ಕೇಳಿರುತ್ತೇವೆ. ಹೀಗೆ ತಾಂತ್ರಿಕ ಸ್ಥಳಗಳಲ್ಲಿ ಮನೆಯ ಮುಂಭಾಗದಲ್ಲಿ ಇಡುವ ರಂಗವಲ್ಲಿ, ಮದರಂಗಿ, ಹಚ್ಚೆ ಹಾಗೂ ಕಸೂತಿ ನಕ್ಷೆಗಳಿಗೂ ಹೆಚ್ಚಿನ ಸಾಮ್ಯವು ಕಂಡು ಬರುತ್ತದೆ. ಸೌಂದರ್ಯ ಪ್ರಜ್ಞೆ ಹೆಚ್ಚಿದಂತೆ, ಭಾವನೆಗಳನ್ನು ಗುರುತಿಸಲು ಚಿತ್ರದ ರಚನೆಗಳು ನಾಜೂಕಾಗುತ್ತ ಹೋಗಿರಬೇಕು. ಚೈತನ್ಯ ತುಂಬಿರುವ ಚಲನೆ ಹಾರಾಟ, ಓಟ, ಹೋರಾಟ, ನೃತ್ಯ ಇಂಥ ನೈಜದೃಶ್ಯಗಳು ಚೆಲುವಿನ ಅವರ ಕಲ್ಪನೆಯನ್ನು ಅಭಿವ್ಯಕ್ತಗೊಳಿಸುತ್ತದೆ. ಜನಪದರ ನಂಬಿಕೆಗಳಿಗೆ ಅವರ ಮನಸ್ಸಿನ ನಿಯಂತ್ರಣಾಂಶಗಳಾಗಿ ಜನಪದ ಸಂಪ್ರದಾಯಗಳ ಬಗ್ಗೆ ಅವರಲ್ಲಿ ಭಯ ಭಕ್ತಿ ಅಚಲ ಶ್ರದ್ಧೆಯನ್ನು ಮೂಡಿಸುತ್ತವೆ. ಜನಪದ ಕಲೆಗಳು ಜನಾಂಗದಿಂದ ಜನಾಂಗಕ್ಕೆಕೊಡುಗೆಗಳ ರೂಪದಲ್ಲಿ ಮುಂದುವರೆಯುತ್ತಾ ಬಂದಿವೆ. ಈ ಜನಪದ ಕಲೆ ಅಲಂಕಾರ, ಧರ್ಮ, ಶಿಲ್ಪಕಲೆ, ದೇವತಾರಾಧನೆ, ಸಂಪ್ರದಾಯ ಹಾಗೂ ಮೂಢನಂಬಿಕೆಗಳ ಅಡಿಯಲ್ಲಿ ಬೆಳೆದು ಬಂತೆಂದು ಇನ್ನೂ ಕೆಲವರ ಅನಿಸಿಕೆ.

ಬಣ್ಣದ ಖಯಾಲೆಯಾಗಿ, ಭಕ್ತಿ ಶ್ರದ್ಧೆಯ ದ್ಯೋತಕವಾಗಿ ಚಿತ್ರ ವಿನ್ಯಾಸದ ಕಲೆಯಾಗಿ, ಸೌಭಾಗ್ಯದ ಕುರುಹಾಗಿ ಜನಪದರಲ್ಲಿ ಪ್ರಾಚೀನ ಕಾಲದಿಂದ ಬೆಳೆದು ಉಳಿದುಕೊಂಡ ಕಸೂತಿ ಕಲೆ,ನಗರ ನಾಗರಿಕತೆಯ ಕೃತಕ ವ್ಯವಸ್ಥೆಯಿಂದಾಗಿ ಜನಪದರಿಂದ ಮರೆಯಾಗುತ್ತ ನಡೆದಿವೆ.

* * *

---

೨೨. ಡಾ.ಎಸ್.ಸಿ.ಪಾಟೀಲ, ಕರಕುಶಲಕಲೆಗಳು, ಕಸೂತಿ ವಿನ್ಯಾಸಗಳು, ಪುಟ-೯೦



ತೊಗಲುಗೊಂಬೆ ಚಿತ್ರಕಲೆ



ಪ್ರದರ್ಶನ ಸಂದರ್ಭದಲ್ಲಿ ವಾದ್ಯ ಬಾರಿಸುವದು

ಬಿದರಿಕಲೆಯ ನೃತ್ಯಗಾರ್ತಿಯ ಚಿತ್ರ





ರಾಧೆ ಮತ್ತು ಕೃಷ್ಣನ ಚಿತ್ರ



ಮೆಹಂದಿ ಕಲೆ

ಕೌದಿಯ ಚಿತ್ರಕಲೆ







ಶಾಂತವೀರ ವೇಶಗಾರ



ಲಂಬಾಣಿ ಮಹಿಳೆ



ಕಸುತಿ ಚಿತ್ರಕಲೆ



ಲಂಬಾಣಿ ಮಹಿಳೆ

೧. ಅಷ್ಟುರಿನ ಸಮಾಧಿಯ ಕಟ್ಟಡದ ಭಿತ್ತಿ ಚಿತ್ರಕಲೆ

೨. ಬೀದರಿನ ರಂಗೀನ ಮಹಲ್‌ನ ಭಿತ್ತಿಚಿತ್ರಕಲೆ

ಈ ರೀತಿಯಾಗಿ ವಿಂಗಡಣೆ ಮಾಡಿಕೊಂಡು ಅದರಲ್ಲಿರುವಂತಹ ವಸ್ತು ವಿಷಯದ ಬಗ್ಗೆ ಮುಂದೆ ಚರ್ಚಿಸಲಾಗಿದೆ.

ಭಿತ್ತಿಚಿತ್ರಕಲೆ

೪. ೧. ಅಷ್ಟುರಿನ ಸಮಾಧಿಯ ಕಟ್ಟಡದ ಭಿತ್ತಿಚಿತ್ರಕಲೆ

ಒಂದನೆಯ ಶಹಾಬುದ್ದೀನ್‌ಅಹಮದನ ಸಮಾಧಿಯ ಹೊರಗೋಡೆಗಳಲ್ಲಿ ಅತ್ಯುತ್ತಮವಾದ ಅಲಂಕಾರಿಕ ಲಿಪಿ ಪಟ್ಟಿಕೆಯ ಸಾಲುಗಳಿವೆ. ಅವು ಪ್ಲಾಸ್ಟರಿನ ಬಿಲ್ಲೆಗಳಿಗೆ ಸೀಮಿತವಾಗಿದೆ. ಗೋಪುರದ ಒಳಗೆ ಬಣ್ಣದ ಬಿಲ್ಲೆಗಳನ್ನು ಉಪಯೋಗಿಸಿದ್ದಾರೆ. ಅಲ್ಲಾವುದ್ದಿನ ಮಹ್ಮದನ ಸಮಾಧಿ ಕಟ್ಟಡದಲ್ಲಿ ಚದರು ಬಿಲ್ಲೆಯ ಕೆಲಸದ ಕುರುಹುಗಳಿವೆ. ಅವು ಪರ್ಶಿಯನ್ ಪ್ರಭಾವವನ್ನು ತೋರಿಸುತ್ತದೆ.

ಅಲಂಕಾರಿಕ ಬರಹವು ಶಿಲ್ಪಕಲೆಯ ಇಸ್ಲಾಮಿಕ್ ಚಿತ್ರಕಲಾ ಶೈಲಿಯ ಒಂದು ಸುಂದರವಾದ ಅಂಗವಾಗಿವೆ. ಬಹಮನಿ ಬರೀದ ಶಾಹಿ ಆದಿಲ್ ಶಾಹಿ ಹಾಗೂ ಟಿಪ್ಪು ಸುಲ್ತಾನರ ಕಾಲದಲ್ಲಿ ಸುಂದರ ಅಲಂಕಾರಿಕ ವಿನ್ಯಾಸದ ಶಾಸನಗಳು ಬಹಳಷ್ಟು ದೊರೆತಿವೆ. ಅವು ರೇಖಾ ಚಿತ್ರಕಲೆಯ ಮಾದರಿಯಾಗಿವೆ.

ಸಂಪ್ರದಾಯನಿಷ್ಟರಾದ ಮುಸ್ಲಿಂಮರು ಮಾನವ ರೂಪಗಳನ್ನು ಚಿತ್ರಿಸುವುದಿಲ್ಲ. ಆದ್ದರಿಂದ ಅಲಂಕಾರ ಬರಹದ ಕಲೆ ವಿವಿಧ ಶೈಲಿಗಳಲ್ಲಿ ಬಹು ಸುಂದರವಾಗಿ ಬೆಳೆದುಕೊಂಡು ಬಂದಿದೆ. ಈ ದೃಷ್ಟಿಯಲ್ಲಿ ಪರ್ಷಿಯನ್ ಅಲಂಕಾರಾಕ್ಷರ ಬರಹ ಪ್ರಸಿದ್ಧವಾಗಿತ್ತು. ಅಲಂಕಾರಕ್ಷರ ಬರಹವೆಂದರೆ ಸುಂದರವಾದ ಕೈಬರಹ ಅದು ವಿವಿಧ ವಿನ್ಯಾಸ ಮತ್ತು ಶೈಲಿಗಳಿಂದ ಕಲಾತ್ಮಕವಾಗಿತ್ತು. ತುಲುಪ್ತ, ನಸ್ತಾಲಿಕ್, ಶಿಕಸ್ತಾ, ಸೂಲೂಸ್, ಖತ್‌ಎಜುಲ್ಪಿ, ಹುಲಿಗೆರೆಗಳು, ಕುಫಿಕ್, ನಸ್ಪ ತುಗ್ರಹ ಮುಂತಾದ ವಿಭಿನ್ನ ಪ್ರಕಾರದ ಶೈಲಿಯಲ್ಲಿ ಕಾಣಬಹುದು.[೧] ಬಲದಿಂದ ಎಡಕ್ಕೆ ಬರೆಯುವ ಫಾರಸಿ ಅಕ್ಷರ ಮಾಲೆಯು ಸುಂದರ ವಿನ್ಯಾಸಕ್ಕೆ ಹೇಳಿ ಮಾಡಿಸಿದಂಥದ್ದು, ನದಿಯಂತೆ ಉಗಮದಲ್ಲಿ ಕಿರಿದಾಗಿಸಿ ಆ ಮೇಲೆ ಹಿಗ್ಗಿಸುತ್ತ ಹೋಗಬಹುದು. ದುಂಡು ದುಂಡಾಗಿ ಗಂಟುಗಳನ್ನು ಹಣೆಯಬಹುದು. ಹತ್ತಾರು ಶಬ್ದಗಳನ್ನು ಒತ್ತಾಗಿ ಬರೆಯಬಹುದು.

ಅಕ್ಷರಗಳ ಆಕರ್ಷಣೆಯನ್ನು ಹೆಚ್ಚಿಸಲು ಬೆಳ್ಳಿಬಂಗಾರದ ಗಿಲೀಟನ್ನು ಉಪಯೋಗಿಸುತ್ತಿದ್ದರು. ಈ ಕಲೆಯನ್ನು ಕರಗತ ಮಾಡಿಕೊಂಡವರಿಗೆ ಖಾಸನ್ ವೀಸ್ ಖಾಸನಿ ಎಂದು ಗುರುತಿಸಿ ತುಂಬ ಗೌರವದಿಂದ ನೋಡುತ್ತಿದ್ದರು. ಬಹಮನಿ ಆದಿಲ್‌ಶಾಹಿ, ಬರೀದ ಶಾಹಿ, ಹೈದರ ಟಿಪ್ಪು, ಸವಣೂರ ನವಾಬರ ಕಾಲದಲ್ಲಿ ಕೋಟೆ ಕೊತ್ತಲುಗಳು ಸ್ಮಾರಕಗಳು ಮಿನಾರಗಳು ಸಮಾದಿ ಕಟ್ಟಡಗಳ ಮೇಲೆ ಅಲ್ಲದೆ ಬೆಳ್ಳಿ, ಬಂಗಾರ, ಹಿತ್ತಾಳೆ ಪಾತ್ರೆ, ಮತ್ತು ನಾಣ್ಯಗಳು ಸುಂದರ ಅಕ್ಷರ ವಿನ್ಯಾಸದಿಂದ ಕೂಡಿರುತ್ತಿದ್ದವು. ಶಿಕ್ಷಣದಲ್ಲಿ ಕಾಗದದ ಬಳಕೆ ರೂಢಿಯಲ್ಲಿ ಬಂದನಂತರ ಸುಂದರ ಕೈ ಬರಹದ ಗ್ರಂಥಗಳು ಆತ್ಮಚರಿತ್ರೆ ಕವಿತೆ, ಚರಿತ್ರೆ ಗ್ರಂಥಗಳು ರಚನೆಯಾದವು.[೨]

---

೧. ಡಾ.ವಜೀರ ಭಾಸಾ ಬಾಗಾಯತ್ : ಕರ್ನಾಟಕದ ಮುಸ್ಲಿಂ ಅರಸರ ಕಲಾದ ಚಿತ್ರಕಲೆ, ಪುಟ

೨. ಬೀದರ ಜಿಲ್ಲೆಯ ಗೆಜೆಟಿಯರ್

ಭಾರತವನ್ನು ಆಳಿದ ಮುಸ್ಲಿಂ ಅರಸರಲ್ಲಿ ಔರಂಗಜೇಬನು ಸುಂದರ ಅಕ್ಷರ ವಿನ್ಯಾಸದಲ್ಲಿ ಅತ್ಯಂತ ಶ್ರೇಷ್ಠ ಅರಸನಾಗಿದ್ದನು. ಬಹಮನಿ ಅರಸರಲ್ಲಿ ಮಹಮ್ಮದಶಹನು ಪ್ರಸಿದ್ದ ಅಲಂಕಾರಿಕ ಅಕ್ಷರ ವಿನ್ಯಾಸಕಾರನಾಗಿದ್ದನು ಅವನು ಬೀದರಿನ ಶರ್ಜಾ ದರ್ವಾಜ್ ಕಟ್ಟಡ, ಪ್ಯಾರಾಡಿಟ್‌ದ ಕೆಳಗೆ ಒಂದು ಶಾಸನ ರಚಿಸಿದ್ದಾರೆ. ಟಿಪ್ಪುವೂ ಸಹ ಅಲಂಕಾರಿಕ ಬರಹದ ಶ್ರೇಷ್ಠ ವಿನ್ಯಾಸಕಾರನಾಗಿದ್ದನು.

ಸುಂದರ ಅಲಂಕಾರಿಕ ವಿನ್ಯಾಸ ಬರಹವು ಖಿಲ್ಜಿಯರ ಆಕ್ರಮಣದ ಮುಂಚೆಯೇ ಇಸ್ಲಾಮ್ ಧರ್ಮದ ಸಂತರು ನೆಲೆಸಿದರು. ಆದ್ದರಿಂದ ಖಚಿತವಾಗಿ ಯಾವಾಗ ಮುಸ್ಲಿಂ ಪ್ರವಾಸಿಗರು ಪೂರ್ವ ಮತ್ತು ಪಶ್ಚಿಮ ಕರಾವಳಿಯ ಪ್ರದೇಶಗಳಲ್ಲಿ ಬಂದು ನೆಲೆಸಿದ್ದರ ಬಗ್ಗೆ ತಿಳಿಯುವುದಿಲ್ಲ. ಖುಫಿಕ್ ಲಿಪಿಯು ಖಿಲ್ಜಿಯರ ಪ್ರಮಾಣದ ಮುಂಚೆಯೇ ದಖ್ಖನಿನಲ್ಲಿ ಬಳಕೆಯಲ್ಲಿತ್ತು. ದಖನ್‌ನಲ್ಲಿ ಮುಸ್ಲಿಂ ಅರಸರು ಬರುವ ಮುಂಚೆಯೇ ಇಸ್ಲಾಂ ಧರ್ಮದ ಸಂತರು ನೆಲೆಸಿದ್ದರು. ಆದ್ದರಿಂದ ಖಚಿತವಾಗಿ ಯಾವಾಗ ಮುಸ್ಲಿಂ ಪ್ರವಾಸಿಗರು ಪೂರ್ವ ಮತ್ತು ಪಶ್ಚಿಮ ಕರಾವಳಿಯ ಪ್ರದೇಶಗಳಲ್ಲಿ ಬಂದು ನೆಲೆಸಿದ್ದರ ಬಗ್ಗೆ ತಿಳಿಯುವುದಿಲ್ಲ. ಖುಫಿಕ್ ಲಿಪಿಯು ಖಿಲ್ಜಿಯ ಅರಸರ ಆಡಳಿತಕ್ಕಿಂತ ಮುಂಚಿತವಾಗಿಯೇ ನಾಣ್ಯಗಳ ಮೇಲೆ ಬಳಕೆಯಲ್ಲಿತ್ತು. ಅದರ ಮೇಲೆ ಅಬ್ಬಾಸಿದ್ ಮತ್ತು ಉಮ್ಮಯ್ಯಾದ್ ಖಲೀಪರ್ ಹೆಸರುಗಳು ಇರುವುದನ್ನು ಗಮನಿಸುತ್ತೇವೆ.

ಕ್ರಿ.ಶ.೧೩೧೪ರಲ್ಲಿ ಖಿಲ್ಜಿ ಅರಸರು ದಖನಿನಲ್ಲಿ ಖುಫ್ತ ಮತ್ತು ತುಲ್ತ್ ಶೈಲಿಯ ಬರಹಗಳಲ್ಲಿ ನಾಣ್ಯಗಳನ್ನು ಮುದ್ರಿಸಿದರು.ಮಹ್ಮಮದ್‌ಬಿನ್ ತುಘಲಕನು ರಾಜಧಾನಿಯನ್ನು ದೌಲತಾಬಾದಕ್ಕೆ ವರ್ಗಾಯಿಸಿದಾಗ ಉತ್ತರ ಭಾರತದಿಂದ ಅನೇಕ ಕಲಾಕಾರರನ್ನು ದಖನಿಗೆ ಕರೆತಂದನು ಮಧುರೆಯ ಸುಲ್ತಾನರು ಹೊರಡಿಸಿದ ನಾಣ್ಯಗಳ ಮೇಲೆ ಸುಂದರ ಅಲಂಕಾರಿಕ ಬರಹಗಳಿವೆ.

ಬರೀದ ಶಾಹಿ ಅರಸರ ಕಾಲದ ಅಲಂಕಾರಿಕ ಬರಹ ಬರೀದ ಅರಸರು ಬಹಮನಿ ಅರಸರ ಕಲೆಯನ್ನೇ ಮುಂದುವರೆಸಿಕೊಂಡು ಬಂದರೂ ತಮ್ಮದೇ ಆದ ಸ್ವಂತ ಶೈಲಿಯನ್ನು ಮುಂದುವರೆಸಿದರು. ಬಹಮನಿ ಅರಸರ ಕಾಲದ ಹಾಗೂ ದಖ್ಖನಿ ಇನ್ನಿತರ ರಾಜರ ಚಿತ್ರಕಲಾ ಶೈಲಿಯಿಂದ ಭಿನ್ನವಾಗಿ ಸ್ವತಂತ್ರ ಶೈಲಿಯನ್ನು ಅನುಸರಿಸಿದರು. ಅತ್ಯಂತ ಶ್ರೇಷ್ಠಮಟ್ಟದ ಅಲಂಕಾರಿಕ ಶೈಲಿಯನ್ನು ಸುಂದರವಾಗಿ ಕರಿಯ ಕಲ್ಲಿನಲ್ಲಿ ಕಣ್ಣಿಗೆ ಆಕರ್ಷಕವಾಗುವಂತೆ ಕೆತ್ತಿದ್ದಾರೆ. ಅದರಲ್ಲಿಯ ಒಂದು ಬರಹ ನಕ್ಷೆಯಲ್ಲಿಯೂ ಇನ್ನೊಂದು ನಸ್ತಲಿಖ್ ಶೈಲಿಯಲ್ಲಿಯೂ ಇದೆ.

ಬೀದರಿನ ಐದು ತೋಪುಗಳು, ಕೋಟೆಯ ಗೋಡೆಯ ಬುರುಜಿನ ಮೇಲಿವೆ. ಅವುಗಳ ಮೇಲೆ ಭಿನ್ನ ಭಿನ್ನ ಪ್ರಕಾರದ ಅಲಂಕಾರಿಕ ಬರಹವಿರುತ್ತವೆ. ಬರಹದ ಪತ್ರವನ್ನು ಮೊದಲು ತೋಪಿನಲ್ಲಿ ಆಳವಾಗಿ ಒಡೆದು ಸೇರಿಸಿದ್ದಾರೆ. ಅದನ್ನು ಹೊರಗೆ ತೆಗೆಯಲು ಪ್ರಯತ್ನ ಮಾಡಿದರೆ ಅದು ಸಾಧ್ಯವಾಗಿಲ್ಲ. ಅದು ಈಗಲಾದರು ಗಟ್ಟಿಯಾಗಿ ಉಳಿದಿದೆ.

ಬಿದರಿ ಕಲೆಯಲ್ಲಿ ಎರಡು ಬಣ್ಣಗಳು ಕಾಣುತ್ತೇವೆ. ಒಂದು ಕಪ್ಪು ಇನ್ನೊಂದು ಬಿಳಿಕಪ್ಪು ಮೇಲೆ ಮತ್ತು ಬೆಳ್ಳಿಯಿಂದ ತುಂಬಿದ ನಕ್ಷೆ ಬಿದರಿಕಲೆಯಲ್ಲಿ ನಕ್ಷೆಯನ್ನು ಪ್ರಮುಖವಾಗಿ ಜಾಮಿತಿಕ ಅಕಾರದಲ್ಲಿ

ವಿಭಜಿಸಲಾಗುತ್ತದೆ. ಬೀದರಿನ ರಂಗೀನ ಮಹಲಿನ ಭಿತ್ತಿ ಚಿತ್ರದ ಬಣ್ಣ ಅಮೃತ ಶಿಲೆಯಲ್ಲಿನ ಅಲಂಕಾರಿಕ ನಕ್ಷೆಗಳ ಬಳಕೆಯಂತೆಯೇ ಬಿದರಿಕೆಲಸದಲ್ಲಾಗಿದೆ. ಹೂದಾನಿಯಲ್ಲಿ ಬೆಳ್ಳಿಯ ಜ್ಯಾಮಿತಿಕ ಆಕಾರದ ನಕ್ಷೆಗಳನ್ನು ಬಿಡಿಸಲಾಗಿದೆ. ನಕ್ಷೆಯ ರಚನೆಯು ಪಾತ್ರೆಯ ಆಕಾರಕ್ಕನುಗುಣವಾಗಿ ರಚಿಸಲಾಗಿದೆ. ಇಂಗ್ಲೀಷ್ ಅಕ್ಷರದ ಫ್ಯಾನಲ್‌ಗಳಲ್ಲಿ ಪಾತ್ರೆಯ ಗೋಲಾಕಾರದ ಭಾಗದ ಮೇಲೆ ವಿಭಜನೆ ಮಾಡಲಾಗಿದೆ. ಮಧ್ಯದಲ್ಲಿ ಎಲೆ ಮತ್ತು ಹೂವಿನ ನಕ್ಷೆಗಳಿವೆ. ಸೂರ್ಯ ಕಾಂತಿಯ ಹೂವಿನ ನಕ್ಷೆಯಲ್ಲಿ ನೈಜತೆ ಇದೆ. ಮನಸ್ಸಿಗೆ ಆಹ್ಲಾದ ಉಂಟಾಗುತ್ತದೆ. ಪಾತ್ರೆಯ ನಾಲ್ಕು ಸಮಭಾಗಗಳಲ್ಲಿ ನಕ್ಷೆಪುನರಾವೃತ್ತಿಯಾಗುತ್ತದೆ. ಇದರಿಂದ ನಕ್ಷೆಗೆ ಲಯ ಮತ್ತು ಅಖಂಡತೆ ದೊರೆಯುತ್ತದೆ. ಹೂದಾನಿಯ ಕುತ್ತಿಗೆಯ ಮೇಲೆ ... ರೇಖೆಗಳಿವೆ. ಇವುಗಳ ಮೇಲಿನ ನಕ್ಷೆ ವಿಭಜನೆ ಔಮಿತಿಕ ಆಕಾರದಲ್ಲಿದೆ. ಕಾರ್ಪೆಟ್‌ಗಳಿಗೆ ಹೋಲುತ್ತದೆ. ಇಲ್ಲಿಯ ಎಲೆ ಮತ್ತು ಹೂವಿನಿಂದ ರಚಿತಗೊಂಡ ನಕ್ಷೆಯಲ್ಲಿ ಲಯ ಮತ್ತು ಅಖಂಡತೆಯನ್ನು ಕಾಣಬಹುದು.

### ಅಷ್ಟುರ್

ಬೀದರಿನ ಕೆಳಭಾಗದಲ್ಲಿ ಅಷ್ಟೂರ್ ಇದ್ದು ಅವು ಸಮಾಧಿಗಳ ಪ್ರದೇಶವಾಗಿದೆ. ಅಹಮ್ಮದ ಶಾಹವಲಿ ಬಹಮನಿಯ ಸಮಾಧಿಯು ಚೌಕಾಕಾರದಲ್ಲಿ ನಿರ್ಮಿಸಲ್ಪಟ್ಟಿದ್ದು ಭವ್ಯತೆಯ ಪ್ರತೀಕವಾಗಿದೆ. ಹೊರಭಾಗದಲ್ಲಿ ಶ್ವೇತಮಯವಾಗಿ ಕಾಣುವ ಇದರ ಒಳಾವರಣದಲ್ಲಿ ಸುಂದರ ವರ್ಣಚಿತ್ರಗಳಿವೆ. ಸ್ವಸ್ತಿಕ ಚಿಹ್ನೆಗಳನ್ನು ಅಲಂಕಾರಕ್ಕಾಗಿ ಬಳಸಿಕೊಳ್ಳಲಾಗಿದೆ. ಇನ್ನೊಂದು ಸಮಾಧಿಯಾದ ಅಲೀ ಬಾರೀದನ ಸಮಾಧಿಯು ೧೫೮೦ರಲ್ಲಿ ನಿರ್ಮಿಸಲ್ಪಟ್ಟಿದ್ದು, ಅದು ಸಹ ಅಲಂಕಾರಿಕ ವಿನ್ಯಾಸಗಳಿಂದ ರಚಿತಗೊಂಡಿದೆ. ಅಹ್ಮದಶಾಹನ ನೆನಪಿನಲ್ಲಿ ಉರುಸ್ ನಡೆಯುತ್ತದೆ. ಇದೇ ಆವರಣದಲ್ಲಿ ತನ್ನ ಮಗನಾದ ಅಲ್ಲಾವುದ್ದೀನನ ಸಮಾಧಿ ಕೂಡ ಇದೆ.

ಹುಮಾಯುನನ ಸಮಾಧಿಯ ಹತ್ತಿರ ಇನ್ನೂ ಹಲವು ಸಮಾಧಿಗಳಿವೆ. ಹುಮಾಯಾನನ ಪತ್ನಿಯಾದ ಮಲಿಕ್ ಎ ಜಹಾನ್ ಎರಡು ವರ್ಷ ರಾಜ್ಯವಾಳಿ ತನ್ನ ೧೦ ನೇಯ ವಯಸ್ಸಿನಲ್ಲಿಯೇ ಮೃತನಾದ ನಿಜಾಮ ಶಾಹನ ಸಮಾಧಿ ಮತ್ತು ಅವನ ಸಹೋದರನಾಗಿದ್ದ, ಸುಲ್ತಾನ ಮಹ್ಮದ್ ಶಾಹನ ಸಮಾಧಿಯು ಅಪೂರ್ಣವಾಗಿದೆ. ಜೊತೆಗೆ ೩೬ ವರ್ಷಗಳ ರಾಜ್ಯವಾಳಿದ ಮಹ್ಮದಶಾಹನ ಸಮಾಧಿಯು ಅಲ್ಲಿದೆ. ಅವೆಲ್ಲವು ಕಲ್ಲು, ಗಾರೆ ಮಾಧ್ಯಮಗಳಿಂದ ಮುಸ್ಲಿಂ ಶೈಲಿಯಲ್ಲಿ ನಿರ್ಮಾಣವಾದ ಸಮಾಧಿಗಳಾಗಿವೆ. ಚೌಖಂಡಿ ಸಮಾಧಿಯು ಚೌಕೋನಾಕೃತಿಯಲ್ಲಿದೆ. ಅದನ್ನು ಹಜರತ್ ಖಲಿಲ್ಲೂದಿನ್ ನೆನಪಿನಲ್ಲಿ ನಿರ್ಮಿಸಲಾಗಿದೆ. ಅವನು ಸುಲ್ತಾನ ಮಹ್ಮದ ಶಾಹನ ಗುರುವಾಗಿದ್ದನು. ಚೌಖಂಡಿಯೆಂಬ ಹೆಸರಿದ್ದರೂ ಅದು ಎರಡು ಅಂತಸ್ತಿನ ಕಟ್ಟಡ, ಗೋಡೆಯ ಮೇಲಿನ ಸುಂದರವಾದ ಚಿತ್ತಾರಗಳು ಹಾಗೂ ಸುಂದರವಾದ ಕೆತ್ತನೆಯ ಕೆಲಸವುಳ್ಳ ಗ್ರಾನೈಟ್ ಕಂಬಗಳು ಇದರ ವೈಭವವನ್ನು ಹೆಚ್ಚಿಸಿವೆ.

### ೪.೨. ಬೀದರನ ರಂಗಿನ ಮಹಲ್‌ನ ಭಿತ್ತಿಚಿತ್ರಕಲೆ

ಈ ಅರಮನೆಯನ್ನು ಮೊದಲು ಮಹಮದ ಶಾಹ ಬಹಮನಿ ಕ್ರಿ.ಶ.೧೪೮೭ರಲ್ಲಿ ಕಟ್ಟಿಸಿದನು, ಐವತ್ತು ವರ್ಷಗಳ ನಂತರ ಅಲೀ ಬರೀದನು ಈ ಅರಮನೆಯ ರೂಪರೇಷಗಳನ್ನು ಬದಲಿಸಿ ಕಟ್ಟಡವನ್ನು

ವಿಸ್ತರಿಸಿದನು. ಇದೊಂದು ಆಯಾತಾಕಾರದ ಸ್ತಂಭಗಳ ಮಾಲೆಗಳನ್ನು ಹೂಬಳ್ಳಿಗಳ ನಕ್ಷೆ ರಚಿಸಿದ್ದು, ಅವು ಕಲ್ಯಾಣಿ ಚಾಲುಕ್ಯರ ಶೈಲಿಯ ಪ್ರಭಾವಕ್ಕೆಒಳಗಾಗಿವೆ.[೩] ಬಹಮನಿ ಅರಸರ ಕಾಲದ ಕಟ್ಟಿಗೆ ಮಾಧ್ಯಮದ ಚಿತ್ರಕಲೆಯಲ್ಲಿ ಮೊಟ್ಟಮೊದಲು ಹಿಂದೂ ಹಾಗೂ ಇಸ್ಲಾಮ್ ಶೈಲಿಯ ಮಿಶ್ರಣವನ್ನು ಗಮನಿಸಬಹುದೆಂದು ಯಜದಾನಿಯವರು ಅಭಿಪ್ರಾಯ ಪಡುತ್ತಾರೆ. ಆಯಾತಾಕಾರದ ಹಾಗೂ ದುಂಡಾದ ಕಂಭಗಳಲ್ಲಿ ಐದು ಕಮಾನುಗಳಿವೆ. ಮತ್ತು ಹತ್ತು ಆಯಾತಾಕಾರದ ಸಣ್ಣ ಕೋಣೆಗಳಿವೆ. ಮೊಗಲ್ ಅರಸರ ಶಹಾಜಹಾನನ ಕಾಲದ ಕಟ್ಟಿಗೆಯ ತೊಲೆಗಳ ಮಾದರಿಯನ್ನು ಅನುಸರಿಸಿದ್ದಾರೆ. ಆದರೆ ಅವುಗಳಿಗೆ ಉಪಯೋಗಿಸಿದ ಕಟ್ಟಿಗೆಗಳು ಹಿಂದೂ ಶೈಲಿಯದಾಗಿದ್ದು, ಕೆಲವು ಹೂ ಮತ್ತು ಬಳ್ಳಿಗಳು ಸರಪಳಿಯಾಕಾರವಾಗಿ ಹಬ್ಬಿದ್ದು ಇಸ್ಲಾಮಿಕ್ ಶೈಲಿಯದಾಗಿದೆ.

### ೪.೩. ಬೀದರನ ಭಿತ್ತಿಚಿತ್ರಗಳ ಲಕ್ಷಣಗಳು

೧. ಗಾಢ ಕೆಂಪು ನೀಲಿ ವರ್ಣಗಳ ಹಿನ್ನೆಲೆಯಲ್ಲಿ ಇಲ್ಲಿನ ಭಿತ್ತಿಚಿತ್ರಗಳು ಕಂಡು ಬರುತ್ತವೆ.

೨. ನಿರರ್ಗಳವಾಗಿ ಹರಿಯುವ ಹೊರರೇಖೆ ಲಾಲಿತ್ಯಪೂರ್ಣ ಹಾಗೂ ಉತ್ತಮ ಸಂಯೋಜನೆಗಳಿಂದ ಕೂಡಿದ ಸುಳುವಿನ ಚಿತ್ತಾರಗಳು ಇಲ್ಲಿನ ಪ್ರಮುಖ ಆಕರ್ಷಣೆಯಾಗಿದೆ.

೩. ನಕ್ಷೆಯ ಮೂಲಭೂತ ತತ್ವಗಳನ್ನು ಯಥಾವಥ್ ಇಲ್ಲಿ ದೃಶ್ಯರೂಪಕ್ಕೆ ಇಳಿಸಿರುವುದು ವಿಶೇಷ ಜಾಮಿತಿಕ ವಿನ್ಯಾಸಗಳು ಪುನರಾವರ್ತಿತಗೊಂಡು ಮತ್ತೊಂದು ವಿಶೇಷ ನಕ್ಷೆಯಾಗಿ ರೂಪುಗೊಳ್ಳುತ್ತಾ ಹೋಗಿದೆ.

ಅಂಚಿನ ನಕ್ಷೆಗಳು ನಿರ್ದಿಷ್ಟ, ಸ್ಥಳವ್ಯಾಪಕ ನಕ್ಷೆಗಳು

ಚೌಕಾಕಾರದ ಕೊನೆ ಮೂಲೆಗಳ ಛಾವಣಿಯ ಅಂಚುಗಳಲ್ಲಿ ಮತ್ತು ಕೇಂದ್ರಗಳಲ್ಲಿ ಆಸ್ಥಳಕ್ಕೆ ಹೊಂದುವಂತಹ ದುಂಡು ಚೌಕಪಟಿಯಾಕಾರದ ನಕ್ಷೆಗಳು ನಿರಂತರವಾಗಿ ಕಲಾತ್ಮಕವಾಗಿ ವಿನ್ಯಾಸಗೊಳ್ಳುತ್ತಾ ಸಾಗಿವೆ. ಈ ನಕ್ಷೆಗಳು ವೈವಿದ್ಯರೂಪುಗಳಿಂದ ವರ್ಣಗಳಿಂದ ನೋಡುಗನನ್ನು ಎಲ್ಲೋ ಬೇಸರವಾಗದಂತೆ ಕಾಯ್ದುಕೊಳ್ಳುವಲ್ಲಿ ಮತ್ತು ಆಸಕ್ತಿಯನ್ನು ಯಶಸ್ವಿಯಾಗಿದೆ.

ಈ ನಕ್ಷೆಗಳ ಪ್ರಮುಖ ಮೇಲ್ನೋಟದಲ್ಲಿ ಮುಸ್ಲಿಂ ಶೈಲಿಯ ಅರಾಬಿಕ್ ಪರ್ಶಿಯಾ ನಕ್ಷೆಗಳಾಗಿ ಕಂಡರು ಅಲ್ಲಲ್ಲಿ ವರ್ಣಗಾರಿಕೆ ಹೂ ಬಳ್ಳಿಗಳ ವಿನ್ಯಾಸಗಳಲ್ಲಿ ಭಾರತೀಯತೆಯನ್ನು ಕಾಯ್ದುಕೊಂಡಿದೆ. ವಿಜಯನಗರದ ಭಿತ್ತಿಚಿತ್ರಗಳ ರಚನಾಕಾರರು ಮುಂದುವರೆದ ಶೈಲಿಯನ್ನು ಪ್ರಭಾವವನ್ನು ಗುರುತಿಸಲು ಸಾಧ್ಯ ಲಾಲಿತ್ಯ ವರ್ಣ ರೇಖೆಕಮಲ ದಳದ ನಕ್ಷೆಗಳು ಕೆಂಪುವರ್ಣದ ಹಿನ್ನೆಲೆಯಲ್ಲಿದ್ದು ಅಂದಿನ ಕಲಾವಿದರ ತಾಳ್ಮೆ ಕೈಚಳಕ, ಸೂಕ್ಷ್ಮತನಗಳು ಇಂದಿನ ನೋಡುಗರಿಗೆ ಆಶ್ಚರ್ಯಮೂಡಿಸುವಂತಿದೆ ಸಂಕೀರ್ಣನಕ್ಷೆಗಳ ಹಿನ್ನೆಲೆಯಲ್ಲಿ ಕೆಲವೊಂದು ಕಡೆ ಚಿನ್ನದ ಲೇಪನ ಬೆಳ್ಳಿಯ ಲೇಪನವಿದ್ದು ಸೌಂದರ್ಯ ಮತ್ತು ಶ್ರೀಮಂತಿಕೆಯನ್ನು ಹೆಚ್ಚಿಸುವಲ್ಲಿ ಸಹಕಾರಿಯಾಗಿದೆ. ಗಾಡ ಹಸಿರು, ಕೆಂಪು ಮತ್ತು ನೀಲಿಯ ಹಿನ್ನೆಲೆಯಲ್ಲಿ ಸುವರ್ಣವರ್ಣದ ಅರಾಬಿಕ್ ಪರ್ಶಿಯಾದ ಅಕ್ಷರಗಳ ಲಿಪಿಗಳು ಮತ್ತೊಂದು ರೂಪದ ನಕ್ಷೆಯಂತೆಯೇ ಕಂಡುಬರುತ್ತದೆ.

---

೩. ಡಾ.ವಜೀರ ಭಾಷಾ ಬಾಗಾಯತ್, ಕರ್ನಾಟಕದ ಮುಸ್ಲಿಂ ಅರಸರ ಕಲಾದ ಚಿತ್ರಕಲೆ

ಪ್ರಖರ ವರ್ಣಗಳ ನಕ್ಷೆಗಳ ಆಕರ್ಷಣೆ ಒಂದು ತೆರನಾದರೆ ತಂಪು ವರ್ಣಗಳಿಂದ ಗಾಢ ನೀಲಿ, ತಿಳಿನೀಲಿ, ನೇರಳೆ ಹಸಿರು, ಹಳದಿ ವರ್ಣ ಬಿಳಿ ವರ್ಣಗಳ ಬಳಕೆಯೊಂದಿಗೆ ಅಷ್ಟೇ ಆಕರ್ಷಕವಾದ ನಕ್ಷೆಗಳು ಲಿಪಿಗಳು ರಚನೆಯಾಗಿರುವದು ಇಲ್ಲಿನ ಆಳ ಅರಸರ ಅಭಿರುಚಿಯನ್ನು ವ್ಯಕ್ತಪಡಿಸುವಂತಿದೆ.

ಉದಾ:- ರಂಗಿನ ಮಹಲ್‌ನಲ್ಲಿರುವ ವರ್ಣಚಿತ್ರಗಳು

ಪ್ರಖರವರ್ಣಗಳಿಂದ ಮಾಡಿರುವ ವರ್ಣಚಿತ್ರಗಳು ಒಂದು ಕಡೆ ಇದ್ದರೆ. ತಂಪುವರ್ಣಗಳಿಂದ ಮಾಡಿರುವ ಗಾಢ ವರ್ಣಗಳ ಹಿನ್ನೆಲೆಯಲ್ಲಿ ತಂಪುವರ್ಣಗಳ ನಕ್ಷೆಗಳು ಇಲ್ಲಿದ್ದು ಮತ್ತೊಮ್ಮೆ ಕಲಾವಿದ ಹಾಗೂ ಅದರ ಪೋಷಕರುಗಳನ್ನು ಮೆಚ್ಚುಗೆಯಿಂದ ಸ್ಮರಿಸುವಂತೆ ಆಗುತ್ತದೆ.

ವರ್ಣನಾತ್ಮಕ ಜಾಮಿತಿಕ ಆಕಾರ ನಕ್ಷೆ ಇದ್ದು ಕಪ್ಪು ಬಿಳುಪಿನ ನಕ್ಷೆಯನ್ನು ಅದರ ಕೇಂದ್ರದಲ್ಲಿ ಅಳವಡಿಸಿದ್ದು, ವರ್ಣಚಿತ್ರ ನಕ್ಷೆಗಳಾಗಲಿ ಕಪ್ಪು ಬಿಳುಪಿನ ಸೌಂದರ್ಯ ದೃಷ್ಟಿಯಿಂದ ಒಂದಕ್ಕೊಂದು ಪೂರಕವಾಗಿರುವುದನ್ನು ಇಲ್ಲಿ ಗಮನಿಸಬಹುದು.

ಉದಾ:- ಚೌಕಾಕಾರದ ನಕ್ಷೆಯ ಚಿತ್ರ ಸೂಕ್ತವಾದ ಅಂಚಿನಲ್ಲಿರುವಂತಹ ಚಿತ್ರಗಳು.

ಈ ನಕ್ಷೆಗಳನ್ನು ಪೂರಕವಾಗಿ, ಮರದ ಮಂಟಪ ಬಾಗಿಲ ತೋರಣಗಳು ಮುಸ್ಲಿಂ ಶೈಲಿಯಲ್ಲಿದ್ದು, ಅದರೊಂದಿಗೆ ವಿಜಯನಗರದ ಶೈಲಿಯನ್ನು ಒಳಗೊಂಡಿದ್ದು, ಹೆಚ್ಚಿನ ಆಕರ್ಷಣೆಗಾಗಿ ರಚಿಸಿರುವ ಕುಸುರಿ ಕೆಲಸದ ನಕ್ಷೆಗಳು ಆಳವಾದ ಉಬ್ಬುಕೆತ್ತನೆಗಳಾಗಿದ್ದು, ಭಿತ್ತಿ ಚಿತ್ರಗಳ ನಕ್ಷೆ ಮುಂದುವರೆದ ರೂಪ ಇದಾಗಿದೆ. ರಂಗಿನ ಮಹಲನ ಒಳಾವರ್ಣದ ಛಾವಣಿ, ತೋರಣಗಳು ಕಲಾತ್ಮಕ ಕಂಭಗಳು ಭೀಮಗಳಲ್ಲಿ ಕಂಡುಬರುತ್ತವೆ.

## ೪.೪. ಅಸ್ಕೂರಿನ ಬಹುಮನಿ ಭಿತ್ತಿಚಿತ್ರಕಲೆಯ ರಚನಾ ವಿಧಾನ

ಭಿತ್ತಿ ಚಿತ್ರಕಲೆಯ ಬಗ್ಗೆ ಉಲ್ಲೇಖಗಳನ್ನು ಗಮನಿಸುವದಾದರೆ ಸುಮಾರು ಕ್ರಿ.ಪೂ.೫೦೦೦ ವರ್ಷಗಳ ಹಿಂದಿನ ಸಿಂಧೂ ನಾಗರಿಕತೆಯ ಕಾಲದಲ್ಲಿ ಜನರು ತಮ್ಮ ವಸ್ತುಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರು, ಎಂದು ತಿಳಿದು ಬರುತ್ತದೆ. ಹರಪ್ಪಾಮೆಹೆಂಜೋದಾರದಲ್ಲಿನ ಉತ್ಖನನ ಸಮಯದಲ್ಲಿ ದೊರೆತ ಶಿಲಾಗೃಹಗಳ ಗೋಡೆಗಳ ಮೇಲೆ ಬಣ್ಣದ ಉಳಿಕೆಗಳು ಕಂಡುಬಂದಿವೆ. ವೇದಗಳಲ್ಲೇ ಮೊದಲನೆಯದಾದ ಋಗ್ವೇದದಲ್ಲಿ ಚಿತ್ರಕಲೆಯ ಕುರಿತು ಪ್ರಸ್ತಾಪ ಬರುತ್ತದೆ. ರಾಮಾಯಣ, ಮಹಾಭಾರತದಲ್ಲೂ ಭಿತ್ತಿಚಿತ್ರಗಳಿಂದ ಅಲಂಕೃತಗೊಂಡ ಅರಮನೆಗಳ ವರ್ಣನೆ ಕುರಿತಾದ ಉಲ್ಲೇಖವಿರುವುದು ಕಂಡುಬರುತ್ತದೆ. ಭಾರತೀಯ ಕಲಾ ಇತಿಹಾಸಕ್ಕೆ ಮೊದಲು ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಭಿತ್ತಿ ಚಿತ್ರಗಳನ್ನು ಅಜಂತಾ ಗುಹೆಗಳಲ್ಲಿ ವಿಶೇಷವಾಗಿ ಕಾಣಬಹುದು. ಇವು ಕ್ರಿ.ಪೂ.೨ ರಿಂ ಕ್ರಿ.ಶ.೮ನೇ ಶತಮಾನದಲ್ಲಿ ರಚನೆಗೊಂಡವು ಇವು ವಿಶೇಷವಾಗಿ ಬೌದ್ಧನ ಜಾತಕ ಕಥೆಗೆ ಸಂಬಂಧಿಸಿದ ಭಿತ್ತಿ ಚಿತ್ರಗಳಾಗಿವೆ. ನಂತರದಲ್ಲಿ ಇದು ವೇದಾಂತ ಗ್ರಂಥವೆ ಆದರೂ ಅದರಲ್ಲಿ ಚಿತ್ರವಾಡಿಕೆಯೆಂಬ ಪ್ರಕಾರವಿರುವುದು ಸ್ವಾರಸ್ಯವಾಗಿದೆ. ಪ್ರಕರಣದಲ್ಲಿ ಭಿತ್ತಿಚಿತ್ರಗಳನ್ನು ರಚಿಸುವುದು ವಿವರಗಳಿಗೆ ಚಿತ್ರರಚನೆಗಾಗಿ ಗೋಡೆಯನ್ನು ಅಥವಾ ಪಟವನ್ನು ಸಿದ್ಧಪಡಿಸುವಾಗ,

ಧೌತ, ಘುಟಕ, ಲಾಂಛಿತ ಎಂಬ ಹಂತಗಳನ್ನು ಹೇಳಿದ್ದಾರೆ. ಧೌತವೆಂದರೆ ಗೋಡೆಗೆ ಸುಣ್ಣ ಅಥವಾ ಪಟದ ಮೇಲೆ ಬಿಳಿಬಣ್ಣವನ್ನು ಬಳಿಯುವುದು. ಇದು ಮೊದಲು ಸಿದ್ಧತೆ, ಅನಂತರ ಘುಟಿತವೆಂದರೆ ಅನ್ನದಿಂದ ಲೇಪನ ಮಾಡಿ ಹರವಿನಲ್ಲಿ ಏರುಪೇರುಗಳು ಇರದಂತೆ ನೋಡಿಕೊಳ್ಳುವುದು ಅನ್ನದ ಅಂಟೂ ಚಿತ್ರ ನಿರ್ಮಾಣಕ್ಕೆ ಬೇಕಾದುದೇ. ಅನಂತರ ರಚಿಸಬೇಕಾದ ಚಿತ್ರದ ಮೇಲ್ಮೈಗೆರೆಗಳನ್ನು ಇದ್ದಿಲಿನ ಕಡ್ಡಿಯಿಂದ ಗುರುತು ಮಾಡಿಕೊಳ್ಳುವುದು. ಲಾಂಛಿತವೆನ್ನಿಸಿಕೊಳ್ಳುತ್ತದೆ. ಇಷ್ಟೆಲ್ಲ ಆದ ಮೇಲೆ ರೇಖಾಚಿತ್ರಕ್ಕೆ ಬಣ್ಣ ತುಂಬಿಸುವುದು ವರ್ಣರಚನೆವೆಂಬ ಘುಟ ಈ ಅಂಶ ಮಹತ್ವಪೂರ್ಣವಾಗಿದೆ.

ಭಿತ್ತಿಚಿತ್ರವನ್ನು ಯಾವ ಪದ್ಧತಿಯಲ್ಲಿ ರಚಿಸಿದ್ದಾರೆ ಎಂದೂ ತಿಳಿದುಕೊಳ್ಳುವುದು ಅತ್ಯವಶ್ಯಕ. ಸಾಮಾನ್ಯವಾಗಿ ಯಾವುದೇ ಚಿತ್ರವನ್ನು ತಯಾರಿಸಲು ಮೊದಲು ತಳಹದಿಯನ್ನು ತಯಾರಿಸಬೇಕು. ಏಕೆಂದರೆ ಇವುಗಳಲ್ಲಿ ಫ್ರೆಸ್ಕೋ ಮತ್ತು ಸೆಸ್ಕೋ ಎಂಬ ಎರಡು ವಿಧಗಳಿವೆ. ಭಾರತದಲ್ಲಿ ಸಾಮಾನ್ಯವಾಗಿ ಎರಡನೆಯ ಪದ್ಧತಿಯಲ್ಲೇ ಹಿಂದಿನಿಂದಲೂ ಚಿತ್ರರಚನೆಯಾಗಿರುವುದು ಅಜಂತಾದಿಂದ ಹಿಡಿದು ಮೈಸೂರು ಭಿತ್ತಿಚಿತ್ರಗಳು ಸೆಸ್ಕೋ ಪದ್ಧತಿಯಲ್ಲ ರಚಿತವಾಗಿವೆ. ಸೆಸ್ಕೋ ಗೋಡೆಯ ಮೇಲೆ ಒಣಗಿರಬೇಕು. ಇದರ ಮೇಲೆ ಮೊದಲು ರೇಖಾಚಿತ್ರಗಳನ್ನು ರಚಿಸಿ ನಂತರ ನೈಸರ್ಗಿಕ ಬಣ್ಣಗಳ ಜೊತೆ ಮೊಟ್ಟೆ, ಬೆಲ್ಲ, ಅಂಟು, ದ್ರಾವಣ ಬೆರೆಸಿ ವರ್ಣ ಸಂಯೋಜನೆ ಮಾಡುತ್ತಿದ್ದ ಬಗ್ಗೆ ತಿಳಿದು ಬರುತ್ತದೆ. ವರ್ಣಗಳನ್ನು ಸಾಮಾನ್ಯವಾಗಿ ನೈಸರ್ಗಿಕವಾಗಿ ದೊರೆಯುವ ವಿವಿಧ ಬಣ್ಣಗಳ ಕಲ್ಲು ತಯಾರಿಸಿಕೊಳ್ಳುತ್ತಿದ್ದರು. ಇದಕ್ಕೆ ಅಂಟು ದ್ರಾವಣವನ್ನು ಬೆರೆಸಿದ ಮೇಲೆ ಅದು ಉಪಯೋಗಕ್ಕೆ ಯೋಗ್ಯವಿದೆ. ಎಂದಾದ ಮೇಲೆ ಅದನ್ನು ಉಪಯೋಗಿಸುತ್ತಿದ್ದರು. ಈ ವರ್ಣಗಳು ಎಷ್ಟು ವರ್ಷ ಬಿಟ್ಟರು ಮಸುಕಾಗದೆ ಹಾಗೆ ತಮ್ಮ ಹೊಳಪನ್ನು ಉಳಿಸಿಕೊಂಡು ಬರುತ್ತವೆ. ಇದಕ್ಕೆ ಅಜಂತಾ ಬಾಗ್, ತಂಜಾವುರು, ಲೇಪಾಕ್ಷಿ, ಮೈಸೂರು, ವಿಜಯನಗರ ಹಾಗೂ ಪ್ರಸ್ತುತ ಅಸ್ಸೂರ ಭಿತ್ತಿಚಿತ್ರಗಳ ಅತ್ಯುತ್ತಮ ಉದಾಹರಣೆಗಳಾಗಿವೆ.

### ೪.೫. ಟೆಂಪರಾ ವಿಧಾನ

ಮೊಟ್ಟೆ ಅಥವಾ ಯಾವುದೇ ಬಗೆಯ ಅಂಟಿನೊಂದಿಗೆ ಕೆಲವು ಕರಗುವ ಮತ್ತು ಕರಗದ ಬಣ್ಣವನ್ನು ಬೆರೆಸಿ ತಯಾರಿಸುವ ವಿಶೇಷ ವರ್ಣಗಳ ಮಾಧ್ಯಮ ಟೆಂಪರಾ ಈಜಿಪ್ಟ್ ಎನ್ನುವರು. ರೋಮನ್ನರು ಹಾಗೂ ಗ್ರೀಕರು ಉಪಯೋಗಿಸಲ್ಪಟ್ಟ ಹಳೆಯ ಚಿತ್ರ ವಿಧಾನ ಭಿತ್ತಿ ಚಿತ್ರ ವಿಧಾನ ಭಿತ್ತಿ ಚಿತ್ರಗಳ ರಚನೆಗೆ ಗೋಡೆಯ ಮೇಲೆ ಅಥವಾ ಬಟ್ಟೆಗಳ ಮೇಲೆ ಚಿತ್ರ ರಚನೆಗೆ ಉಪಯೋಗಿಸಬಹುದಾದಂತಹ ಮಾಧ್ಯಮವಾಗಿದೆ. ಮೊಟ್ಟೆ ಬೆರೆಸಿದ ಟೆಂಪರಾವನ್ನು ನೀರಿನಿಂದ ತಿಳಿಗೊಳಸಿ ರಚಿಸಿದ ಚಿತ್ರಕ್ಕೆ ಹೊಳಪಿನ ಲೇಪನ ಮಾಡಿದರೆ ಅದು ಜಲವರ್ಣದಂತೆ ಕಾಣುತ್ತದೆ.

ಬಣ್ಣಗಳನ್ನು ಬಿಳಿಬಣ್ಣ ಮಿಶ್ರಮಾಡಿ ಹಚ್ಚಿದರೆ ಆಗ ಪೇಸ್ಟಲಿನ ನಾಜೂಕು ಕಂಡು ಬರುತ್ತದೆ. ಮಾಧ್ಯಮದಲ್ಲಿನ ತೈಲ ಅಂಶ ಹೆಚ್ಚಿಸಿದರೆ ತೈಲವರ್ಣದಂತೆ ಟೆಂಪರ್ ಸಿದ್ಧ ಟರ್ಪನ ಟ್ಯಾಲನೊಡನೆ ಬಳಸಿದರೆ ತೈಲವರ್ಣ ಜಾತಾಪು ಲಭ್ಯ ತಿಳುವಾಗಿ ಲೇಪಿಸಿದ ಟೆಂಪರಾ ಮೇಲೆ ವರ್ಗೆಶಿನ ಒಂದು ಪದರ

ಲೇಪಿಸಿದರೆ ಅದು ತೈಲ ವರ್ಣಕ್ಕೆ ಅತ್ಯುತ್ತಮ ತಳಪಾಯ ನೀಡುತ್ತದೆ.[೪] ಟೆಂಪರಾಗಲೇ ಮೂಲತಃ ಟೆಂಪರಾಗಳಿಗೆ ವರ್ಣಿಸಿ ಹೊಳಪು ನೀಡುವುದರ ಜೊತೆಗೆ ವಿಶೇಷ ಆಳ ನೀಡುವುದೇ ಇದಕ್ಕೆ ಕಾರಣ ತೈಲವರ್ಣಗಳತ್ತ ಒಲವು ಹೆಚ್ಚಾಗುತ್ತ ಬಂದ ಮೇಲೆ ಟೆಂಪರಾದ ಮೇಲೆ ಆಕೃತಿ ಆರಂಭವಾಯಿತು.

### ೪.೬. ಫ್ರೆಸ್ಕೋ

ಗೋಡೆಯ ಮೇಲೆ ಸುಣ್ಣವನ್ನು ನಿರ್ಮಿಸಿ ಇನ್ನೂ ಹಸಿ ಇರುವಾಗಲೇ ಚಿತ್ರವು ಪೂರ್ಣವಾಗಿ ಚಿತ್ರಿತವಾಗುವಂತೆ ಚಿತ್ರಿಸುವುದು ಫ್ರೆಸ್ಕೋ ಪದ್ಧತಿಯ ವೈಶಿಷ್ಟವಾಗಿದೆ. ಸುಣ್ಣವು ಒಣಗಿದ ನಂತರ ಅದರೊಂದಿಗೆ ಚಿತ್ರವು ಕಟ್ಟಿಕೊಂಡು ಶಾಶ್ವತವಾಗಿ ಉಳಿಯುತ್ತದೆ.

ಪುರಾತನ ಕಾಲದಲ್ಲಿ ಗೋಡೆಗಳ ಮೇಲೆ ಚಿತ್ರಿಸಲ್ಪಟ್ಟ ಅನೇಕ ಫ್ರೆಸ್ಕೋ ಚಿತ್ರಗಳು ಉತ್ಕೃಷ್ಟ ಕಲಾಕೃತಿಗಳಾಗಿವೆ. ಗೋಡೆಗಳಿಗೆ ಬಣ್ಣವನ್ನು ಹಚ್ಚುವ ವಿಧಾನಗಳು ಅನೇಕ ವಿಧಗಳಾಗಿವೆ.

ತೈಲವರ್ಣ ಮತ್ತು ಮೇಣವರ್ಣಗಳನ್ನು ಸಹ ಬಳಸಬಹುದೆಂಬುವುದಕ್ಕೆ ಮುಂತಾದ ಕಡೆಗಳಲ್ಲಿ ಹಲಗೆಯ ಮೇಲೆ ಚಿತ್ರಿಸಿ ನಂತರ ಗೋಡೆ ಇಲ್ಲವೆ ಒಳಮಾಳಿಗೆಯಲ್ಲಿ ಅಂಟಿಸಿರುವುದು ಕಂಡುಬರುತ್ತದೆ. ಸುಣ್ಣವು ಹಸಿ ಇರುವಾಗಲೇ ಚಿತ್ರಕೃತಿಯು ಬಿಳಿ ಉಳಿಯಲೇಬೇಕಾಗಿರುವುದರಿಂದ ಈ ಪದ್ಧತಿಯು ಬಹುಕಠಿಣವಾಗಿದೆ. ಚಿತ್ರಕಾರ್ಯವು ಸಾಧ್ಯವಾಗುವ ಮಟ್ಟಿಗೆ ಗೋಡೆಯ ಭಾಗದ ಮೇಲೆ ಸುಣ್ಣವನ್ನು ಲೇಪಿಸಿ ಅದರ ಮೇಲೆ ವರ್ಣ ಚಿತ್ರಗಳನ್ನು ರಚಿಸಬೇಕಾಗುತ್ತದೆ. ಅಲ್ಲದೆ ಸುಣ್ಣದ ಲೇಪನವು ಹಸಿಯಾಗಿರಬೇಕಾದದ್ದು ಅಗತ್ಯವಾಗಿದೆ. ಒಂದು ಬಾರಿ ಬಣ್ಣವನ್ನು, ಉಳಿದ ನಂತರ ತಿದ್ದುಪಡಿ ಮಾಡಲು ಸಾಧ್ಯವಾಗಲಾರದು. ಅಲ್ಲದೇ ಬಣ್ಣವು ಒಣಗಿದ ಬಳಿಕ ಬಣ್ಣದ ರೂಪ ಬದಲಾವಣೆಗೊಳ್ಳುವುದರಿಂದ ಇಟಾಲಿಯನ ಫ್ರೆಸ್ಕೋ ಕಲಾವಿದರು. ಇಡಿ ಗೋಡೆಯ ಮೇಲೆ ಚಿತ್ರಿಸಿರುವ ಸಂಪೂರ್ಣ ಚಿತ್ರದ ಬಾಹ್ಯ ರೇಖೆಗಳನ್ನು ದೊಡ್ಡದಾದ ಗೋಡೆಯನ್ನು ಆವರಿಸುವ ಕಾಗದ ಮೇಲೆ ಚಿತ್ರಿಸಿ ನಂತರ ಬಾಹ್ಯರೇಖೆಗುಂಟ ಗೆರೆಗಳನ್ನು ಉಳಿಸಿಕೊಂಡು ಕಾಗದವನ್ನು ಗೋಡೆಗೆ ಅಂಟಿಸಿ ಚಿತ್ರದ ಬಾಹ್ಯರೇಖೆಯನ್ನು ಹಸಿ ಸುಣ್ಣದ ಲೇಪನದ ಮೇಲೆ ಚಿತ್ರಿಸಿರುವುದಕ್ಕೆ ಕಾರ್ಟೂನ್ ಎಂದು ಕರೆಯಲಾಗುತ್ತಿತ್ತು. ಸುಣ್ಣವು ಒಣಗಿದ ಟೆಂಪರ ವಿಧಾನದಿಂದ ಚಿತ್ರಕ್ಕೆ ಮುಕ್ತಾಯ ಸ್ಪರ್ಶಗಳನ್ನು ಕೊಡುತ್ತಿದ್ದರು.

ಭಾರತದಲ್ಲಿ ಫ್ರೆಸ್ಕೋ ವಿಧಾನವು ಕ್ರಿ.ಪೂ.೧ನೇ ಶತಮಾನದಿಂದಲೂ ಬಳಕೆಯಲ್ಲಿತ್ತು ಎಂಬುವುದಕ್ಕೆ ಅಂಜಂತಾ, ಎಲ್ಲೋರಾ ನಾಸ್ತಿಕ ಭಾಗ ಸಿಗಿಯ ಮುಂತಾದ ಕಡೆಗಳಲ್ಲಿರುವ ಭಿತ್ತಿ ಚಿತ್ರ ಪ್ರತ್ಯಕ್ಷ ಉದಾಹರಣೆಗಳಾಗಿವೆ.

### ೪.೭. ವರ್ಣಗಳು ಬಣ್ಣಗಳು

ಪ್ರಾಚೀನರು ಬಣ್ಣಗಳ ಮಹತ್ವವನ್ನು ಮೊದಲೇ ಅರಿತು ತಮ್ಮ ಕಲಾಕೃತಿಗಳಲ್ಲಿ ಬಣ್ಣಗಳನ್ನು ಧಾರಾಳವಾಗಿ ಮೂಡಿಸಿರಬಹುದು ಅಲ್ಲದೇ ನಮ್ಮ ಪ್ರಾಚೀನರಲ್ಲಿ ಬಣ್ಣಗಳ ಹುಟ್ಟಿನ ಬಗ್ಗೆ ಅನೇಕ

೪. ಡಾ.ಯಾದಪ್ಪ ಪರದೇಶಿ, ಉತ್ತರ ಕರ್ನಾಟಕದ ಭಿತ್ತಿಚಿತ್ರಗಳು,

ಪೌರಾಣಿಕ ಕಲ್ಪನೆಗಳಿವೆ. ಪ್ರಾಚೀನರು ತಯಾರಿಸಿಕೊಳ್ಳುತ್ತಿದ್ದ ಬಣ್ಣಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಿದಾಗ ಸೃಷ್ಟಿಯಲ್ಲಿನ ಬೇರೆ ಬೇರೆ ಮೂಲ ವಸ್ತುಗಳಿಂದ ಮುಂದೆ ವಿವಿಧ ರೀತಿಯ ಬಗೆ ತಿಳಿದು ಬರುತ್ತದೆ. ಭಿತ್ತಿಚಿತ್ರ ರಚನೆಯಲ್ಲಿ ಬಣ್ಣವು ಅತೀ ಪ್ರಾಧ್ಯಾನತೆಯನ್ನು ಪಡೆದ ಅಂಶವಾಗಿದ್ದು, ಚಿತ್ರದಲ್ಲಿನ ಒಂದು ಜೀವಂತಿಕೆಯನ್ನು ಇದು ಸೂಚಿಸುತ್ತದೆ. ಮತ್ತು ಕಣ್ಣುಗಳನ್ನು ಸೆಳೆಯುವಂತಹದಾಗಿದೆ. ಮಾನವನ ಮನಸ್ಸಿನ ಮೇಲೆ ಬೀರುವ ಬಣ್ಣಗಳ ಪರಿಣಾಮವು ಅತೀ ಮುಖ್ಯವಾದ ಅಂಶವಾಗಿ ಪರಿಗಣಿಸಲಾಗಿದೆ.

ಭಿತ್ತಿ ಚಿತ್ರಕಲೆಯಲ್ಲಿ ವೈವಿಧ್ಯಮಯವಾದ ಬಣ್ಣಗಳು ಬಳಕೆಗೊಂಡಿದ್ದು ಅವುಗಳನ್ನು ಯಾವ ಮೂಲಗಳಿಂದ ತಯಾರಿಸಿಕೊಳ್ಳಲಾಯಿತು ಎಂಬ ವಿವರಗಳು ಮಹತ್ವ ಪೂರ್ಣವಾದವುಗಳಾಗಿವೆ. ಭಿತ್ತಿ ಚಿತ್ರಕಲೆಗೆ ಬಳಸಿಕೊಳ್ಳುವ ಬಣ್ಣಗಳ ಕುರಿತು ನಮಗೆ ಸಿಗಲು ಲಭ್ಯ ವರ್ಣ ವೈವಿಧ್ಯ ಬಣ್ಣಗಳನ್ನು ಸ್ಥೂಲವಾಗಿ ನಾಲ್ಕು ವಿಧದಲ್ಲಿ ವಿಂಗಡಿಸಲಾಗಿದೆ.

ಖನಿಜ ಮೂಲ ಬಣ್ಣಗಳು, ಸಸ್ಯ ಮೂಲ ಬಣ್ಣಗಳು, ಲೋಹ ಮೂಲ ಬಣ್ಣಗಳು, ರಾಸಾಯನಿಕ ಮೂಲ ಬಣ್ಣಗಳು

ಐದು ವಿಧಗಳಿಂದ ತಿಳಿದು ಬರುವ ಮೂಲವರ್ಣಗಳು ಹಳದಿ, ಕೆಂಪು ಹಾಗೂ ನೀಲಿ ಎಂದು ತಿಳಿಯಲಾಗಿದ್ದು, ಇವುಗಳ ಪರಸ್ಪರ ಮಿಶ್ರಣದಿಂದ ಅನೇಕ ವರ್ಣಗಳು ಉತ್ಪತ್ತಿಯಾಗುತ್ತವೆ. ಬಿಳಿಯ ಶಂಖ, ಬೂದು ಬಣ್ಣ, ಅಚ್ಚಕೆಂಪು, ಕಾವಿಮಣ್ಣು, ಹರಿದಾಳ, ದೀಪದ ಕಪ್ಪು ಮುಂತಾದವು ಬೆರೆತರೆ ವರ್ಣ ವೈವಿಧ್ಯವನ್ನು ತಂದುಕೊಳ್ಳುವುದೆಂದು ಅಭಿಲಾಷಿತಾರ್ಥ ಚಿಂತಾಮಣಿಯು ತಿಳಿಸುತ್ತದೆ.

**೪.೮. ವಸ್ತು ವಿಷಯ ಶೈಲಿ ಮತ್ತು ವರ್ಣಗಾರಿಕೆ**

ಅಸ್ತೂರಿನ ಅಹಮದ ಶಾನ ಸಮಾಧಿಯು ಹೊರ ನೋಟಕ್ಕೆ ವಾಸ್ತುವನ್ನು ಗಮನಿಸಿದಾಗ ಬಿಜಾಪೂರದ ಗೋಳಗುಮ್ಮಟವನ್ನು ಹೋಲುವಂತೆ ಭಾಸವಾಗುತ್ತದೆ. ಈ ಗೋರಿ ಗುಮ್ಮಟವನ್ನು ಹೊಂದಿದ್ದು ನೋಡಲು ಆಕರ್ಷಕವಾಗಿದೆ. ಆದರೆ ಇದನ್ನು ಕೆಳ ಭಾಗದಿಂದ ಮಾತ್ರ ನೋಡಬಹುದು. ಮೇಲ್ಭಾಗದಲ್ಲಿ ಹತ್ತಲು ಮೆಟ್ಟಿಲುಗಳ ವ್ಯವಸ್ಥೆಯಿರುವುದಿಲ್ಲ. ದೇಹ ಆಕಾಶ ಮತ್ತು ಆತ್ಮ.... ಸೂರ್ಯ ಹೊರಲಕ್ಷಣಗಳ ಸಮಾಧಿಯು ಚೌಕಾಕಾರದ ಪ್ರಾಸಾದವನ್ನು ಹೊಂದಿದ್ದು ಗೋಡೆಗಳ ಕಲ್ಲುಗಳು ನಯವಾದ ಗಾರೆಯಿಂದ ಜೋಡಿಸಲ್ಪಟ್ಟಿದೆ. ಗುಮ್ಮಟವು ಗುಲ್ಬರ್ಗದಲ್ಲಿ ಕಂಡು ಬರುವ ಗೋರಿಗಳಿಗಿಂತಲೂ ಉದಾ:- ಫೀರೋಜ ಶಹಾನ ಗೋರಿ ಹೆಚ್ಚು. ಆಡಂಬರ ಪೂರ್ಣವಾಗಿದೆ, ಮತ್ತು ಎತ್ತರವಾಗದೆ. ಅಹಮದ ಶಹಾನ ಸಮಾಧಿ ಷಡ್ಭುಜಾಕೃತಿಯ ವೃತ್ತಾಕಾರ ಆಧಾರ ಹೊಂದಿದ್ದು, ಭಾಗಶಃ ಪರದಾ ಗೋಡೆಗಳಲ್ಲಿನ ಬಿಟ್ಟು ಕಿಂಡಿಗಳಲ್ಲಿ ಅಡಗಿವೆ. ಈ ಎಲೆಯಾಕಾರದ ಕಿಂಡಿಗಳು ಮೂಲೆಗಳಲ್ಲಿ ಗುಲದಸ್ತು ಅಥವಾ ತ್ರಿಕೋನಾಕಾರದ ಕಮಾನುಗಳಾಗಿ ರೂಪಗೊಂಡಿವೆ. ಇವು ನೇರ ಗೋಡೆಗಳಿಂದ ವಿಭಿನ್ನವಾಗಿವೆ. ಮತ್ತು ದೊಡ್ಡದಾಗಿದ್ದು ಕೊನೆಯಲ್ಲಿ

ತ್ರಿಕೋನಾಕಾರದ ರೂಪ ಹೊಂದಿವೆ. ಇವು ಗುಜರಾತಿ ನೇಯ್ಗೆಯ ಮತ್ತು ಅಂಚುಗಳನ್ನು ನೆನಪಿಸುತ್ತವೆ. ಕೊಳವೆಯಾಕಾರದ ಗುಲದಸ್ತಾಗಳು ಮುಂಚಿನ ತುಘಲಕ ಸಂದಿ ಕಾಲದ ಸ್ವಲ್ಪ ಓರೆಯಾದ ಗೋಡೆಗಳನ್ನು ಹೋಲುತ್ತವೆ.

ಈ ಗೋರಿಯ ಮಧ್ಯ ಭಾಗದಲ್ಲಿ ಅಹಮದ ಶಹಾನ ಸಮಾಧಿಯಿದ್ದು, ಸಣ್ಣದಾದ ದಿಬ್ಬದಂತ ಕಾಣುತ್ತದೆ. ಇದರ ಮೇಲೆ ಕೇಸರಿ ಬಣ್ಣದ ಬಟ್ಟೆಯನ್ನು ಮುಚ್ಚಲಾಗಿದೆ. ಅದರ ಸುತ್ತಲೂ ಮರದ ತುಂಡುಗಳಿಂದ ಮಾಡಿದ ವಿನ್ಯಾಸದಾಕೃತಿಗಳನ್ನಿಡಲಾಗಿದೆ. ಇದರ ಮೇಲ್ಭಾಗದಲ್ಲಿ ಒಂದು ಬಟ್ಟೆಯನ್ನು ತೂಗು ಹಾಕಿದ್ದು, ಇದರ ಅಂಚು ಹಸಿರು ಬಣ್ಣದಿಂದ ಕೂಡಿದ್ದು ಮಧ್ಯಭಾಗದಲ್ಲಿ ಕೆಂಪನೆಯ ಬಣ್ಣ ಅನಂತರ ಬಿಳಿ ಬಣ್ಣ ಇದರ ಮಧ್ಯದಲ್ಲಿ ಕಂದು ಬಣ್ಣವಿದ್ದು, ಇದರ ಮೇಲೆ ಅಲಂಕೃತವಾದ ವಿನ್ಯಾಸಗಳನ್ನು ಚಿತ್ರಿಸಲಾಗಿದೆ.

ಈ ಗೋಡೆಯ ನಾಲ್ಕು ಕಡೆ ಕಮಾನು ಕಿಟಕಿಯಾಕಾರದ ಆವರಣದಲ್ಲಿ ತ್ರಿಕೋನಾಕಾರದ ನಾಲ್ಕು ಕಮಾನುಗಳ ಜೊತೆ ಅದರ ಪಕ್ಕದಲ್ಲಿ ಎರಡು ಕಡೆ ಒಂದೊಂದು ಸಣ್ಣದಾದ ತ್ರಿಕೋನಾಕಾರದ ಕಮಾನುಗಳನ್ನು ಕಾಣಬಹುದಾಗಿದೆ. ಚೂಪಾದ ರೇಖೆಗಳಿಂದ ಜೋಡಿಸಲ್ಪಟ್ಟ ಕಮಾನುಗಳ ಸಮಾಧಿಯ ಭಾಗದಲ್ಲಿ ರಚಿತವಾಗಿದ್ದು, ತಕ್ಷಣದಲ್ಲಿ ಎದ್ದು ಬೀಳುವಂತೆ ಭಾಸವಾಗುತ್ತದೆ. ಇದರ ಮಧ್ಯದ ಕೆಳಭಾಗದಲ್ಲಿ ಮರದ ಬಾಗಿಲನ್ನು ಸಹ ಇಟ್ಟಿರುವುದರಿಂದ ಇದರ ಒಳಗಡೆ ಪ್ರವೇಶ ಮಾಡಲು ಅನುಕೂಲವಾಗಿದೆ. ಕಮಾನಿನ ಕಿಟಕಿಗಳ ಸುತ್ತಲಿನ ಆವರಣದಲ್ಲಿ ಕಂಡು ಬರುವ ಚಿಕ್ಕದೊಂದು ಬಿಲ್ಲೆಗಳು ಹೊರತಾಗಿ ನಯವಾದ ಗಾರೆಯಿಂದ ಅಲಂಕರಿಸಲ್ಪಟ್ಟಿದೆ. ಈ ರೀತಿಯ ಕಮಾನುಗಳ ಬಳಕೆ ದಕ್ಷಿಣದಲ್ಲಿ ಮೊದಲು ಈ ಸ್ಮಾರಕದಲ್ಲಿಯೇ ಆಗಿದೆ.

ಈ ಕಮಾನಿನ ಮೇಲೆ ಚಿತ್ರಿಸಿರುವ ಚಿತ್ರಗಳಲ್ಲೂ ಹಲವಾರು ವಿನ್ಯಾಸಗಳನ್ನು ನಾವು ಕಾಣಬಹುದು. ಚೂಪಾದ ಕಮಾನಿನ ಎರಡು ಕಡೆ ವೃತ್ತಾಕಾರದಲ್ಲಿ ವಿನ್ಯಾಸವನ್ನು ರಚಿಸಲಾಗಿದೆ. ಚೂಪಾದ ಕಮಾನಿನ ಮಧ್ಯ ಭಾಗದಲ್ಲಿಯು ಒಂದು ವಿನ್ಯಾಸವನ್ನು ರಚಿಸಲಾಗಿದೆ. ಇದನ್ನು ನೋಡಿದಾಗ ಜಾಲಂದರಗಳಂತೆ ನಮಗೆ ಕಾಣಿಸುತ್ತದೆ. ಇಲ್ಲಿ ಕಂಡು ಬರುವ ಹಲವಾರು ರೇಖಾ ವಿನ್ಯಾಸಗಳನ್ನು ಬಣ್ಣದಿಂದ ತುಂಬಿದ್ದು ಕಪ್ಪು ಮಿಶ್ರಿತ ಕಂದು ಬಣ್ಣದಿಂದ ಕೂಡಿದ್ದಾಗಿದೆ. ಬಾಗಿಲಿನ ಮೇಲ್ಭಾಗದಲ್ಲಿ ಕಲಾ ವಿನ್ಯಾಸವನ್ನು ಚಿತ್ರಿಸಲಾಗಿದ್ದು, ಸಣ್ಣ ಸಣ್ಣ ವೃತ್ತಾಕಾರದ ವಿನ್ಯಾಸಗಳನ್ನು ಹೊಂದಿದೆ. ನಯವಾದ ರೇಖಾವಿನ್ಯಾಸವನ್ನು ಹೊಂದಿದೆ. ಮಧ್ಯ ಚೂಪಾದ ಕಮಾನ ಒಂದಿದ್ದು ಅದರ ಸುತ್ತಲೂ ಚೌಕಾಕಾರದ ಕಟ್ಟನ್ನೊಂದಿಗೆ ಕೂಡಿದೆ. ಮತ್ತು ಹವಾಮಾನದಿಂದಾಗಿ ಸಮಾಧಿಯ ಒಳಾಂಗಣ ಹಾಳಾಗಿದ್ದರೂ ಸಾಕಷ್ಟು ಮೂಲ ರಚನೆಗಳು ಹಾಗೆಯೇ ಉಳಿದಿವೆ. ಅಲಂಕಾರಿಕ ವೃತ್ತಗಳು ಮುಖ್ಯವಾಗಿ ನಾಲ್ಕು ಬಗೆಯ ಅಲಂಕಾರಿಕ ವಸ್ತು ಅಥವಾ ಶೈಲಿಯನ್ನು ಕಾಣಬಹುದು. ಅವುಗಳೆಂದರೆ ಜಾಮಿತಿಕ ಚಿತ್ರಗಳು ಕಾಲಿಗ್ರಾಫಿಕ್ ವಸ್ತು ಅರಬೆಸ್ಕಸ್ ಮತ್ತು ಹೂವು ಸಸ್ಯಗಳಿಗೆ ಸಂಬಂಧಿಸಿದ ದೃಶ್ಯ ವೈಭವವನ್ನು ಕಾಣಬಹುದಾಗಿದೆ.

ಅಲಂಕಾರಿಕವಾದ ಈ ಕಮಾನಿನ ಮೇಲೆ ಹಲವಾರು ವೃತ್ತಾಕಾರದ ವಿನ್ಯಾಸಗಳನ್ನು ರಚಿಸಿದ್ದು, ಇದನ್ನು ಹಸಿರು ಬಣ್ಣದಿಂದಲೂ ಹಾಗೂ ಕೆಂಪು ಹಳದಿ, ಕಪ್ಪು ಬಣ್ಣಗಳನ್ನು ಬಳಸಿಕೊಂಡು ಈ ವಿನ್ಯಾಸಗಳ ರಚನೆಯನ್ನು ಮಾಡಿದಂತೆ ಕಂಡು ಬರುತ್ತದೆ. ಪ್ರವೇಶ ದ್ವಾರದ ಕಮಾನಿನ ಎದುರು ಭಾಗವನ್ನು ಕೆಂಪು ವರ್ಣದಲ್ಲಿ ರಚಿಸಿದ್ದು, ಪರ್ಯಾಯ ಪೂರಿತ ಎಂಬ ಪದಕಗಳಿಂದ ಮತ್ತು ನಕ್ಷತ್ರ ಆಕಾರದ ಮಂಡಲಗಳಿಂದ ಅಲಂಕರಿಸಿದ್ದಾರೆ. ನಕ್ಷತ್ರ ಆಕಾರದ ಮಂಡಲಗಳು ಕ್ವಾಡಕಲರ್ ಬಣ್ಣಗಳಿಂದ ರಚಿತವಾಗಿದ್ದು, ತ್ರಿಭುಜದ ಎಲೆ ಹಾಗೂ ವಿವಿಧ ವರ್ಣಗಳ ಹೂಗಳುಳ್ಳ ಸಸ್ಯಗಳ ಜೊತೆ ಒಂದರ ನಂತರ ಒಂದು ಬಣ್ಣದಲ್ಲಿ ಚಿತ್ರಿಸಿ ಹೊಳಪನ್ನು ಕೆಂಪು ಛಾಯೆಯ ಮೇಲೆ ಬಂಗಾರ ವರ್ಣದಲ್ಲಿ ಅರಬೆಸ್ಕಸನಿಂದ ಅಲಂಕರಿಸಲಾಗಿದೆ. ತೆರವುಗಳು ಹೂವಿನಿಂದ ಅಲಂಕರಿಸಲ್ಪಟ್ಟಿದ್ದು. ಮಂಡಲಗಲು ೮ ಮೂರ್ತಿಗಳ ನಕ್ಷತ್ರ ಚಿತ್ರಗಳನ್ನು ಹೊಂದಿರುವ ೧೫ನೆಯ ಶತಮಾನದ ಪ್ರಿಂಟೆಡಂ ಹತ್ತಿಬಟ್ಟೆ ಮತ್ತು ನಂತರದ ಗುಜರಾತಿ ಪಟೋಲಾ ಇತರೆಗಳನ್ನು ನೆನಪಿಸುತ್ತವೆ.

ಇದರ ಮಧ್ಯ ಏಕಾಂಗಿಯಾಗಿ ಶಾಂತ ಮೂರ್ತಿಯಂತಿರುವ ಅಹಮದ ಶಾಹನ ಸಮಾಧಿ ಸ್ಥಳ ಭಾವಪೂರ್ಣವಾಗಿದ್ದು, ನೋಡಲು ಮನಮೋಹಕವಾಗಿ ಕಂಡುಬರುತ್ತದೆ. ಇದರ ಸುತ್ತ ನಾಲ್ಕು ಕಡೆ ಕಂಬ ನೆಟ್ಟಿದ್ದು ಅದಕ್ಕೆ ಬಟ್ಟೆಯನ್ನು ತೂಗು ಹಾಕಲಾಗಿದೆ. ಈ ಬಟ್ಟೆಯ ಮೇಲೆ ಹಲವಾರು ವಿನ್ಯಾಸಗಳನ್ನು ಮೂಡಿಸಿದ್ದು ಇಲ್ಲಿ ಶಾಂತತೆಯನ್ನು ನೋಡಬಹುದು.

ಈ ಕಮಾನಿನ ಗೋಡೆಗಳ ಮೇಲೆ ರಚಿಸಲಾಗಿರುವ ಈ ಚಿತ್ರಗಳು ಅಳಿವಿನ ಅಂಚಿಗೆ ಬಂದಿದ್ದು, ಇತ್ತೀಚೆಗೆ ಅಷ್ಟಾಗಿಕಂಡು ಬರುತ್ತಿಲ್ಲವಾದರೂ ಸಹ ಇದರ ಮರು ಲೇಪನವನ್ನು ಮಾಡಲಾಗಿದೆ. ಹಳೆಯನ್ನು ಹಾಗೆಯೇ ಉಳಿಸಿಕೊಂಡು ಬರುವ ಪ್ರಸಂಗ ಇದಾಗಿದೆ. ಇನ್ನೂ ಮುಂದೆಯು ಇದನ್ನೆ ಉಳಿಸಿಕೊಳ್ಳುವ ಪ್ರಯತ್ನ ನಮ್ಮದಾಗಬೇಕು.

೨. ಈ ಚಿತ್ರವು ಅಹಮದ ಶಾಹನ ಸಮಾಧಿಯ ಅಥವಾ ಅಲ್ಲಮಪ್ರಭು ದೇವಾಲಯದ ಒಳಗಡೆ ಪ್ರವೇಶ ಮಾಡುವ ಬಲ ಬದಿಯ ಮೂಲೆಯ ಮತ್ತು ಬಲಗೋಡೆಯೂ ಇದು ಮತ್ತು ಪ್ರವೇಶದ ಗೋಡೆಯು ಈ ಎರಡು ಗೋಡೆಯ ಕಮಾನುಗಳನ್ನು ಇಲ್ಲಿ ಅರ್ಧ, ಅರ್ಧ ಭಾಗ ತೋರಿಸಲಾಗಿದೆ. ಈ ಎರಡು ಕಮಾನಿನಲ್ಲಿ ಒಂದೇ ತೆರನಾದ ವಿನ್ಯಾಸಗಳಿವೆ. ಒಂದೇ ವಸ್ತುಗಳು ಒಂದೇ ಶೈಲಿಗಳು ಒಂದೇ ವರ್ಣಗಳು ಇವೆ.

ಈ ಮೇಲ್ಗೋಡೆಯ ಭಾಗದ ಮೂಲೆಯಲ್ಲಿ ಈ ಎರಡು ಗೋಡೆಗಳವರೆಗೂ ರಚಿತಗೊಂಡಿರುವ ಅಮೂರ್ತ ಕಲ್ಪನೆಗಳನ್ನು ಕುರಾನಿನ ವಾಕ್ಯಗಳೊಂದಿಗೆ ತೂಗಿಸಲ್ಪಟ್ಟಿವೆ. ತ್ರೈಮುರ ಇರಾನ ನಲ್ಲಿ ಕಾಲಿಗ್ರಾಫಿಕ್ ಶೈಲಿಯನ್ನು ಮಿತವಾಗಿ ಬಳಸಲಾಗಿದೆ. ಅವರು ಇಲ್ಲಿ ಮಧ್ಯದಲ್ಲಿ ಕಪ್ಪು ಬಣ್ಣದ ಕಲ್ಲಿನ ಮೇಲೆ ಅಕ್ಷರಗಳ ರೇಖೆಗಳು ಕಾಣುವ ಕೇಂದ್ರ ಪ್ರಸರಣ ರಚನೆಗಳಿಗೆ ಅಥವಾ ಅರಬೆಸ್ಕಸ ಶಾಸನ ಸುರುಳಿ ಗಳಿಗೆ ಹೆಚ್ಚಿನ

ಮಹತ್ವ ಕೊಟ್ಟಿದ್ದಾರೆ. ಇಂಥಹ ರಚನೆಗಳನ್ನು ಮೊಶಾದನ ದೂದಾರ ಮದ್ರಾಗಳಲ್ಲಿಯೂ ಕಾಣಬಹುದು. ಒಟ್ಟಾರೆ ಗುಮ್ಮಟದಲ್ಲಿ ಕಂಡು ಬರುವ ಎಲ್ಲಾ ಚಿತ್ರಗಳಿಗೂ ಸಾಂಪ್ರದಾಯಿಕ ಹಿನ್ನೆಲೆ ಇದೆ.

ಎರಡು ಕಮಾನುಗಳ ಮೇಲೆ ಕಪ್ಪು ಬಣ್ಣದ ಕಲ್ಲಿನ ಮೇಲೆ ಹೂ ಬಳ್ಳಿಗಳು ತಿಳಿಕೆಂಪು, ತಿಳಿನೀಲಿ, ಆಕಾರದ ಎಲೋ ವರ್ಣಗಳಿಂದ ಕೂಡಿದೆ. ಈ ಹಿಂದಿನ ಪುಟದಲ್ಲಿ ಇವುಗಳ ವರ್ಣನೆಯನ್ನು ಮಾಡಲಾಗಿದೆ. ಅವುಗಳ ಪಕ್ಕದಲ್ಲೊಂದೊಂದು ಪಟ್ಟಿಯಂತೆ ಕಂಡು ಬರುವ ಅದರ ಮಧ್ಯದಲ್ಲಿ ಬಿಳಿಯ ಬಣ್ಣದಿಂದ ಕೂಡಿದ ಅವುಗಳಲ್ಲಿಯೂ ಕೂಡಾ ಚೂಪಾದ ಕೇಶಗಳಿಂದ ವಿನ್ಯಾಸಗಳ ಡಿಸೈನಗಳು ಕಾಣುತ್ತವೆ, ಇವುಗಳು ಕೆಂಪು ಮತ್ತು ಕಪ್ಪು ಮಿಶ್ರಿತ ನೀಲಿ ಕಂದು ಎಲೋ ವರ್ಣಗಳನ್ನು ಬಳಸಲಾಗಿದೆ. ಇವುಗಳು ತ್ರೈಮಾರು ಶೈಲಿಗೆ ಹೋಲುತ್ತವೆ. ಒಂದರಲ್ಲಿ ತೋರಿಸಿದ ವಿನ್ಯಾಸಗಳು ವರ್ಣಗಳು ಮಾಧ್ಯಮಗಳು, ವಸ್ತುಗಳು ಅವುಗಳೇ ಮತ್ತೊಂದು ಕಮಾನಿನಲ್ಲಿಯೂ ಕೂಡಾ ತೋರಿಸಲಾಗಿದೆ.

ಇವುಗಳ ಮಧ್ಯದಲ್ಲಿ ಇರುವ ಅಮೂರ್ತ ಎಲೆಗಳಂತೆ ಕಂಡು ಬರುವ ವಿನ್ಯಾಸದಲ್ಲಿ ಈ ರಚನೆಯಲ್ಲಿ ಹೊರರೇಖೆಗಳು ಬಿಳಿ ಮಿಶ್ರಿತ ಹಳದಿ ಇಂದ ಎಳೆಯಲಾಗಿದೆ. ಒಳಗಿನ ಭಾಗವು ಪೂರ್ತಿಯಾಗಿ ಕಪ್ಪು ಬಣ್ಣದಿಂದ ತುಂಬಿದೆ. ಈ ಕಪ್ಪು ಬಣ್ಣದ ಮೇಲೆ ಮೇಲಿನ ಎಲೆ ಮತ್ತು ಕೆಳಗಿನ ಎಲೆಯಲ್ಲಿ ಕೇಸರಿ ವರ್ಣದಿಂದ ಒಂದೊಂದು ಕಮಲ ಹೂ ಅರಳುವಂತೆ ಚಿತ್ರಿಸಿದ್ದು, ಅವುಗಳ ಸುತ್ತಲೂ ಮದರಂಗಿ ಬಣ್ಣದ ಎಲೆಗಳು ಹರಡಿಕೊಂಡಿವೆ ಮತ್ತು ಕಪ್ಪು ಬಣ್ಣದ ಎಲೆಯಂತೆಯೇ ಅದರೊಳಗೆ ಮತ್ತೊಂದು ಅದೇ ಎಲೆಯ ಒಂದೇ ಬಣ್ಣದಿಂದ ಅಂದರೆ ತಿಳಿ ನೀಲಿಯ ಬಣ್ಣದಿಂದ ರೇಖೆಯನ್ನು ಎಳೆಯಲಾಗಿದೆ, ಈ ಎಲೆಯು ನೋಡಿದೊಡನೆ ತೆರೆದಿದ್ದ ಎಲೆಯೊಂದನ್ನು ಮುಚ್ಚಿಕೊಳ್ಳುವಂತೆ ಭಾಸವಾಗುತ್ತದೆ.

ಈ ವಿನ್ಯಾಸದ ಹೂ ಭಾಗವು ಪೂರ್ತಿ ಕೆಂಪು ಬಣ್ಣದಿಂದ ಲೇಪನವಾಗಿದ್ದು, ಅದರ ಮೇಲೆ ನಾಲ್ಕು ಮೂಲೆಗಳಲ್ಲಿಯು ಒಂದು ಬಳ್ಳಿಯ ಬೇರೆ ಇಲ್ಲಿ ಕಲಾವಿದನ ಮನಸ್ಸುಕೂಡಾ ವಿಶಾಲವಾಗಿದೆ. ಮತ್ತು ಅವನು ಇನ್ನು ಮುಂದೆ ಹೊಸ ಹೊಸ ರೇಖೆ ಹುಡುಕುವುದು ಎಂಬಂತೆಯೋ ಈ ಬಳ್ಳಿಯು ಹರಡಿಕೊಂಡಿದೆ. ಇಲ್ಲಿ ದಪ್ಪನೆಯ ಬೇರೊಂದಿಗೆ ತಿಳಿ ನೀಲಿ ಬಣ್ಣ ಲೇಪನವಿದೆ. ಮತ್ತು ಅಲ್ಲಿ ನಕ್ಷತ್ರಗಳಂತೆ ಭಾಸವಾಗುವ ಹೂಗಳು ಆಕಾರ ಎಲೋದಿಂದ ಕೂಡಿದೆ.

ಈ ವಿನ್ಯಾಸದ ಕೆಳಗೆ ಮತ್ತೊಂದು ಹೂ ಐದುದಳವನ್ನು ತೆರೆದು ಇನ್ನುಳಿದ ದಳಗಳು ಇಲ್ಲಿ ರಚನೆಯಾಗಿಲ್ಲ.

ಇದು ಅರ್ಧ ಹೂವಾಗಿ ಕಂಡು ಬರುತ್ತದೆ. ಈ ಹೂವು ಕಪ್ಪು ಮತ್ತು ಬಿಳಿ ಮಿಶ್ರಿತದಿಂದ ಪೂರ್ತಿಭಾಗವು ತುಂಬಿಕೊಂಡು ಅದರ ಹೊರ ರೇಖೆಯು ಬಿಳಿಯ ಬಣ್ಣದಿಂದ ದಪ್ಪವಾಗಿ ಎಳೆಯಲಾಗಿದೆ. ಈ ಹೂ ದೊಳಗೆ ಬಿಳಿಯ ಬಣ್ಣದಿಂದ ಹಲವು ರೇಖೆಗಳನ್ನು ಈ ಹೂವಿನ ಸೌಂದರ್ಯಕ್ಕಾಗಿ ರಚಿತಗೊಂಡಿವೆ. ಅದರಲ್ಲಿ ನಾಲ್ಕು ಬಿಳಿ ಮಿಶ್ರಿತ ಕೆಂಪು ಬಣ್ಣದಿಂದ ಹೂಗಳನ್ನು ನಾಲ್ಕು ದಳದ ರಚನೆಗೊಂಡಿವೆ.

ಮಧ್ಯದಲ್ಲಿ ಕಪ್ಪು ಕಲ್ಲಿನ ಮೇಲೆ ಸುಂದರವಾದ ಬರವಣಿಗೆಗಳು ಶ್ಲೋಕಗಳು ಬಿಳಿಯ ಬಣ್ಣದವುಗಳಾಗಿವೆ. ಇವುಗಳು ಅರಬ ಶೈಲಿಯ ಬರಹಗಳಾಗಿವೆ. ಇದರ ಕಳ ಗೋಡೆಯ ಭಾಗದಲ್ಲಿ ಹೊರ ಭಾಗವು ಪೂರ್ತಿಯಾಗಿ ಕಂದು ಕೆಂಪು ಬಣ್ಣದಿಂದ ಕೂಡಿದ್ದು. ಅದರ ಮೇಲೆ ಷಟಭುಜಾಕರತಿಗಳು ಕಪ್ಪು ಮಿಶ್ರಿತ ನೀಲಿ ವರ್ಣದಿಂದ ಲೇಪನವಾಗಿದೆ. ಅದೇ ಷಟಭುಜಾಕೃತಿಯಲ್ಲಿ ಸಣ್ಣದಾದ ಕುಂಚವನ್ನು ಬಳಸಿ ಹೂ ಗಳನ್ನು ರಚಿಸಿದ್ದು, ಅವುಗಳು ಹಳದಿ ಬಣ್ಣವನ್ನು ಕೂಡಿದೆ. ಇದೆ ತೆರನಾದ ಸಮಾಧಿಯ ಒಳಭಾಗದ ಪ್ರತಿಭಾಗದಲ್ಲೆಲ್ಲ ರಚನೆಯಾಗಿದೆ. ಆದರೆ ಇವು ಈಗ ಕೇವಲ ಒಂದು ಭಾಗದಲ್ಲಿ ಉಳಿದು ಇನ್ನೊಂದು ಭಾಗ ಸಂಪೂರ್ಣ ನಾಶವಾಗಿದೆ. ಮರೆಮಾಚಿದೆ. ಒಟ್ಟಾರೆ ಈ ಚಿತ್ರದಲ್ಲಿ ಕಂದುಗೆಂಪು, ದಟ್ಟದಾರ ನೀಲಿ, ಬಿಳಿ ಕೆಂಪು ಹಳದಿ, ಆಕಾರ ಹಳದಿ ಬಣ್ಣಗಳಿಂದ ಲೇಪಿಸಲಾಗಿದೆ.

ಕೆಳಗಡೆಯ ಪುಷ್ಪವು ದಟ್ಟ ಬಿಳಿಯ ವರ್ಣದಿಂದ ಹೊಂದಿರುವ ಹೊರರೇಖೆಯ ಪುಷ್ಪವು ಒಳಭಾಗದಲ್ಲಿ ಜಾಮಿತಿಯೊಂದನ್ನು ಹೊಂದಿರುವ ಬಿಳಿಯ ಬಣ್ಣಗಳು ಕೂಡಿವೆ. ಮತ್ತು ಒಂದೇ ಪಟ್ಟಿಯಿಂದ ಹೊರಟಿರುವ ಮೊಗ್ಗಿನಾಕಾರದ ಕಮಲವು ಆಕಾರ ಎಲ್ಲೋ ಬಣ್ಣವನ್ನು ಕೂಡಿವೆ. ಈ ಪುಷ್ಪದಲ್ಲಿನ ನಾಲ್ಕು ಮೊಗ್ಗುಗಳು ದಟ್ಟ ಬಿಳಿಯ ಬಣ್ಣದಿಂದ ಹೊರ ರೇಖೆಯನ್ನು ಎಳೆಯಲಾಗಿದ್ದು, ಒಳಭಾಗ ಹಿನ್ನೆಲೆಯ ಲೇಪನವು ದಟ್ಟ ಕೆಂಪು ಬಣ್ಣವನ್ನು ಹೊಂದಿದೆ ಮತ್ತು ಅದರೊಳಗೆ ತಿಳಿ ಕೆಂಪು ಬಣ್ಣದಿಂದ ಮತ್ತೊಂದು ಮೊಗ್ಗೆಯನ್ನು ತೋರಿಸಲಾಗಿದೆ. ಈ ಪುಷ್ಪದ ಒಟ್ಟು ಹಿನ್ನೆಲೆಯ ಲೇಪನವು ಒಂದು ಬಣ್ಣವಾಗಿದೆ. ಈ ಚಿತ್ರದಲ್ಲಿನ ಬಲ ಭಾಗದಲ್ಲಿನ ಪಟ್ಟಿಯಲ್ಲಿನ ಹಿನ್ನೆಲೆ ಲೇಪನವು ಬಿಳಿಯ ಬಣ್ಣವಾಗಿದ್ದು, ಅದರೊಳಗಿನ ವಿನ್ಯಾಸವು ಕಂದು ಕೆಂಪು ಬೂದು ಬಣ್ಣ ದಟ್ಟ ಕಪ್ಪು ಬಣ್ಣ ಹೊಂದಿದ ಪಟ್ಟಿ ಇದೆ. ಎಡ ಬದಿಯಲ್ಲಿನ ಪಟ್ಟಿಯ ಹಿನ್ನೆಲೆ ಲೇಪನವು ಕೂಡಾ ಹಳದಿ ಮಿಶ್ರಿತ ಬಿಳಿ ಇದು, ಎಲೆಗಳ ಹೊರ ರೇಖೆ ದಟ್ಟ ನೀಲಿಯದಾಗಿದ್ದು, ಪುಷ್ಪವು ಕೆಂಪು ಬಣ್ಣದಿಂದ ಕೋಡಿದೆ ಮತ್ತು ಎಲೆಗಳು ಕೆಂಪು ಮಿಶ್ರಿತ ಹಳದಿಯಿಂದ ಕೂಡಿದೆ. ಕೆಲ ಪುಷ್ಪಗಳು ಕೆಂಪು ಮತ್ತು ಬಿಳಿ, ಹಳದಿ ಮಿಶ್ರಿತ ಬಣ್ಣದಿಂದ ಕೂಡಿದೆ. ಇದರಲ್ಲಿ ಮೇಲೆ ಮತ್ತು ಕೆಳಗೆ ಇರುವ ಎಲೆಗಳಲ್ಲಿ ಮತ್ತೊಂದು ಎಲೆಗಳಿರುವ ಇವುಗಳಿಗೆ ತಿಳಿ ನೀಲಿ ಬಣ್ಣವನ್ನು ಲೇಪಿಸಲಾಗಿದೆ.

ಈ ಚಿತ್ರವು ಸಮಾಧಿಯ ಒಳಗಡೆ ಬಲ ಭಾಗದಲ್ಲಿದ್ದು ಇದು ಅಲಂಕರಿತ ಕೆಳಗೋಡೆಯ ಮೇಲೆ ದಟ್ಟ ಬಣ್ಣದ ಪಟ್ಟಿಯ ಮೇಲೆ ಬಿಳಿಯ ಬಣ್ಣದಲ್ಲಿ ನಿಮತುಲ್ಲಾಹ ಶಾಸನ ಬರೆದ ಕಾವ್ಯದ ಸಾಲುಗಳನ್ನು ಕೆತ್ತಲಾಗಿದೆ ಸಮಸ್ತ ಕಟ್ಟಡದ ತುಂಬೆಲ್ಲ ರಚಿತವಾದ ಸುಂದರ ಕಟ್ಟುಗಳನ್ನು ಅಕಾಶಕಾಯ ಮತ್ತು ಅವುಗಳನ್ನು ಅವುಗಳ ಪ್ರತಿಮಾರೇಖಾ ವೃತ್ತಗಳಿಂದ ಕೆಳಗೋಡೆಗಳನ್ನು ಮೇಲ್ಗೋಡೆಗಳಿಂದ ಗೋಡೆಯನ್ನು ಆಧಾರವಾಗಿದೆ, ಮತ್ತು ಓರಾನಿ ಆಫ್ ಟ್ರಾನ್ಸಿಸನ್ ಇಂದ ಗುಮಟ್ಟದಿಂದ ಬೇರ್ಪಡಿಸಲು ಬಳಸಲಾಗಿದೆ. ಕೆಳಗೋಡೆಯ ಮೇಲೆ ಕೆತ್ತಿರುವ ಪಟ್ಟಿಯನ್ನು ಮತ್ತು ಅವುಗಳ ಮೇಲೆ ಕೆತ್ತಿರುವ ಅಕ್ಷರಗಳನ್ನು ಹಲವು ಬಾರಿ ಪೇಂಟ ಮಾಡಿರುವುದು ಕಂಡುಬರುತ್ತದೆ. ಈ ಎಲ್ಲ ಕಟ್ಟಡಗಳ ಮೇಲೆ ಶಹನಿಮತುಲಾಹ ಬರೆದ ಕವನ ಮತ್ತು ವಿಚಾರಗಳನ್ನು ಲೇಪಿಸಲಾಗಿದೆ. ಇದಕ್ಕೆ ಒಂದೇ ಅಪವಾದವೆಂದರೆ ಮೇಲ್ಗೋಡೆ ಮತ್ತು

ಸ್ಥಿತ್ಯಾಂತರ ಗೋಡೆಯನ್ನು ಬೇರ್ಪಡಿಸುವ ಕಟ್ಟು, ಇದು ಇಡೀ ಗುಮ್ಮಟದಲ್ಲಿಯೇ ಅತಿ ಸುಂದರವಾದ ಕಟ್ಟಾಗಿದೆ.

ಇದು ತುಲ್ತ ಮತ್ತು ಕ್ಯುಫಿಕ್ ಅಭಿಲೇಖಗಳನ್ನು ಜೋಡಿಸುತ್ತದೆ. ಇದು ಬಂಗಾರದ ವರ್ಣದಲ್ಲಿದೆ ಪಟ್ಟಿಯನ್ನು ಎಳೆದು ಮತ್ತು ಅದರ ಮಧ್ಯದಲ್ಲೊಂದು ಇನ್ನೊಂದು ಪಟ್ಟಿಯನ್ನು ಎಳೆಯಲಾಗಿದೆ. ಕೇಂದ್ರಿಯ ವೃತ್ತಗಳ ಚಿತ್ರಾಲಂಕಾರವನ್ನು ಮಾಡಲಾಗಿದೆ. ಮಧ್ಯ ಪಟ್ಟಿಯಲ್ಲಿ ಬಂಗಾರ ವರ್ಣದಿಂದ ಬರೆದಿರುವ ಸಾಲುಗಳು ಓರಾನಿನಲ್ಲಿ ವಿವರಿಸಿದ ದೇವರನ್ನು ಮತ್ತು ಬಿಳಿವರ್ಣದಲ್ಲಿ ಇರುವ ಸಾಲುಗಳು ಶಹನಿಮತುಲ್ಲಾಹ ಬರೆದ ಕವನಗಳ ಸಾಳನ್ನು ಒಳಗೊಂಡಿದೆ. ಮಧ್ಯ ಪಟ್ಟಿಯ ಮೇಲಿರುವ ಕೋರಾನಿನಲ್ಲಿ ದೇವರ ಬಗೆಗಿನ ವಿವರಿಸಿದ ಸಾಲುಗಳ ಮೇಲಿನ ಪಟ್ಟಿಯಲ್ಲಿ ಚೌಕಾಕೃತಿಯ ರಚನೆಯು ಇದ್ದು ಅವು ಒಂದಕ್ಕಿಂತ ಒಂದು ಸ್ವಲ್ಪ ದೂರದಲ್ಲಿ ರಚನೆಯಾಗಿದ್ದು. ಇವುಗಳ ಮಧ್ಯದಲ್ಲಿ ಒಂದು ಷಟ್ಬುಜಾಕೃತಿಯು ಇದರ ಅಲಂಕಾರಕ ಚಿತ್ರವಿನ್ಯಾಸವನ್ನು ಮಾಡಿರಬಹುದೆಂದು ತಿಳಿದು ಬಂದು ಇದರ ಕಳಗೋಡೆ ಮತ್ತು ಕ್ಯಾಲಿಗ್ರಾಫಿಕ್ ಕಟ್ಟುಗಳ ನಡುವಿನ ದ್ವಾರ ಪ್ರವೇಶ ಎರಡು ಅಲಂಕಾರಿಕ ಅವೃತ್ತಿಗಳನ್ನು ಹೊಂದಿದೆ.

ಶೈಲಿಯಲ್ಲಿ ಈ ಚಿತ್ರವು ಕಿಟಕಿಯ ತೆರೆ, ಪರದೆಗಳಾಗಿ ಸಮಾಧಿ ಒಳಗೆ ಅಂತರರಾಷ್ಟ್ರೀಯ ಶೈಲಿಯು ೧೫ ನೇ ಶತಮಾನದಲ್ಲಿ ತೈಮೂರರ ಕೀತಾ ಖಜಾನೆಯಿಂದ ಭಾರತದ ಆಸ್ಥಾನಗಳಿಗೆ ಹರಡಿತು. ಒಂದು ಕಾಲದಲ್ಲಿ ವಿಹ್ರಾಬಗಳ ಒಳಗೋಡೆಗಳನ್ನು ಅಲಂಕರಿಸಿದ್ದ ಮಿಹ್ರಾಬೂಫ ಚಿತ್ರಗಳು ಸ್ವಲ್ಪ ಓರೆಕೋನೆಯೊಂದಿಗೆ ಉಳಿದುಕೊಂಡಿವೆ. ೧೪೪೯ರಲ್ಲಿ ಗ್ವಾಲಿಯರನಲ್ಲಿಯೂ ಕೂಡಾ ರಚಿತವಾದ ದೀಪಾಲಂಕೃತ ಕುರಾನ ಮೇಲೆ ಮತ್ತು ಸದ್ಯಕ್ಕೆ ಸದರುದ್ದೀನ ಅಗಾಖಾನ ಸಂಗ್ರಹದಲ್ಲಿ ಈ ರೀತಿ ರಚನೆಗಳನ್ನು ಗುರುತಿಸಬಹುದು. ಈ ದೀಪಾಲಂಕೃತ ವಿನ್ಯಾಸವು ಅಹಮದ ಷಾಹನ ಸಮಾಧಿ ಮಸಿದಿ, ಅಥವಾ ದೇವಸ್ಥಾನದಲ್ಲಿ ಪ್ರವೇಶ ಮಾಡುತ್ತಿರುವ ಒಳ ಗೋಡೆಯ ಮೇಲೆ ಚಿತ್ರವಾಗಿದ್ದು, ಇದು ಅಹಮದ ಷಾಹನಗೆ ಸಮಾಧಿ ಒಳಗಡೆ ಸದಾ ಉರಿಯುತ್ತಿರುವ ದೀಪದಂತೆ ಕಂಡು ಬಂದರು ಇದು ಷಡ್ಬುಜಾಕೃತಿಯ ಎಲೆಯಂತಿದೆ.

ಇದರ ದೀಪಾಲಂಕೃತದ ಜೊತೆ ಬೇಡ ಲ್ಯಾಂಪದಂತೆಯು ಪರಿಗಣಿಸಬಹಹುದು. ಈ ಲ್ಯಾಂಪ ಒಳಗೆ ವಕ್ರ ರೇಖೆಯೊಂದಿಗೆ ಸಸ್ಯಗಳು ಎಲೆಗಳು, ಹುಲ್ಲು ನಾಲ್ಕು ದಿಕ್ಕಿಗೆ ಹರಡಿಕೊಂಡಿದೆ. ಮತ್ತು ಅದರಲ್ಲಿಯೇ ನೀರಿನಂತೆ ಎದ್ದು ಕಾಣುವ ಅಂದರೆ ಚಲಿಸುತ್ತಿರುವ ನೀರಿನ ರೇಖೆಗಳು ರಚನೆಗೊಂಡಿವೆ. ಆ ನೀರಿನಲ್ಲಿಯು ಸಸ್ಯದ ರೇಖೆಯೊಂದಿಗೆ ವಿಶಾಲವಾದ ಒಂದು ವಾತಾವರಣವನ್ನು ಇಲ್ಲಿ ತೋರಿಸಲಾಗಿದೆ. ಈ ದೀಪಾಲಂಕೃತದ ಒಳಗೆ ಕಣ್ಣುಗಳು ಹಾಯಿಸಿದೊಡನೆ ನಮಗೆ ಗೋಚರಿಸುವುದು. ಎಲೆ ಬಳ್ಳಿಗಳು ಹರಡಿಕೊಂಡಿರುವುದು. ಅದರೊಳಗೆ ಚಿಕ್ಕ ಚಿಕ್ಕ ಹಾವುಗಳನ್ನು ತೋರಿಸಲಾಗಿದೆ. ದೀಪದ ಪ್ರವೇಶ ಬಲಗಡೆ ಬಳ್ಳಿಯ ಮೇಲೆ ಕುದುರೆ ಮುಖವೊಂದಿದ್ದು, ಅದರ ಒಟ್ಟು ದೇಹವು ಬಾತುಕೋಳಿಯು ನೀರಿನಲ್ಲಿ ಚಲಿಸುವಂತೆ ಕಂಡುಬರುತ್ತದೆ. ಮತ್ತೇ ಅದೇ ಬಾತುಕೋಳಿಯ ದೇಹವನ್ನು ಗಮನಿಸಿದರೆ. ಒಂದು ಪ್ರಾಣಿಯ ಮುಖ ಮತ್ತು ದೇಹ ಎರಡನ್ನು ಪ್ರತಿಬಿಂಬಿಸುತ್ತದೆ. ಅದರ ಮೇಲೆ ಹೋದಂತೆ ಒಂದು ದೊಡ್ಡದಾದ ಸರಪವೊಂದು ಕಂಡು ಅ

ಸರಪಿನ ತಲೆಯ ಮೇಲೆ ಎರಡು ಆಕಳು ಅಥವಾ ಎಮ್ಮೆಯ ಕೋಡು ತೋರಿಸಿದ್ದಾರೆ. ಅದರ ಸುತ್ತ ಮುತ್ತಲು ಚಿಕ್ಕ ಚಿಕ್ಕದಾದ ಸರದಿಗಳು ಕೂಡಾ ರಚನೆಗೊಂಡಿವೆ. ಕೋಡಿನ ಪಕ್ಕಕ್ಕೆ ಎರಡು ಕಡೆ ಎಲೆಗಳನ್ನು ತೋರಿಸಲಾಗಿದೆ. ಈ ಎಲೆಗಳು ಮರವೆಂದು ತಿಳಿಯುತ್ತದೆ. ಆ ಸರ್ಪ ತಲೆಯ ಕೋಡಿನ ಮಧ್ಯದಲ್ಲಿ ಎರಡು ಕಣ್ಣುಗಳನ್ನು ತೋರಿಸಲಾಗಿದೆ, ಮತ್ತು ಅದರ ಮೇಲೆ ನೆರಳಿಗಾಗಿ ಒಂದು ಮನೆಯ ಗುಡಿಸಲಿನ ಆಕಾರದ ಟೋಪಿಗೆಯೊಂದನ್ನು ರಚನೆಗೊಂಡು ಈ ಸನ್ನಿವೇಶ ನೋಡಿದರೆ ಇದು ಅಹಮದಷಾಹನು ಎಂದು ಸ್ಪಷ್ಟವಾಗುತ್ತದೆ.

ಕಮಾನಿನ ಕೆಳಗಿರುವ ಮತ್ತು ದ್ವಾರದ ಮೇಲಿರುವ ಗೋಡೆಯನ್ನು ಜ್ಯಾಮಿತಿಯ ಜಾಲಂದ್ರಗಳ ಮತ್ತು ಕೇಂದ್ರದಲ್ಲಿ ಒಂದು ದುಂಡಗಿನ ಪದಕಾಕಾರದ ವಸ್ತುವಿದ್ದು, ಅದರಲ್ಲಿ ವಿಸ್ತೃತ ಕೇಂದ್ರ ಪ್ರಸರಣದಿಂದ ಕೂಡಿದ ಅರಬೆಸ್ಕ ಚಿತ್ರಗಳನ್ನು ಹೊಂದಿರುವ ಎರಡು ಹಲಿಗೆಯನ್ನು ಹೊಂದಿದೆ.

ನಕ್ಷತ್ರಾಕರದ ಆಧಾರದ ಮೇಲೆ ರಚಿತವಾದ ಜ್ಯಾಮಿತಿಯ ಜಾಲಗಳನ್ನು ಇಲಖನೀದ ತೇದಿ ೧೨೫೬-೧೩೫೬ ಮತ್ತು ಮಾಮುಲ್ಕ ೧೨೫೦-೧೫೧೭ ಕಾಲದ ಜಾಲಗಳೊಂದಿಗೆ ಹೋಲಿಸಿಬಹುದು. ವಮಲ್ಕ ಕಾಲದ ಜ್ಯಾಮಿತಿಜಾಲಗಳ ಬಾಹ್ಯ ಸ್ವರೂಪ ೭, ೮, ೧೨ ಮತ್ತು ೨೪ ಮೂಲೆಗಳ ನಕ್ಷತ್ರಗಳ ಚಿತ್ರಗಳನನು ಹೊಂದಿವೆ. ಈಜಿಪ್ತ ಮತ್ತು ಸಿರಿಯಾ ಎರಡರಲ್ಲೂ ಮಾಮುಲ್ಕ ಶೈಲಿ ಎಷ್ಟು ಪರವಶಗೊಳಿಸಿತ್ತು ಎಂದರೆ ಅಲ್ಲಿ ಮಾಮುಲ್ಕ ಶೈಲಿಯನ್ನು ಬಿಟ್ಟು ಯಾವುದೇ ರಚನೆಗಳು ಕಂಡುಬಂದಿಲ್ಲಾ ಇಂಥಹ ನಕ್ಷತ್ರ ಜಾಲಗಳನ್ನು ಅವರು ಹಸ್ತ ಪ್ರತಿಗಳ ಮೇಲೆ ದೀಪ ಅಲಂಕಾರ, ಪುಸ್ತಕಗಳ ಕಟ್ಟುಗಳು ಕಟ್ಟಿಗೆ ಕೆತ್ತೆ, ಗಾಜುಲೇಪನ ಮತ್ತು ಸಿರಾಮಿಕ್‌ಗಳಲ್ಲೂ ಯಥೇಚ್ಚವಾಗಿ ಇದನ್ನು ಬಳಸಿಕೊಳ್ಳಲಾಯಿತು. ತೈಮೂರುಗಳು ಕೂಡಾ ಈ ನಕ್ಷತ್ರ ಜಾಲಗಳನ್ನು ಅಲಂಕಾರಕ್ಕಾಗಿ ಬಳಸಿಕೊಂಡರಾದರೂ ಪುಷ್ಪ ಅಲಂಕಾರ ಮತ್ತು ಜ್ಯಾಮಿತಿಯ ನಿರ್ಧಿಷ್ಟ ರಚನೆಗಳಲ್ಲಿ ಇದನ್ನು ಮರುವ್ಯಾಖ್ಯಿನಕೊಳ್ಳಪಡಿಸಿದರು. ಪ್ರವೇಶದ್ವಾರದ ಕಮಾನಿನ ಎದುರು ಭಾಗವನ್ನು ಕೆಲವು ವರ್ಣದಲ್ಲಿ ರಚಿಸಿದ್ದು ಪರ್ಯಾಯವಾಗುತ್ತಿರುವ ಪೋಲ್ ಎಂಡ್ ಪದಕಗಳಿಂದ ಮತ್ತು ನಕ್ಷತ್ರ ಆಕಾರದ ಮಂಡಲಗಳಿಂದ ಅಲಂಕರಿಸಿದ್ದಾರೆ.

ಬೀದರನಲ್ಲಿ ಟ್ರಿಫಾಯಿಲ್ ಚಿತ್ರಗಳನ್ನು ಉಳಿಸಿಕೊಂಡು ಅಪ್ರೊಂಟಿಡ ಎಲೆಗಳ ಬದಲಿಗೆ ಹೆಚ್ಚು ವಿಸ್ತೃತಗೊಂಡ ಕ್ಲಾಡ್ ಕಾಲರ್ ಶೈಲಿಯನ್ನು ಬಳಸಿಕೊಳ್ಳಲಾಗಿದೆ. ಈ ಕ್ಲಾಡ್ ಕಾಲರ್ ಶೈಲಿಯನ್ನು ಮುಂಗೋಲರು ಮತ್ತು ನಂತರದಲ್ಲಿ ತೈಮೂರರು ಬೆಳಸಿದರು ಈ ರಚನೆಗಳಿಗೆ ಹೊನ ಭಾಷ್ಯವನ್ನು ಅಟೋಯನ್ನರ ಪುಸ್ತಕ ಕಟ್ಟುಗಳ ಮೇಲೆ ಧಾರಳವಾಗಿ ಕಾಣಬಹುದು.

ಇದನ್ನು ವ್ಯಾಪಕವಾಗುವ ಬಳಸಿಕೊಂಡಿದ್ದಕ್ಕೆ ಸಾಕಷ್ಟು ನಿದರ್ಶನಗಳಿವೆ.

ಅಸ್ತೂರಿನಲ್ಲಿ ಕಂಡು ಬಂದಿರುವ ಇನ್ನಿತರ ಡಿಸೈನಗಳು ಅಟೋಮನ್ ಕಲೆಗೆ ಸಮಾನಂತರವಾಗಿ ಮೂಡಿ ಬಂದು ಈ ತರಹದ ಮಂಡಲದ ಚಿತ್ರಗಳು ೧೬ನೇ ಶತಮಾನದ ಸ್ಟಾರ್ ಅಶಕ ನೆಲ ಹಾಸುಗಳ ಮೇಲೆ ಕಂಡು ಬಂದಿವೆ. ಕಿಟಕಿಗಳ ಸುತ್ತ ಇರುವ ಕಮಾನು ಕಿಟಕಿಗಳು ೪ ಆಕಾರದ ಹೊರರೇಖೆಗಳಿಂದ

ದಟ್ಟ ಕೆಂಪು ವರ್ಣದ ಕಟ್ಟಡಗಳು ಕಪ್ಪು ಹಿನ್ನೆಲೆಯಲ್ಲಿ ಕ್ಲಾಡ್ ಕಾಲರ್ ರಚನೆಗಳಿಂದ ಅಲಂಕರಿಸಲ್ಪಟ್ಟಿದ್ದು, ಅ ಮೂಲೆಯು ಪದಕಗಳು ಬೂದು ಬಣ್ಣದಿಂದ ರಚಿತವಾಗಿದೆ. ಈ ಎರಡೂ ರಚನೆಗಳು ರಸಭರಿತ ಮತ್ತು ಮೈತುಂಬಿದ ಪುಷ್ಪ ವೃಕ್ಷದ ಅರಬೆಸ್ಕಸದಿಂದಲೂ ಮತ್ತು ತೆರೆಪುಗಳನ್ನು ಬಂಗಾರದ ಲೇಪನ ಮತ್ತು ವಿಭಿನ್ನ ಪತ್ರಗಳ ಮೋಟಿಫ್‌ಗಳು ಚದುರಿ ಹೋದ ಮತ್ತು ಓರೆಕೋರೋ ಚಲನೆಗಳನ್ನು ಅನುಸರಿಸಿವೆ. ಈ ಕಟ್ಟುಗಳು ಪ್ರತಿ ಗೋಡೆಯ ಅಂಚಿಗೆ ಕೊನೆಗೊಳ್ಳದೆ ಸಮಾಧಿಯ ಚೌಕದ ನಾಲ್ಕು ಗೋಡೆಗಳನ್ನು ಪ್ರತಿನಿಧಿಸುತ್ತದೆ. ಅಲ್ಲದೇ ಬಹುಶಃ ಇದು ಶಹಾನಿಮತುಲ್ಲಾಹನ ಸಾಲುಗಳು (ಮೇಲೋಡೆಯಲ್ಲಿ ಕೆತ್ತನೆ) ದೇಹ ಆಕಾಶ ಮತ್ತು ಆತ್ಮ ಸೂರ್ಯ ಎಂಬ ಹೇಳಿಕೆಯ ದೃಶ್ಯರೂಪವಾಗಿದೆ.

'H' ಆಕಾರದ ರಚನೆಗಳಲ್ಲಿಯೇ ಚೌಕ ಹಲಿಗೆಗಳಿದ್ದು, ನಕ್ಷತ್ರ ಮೋಟಿಫಗಳ ಜ್ಯಾಮಿತಿಯ ಜಾಲಂದ್ರಗಳನ್ನು ಮತ್ತು ಒಂದು ಚಿಕ್ ಚೌಕಾದ ಕ್ಯುಫಿಕ ಡಿಸೈನಗಳನ್ನು ಹೊಂದಿದ್ದು, ಮುಹಮದ್ ಎಂಬ ಅಕ್ಷರಗಳನ್ನು ಕಪ್ಪು ಮತ್ತು ನೀಲಿ ಅಕ್ಷರಗಳನ್ನು ಬಿಳಿ ಬಣ್ಣದಲ್ಲಿ ಚಿತ್ರಿಸಲಾಗಿದೆ. ಈ ಹಲಿಗೆ ಸ್ಪಷ್ಟವಾಗಿ ತ್ರೈಮಾರು ಮೂಲವನ್ನು ಪ್ರತಿನಿಧಿಸುತ್ತವೆ. ತುಸು ಮಂಕಾದ ಕಮಲ ಜಿ.ಕೆ.ಈ ನಕ್ಷತ್ರ ಆಕಾರ ಮಂಡಲ ಹೊಂದಿರುವ ನಾಲ್ಕು ದಿಕ್ಕಿನಡೆಗೆ ಹರಡಿರುವ ಎಲೆ ಆಕಾರದ ನಕ್ಷತ್ರ ಮತ್ತು ಅದರ ಸುತ್ತಲೂ ನಾಲ್ಕು ದಿಕ್ಕುಗಳಿಗೂ ರಚಿತಗೊಂಡಿರುವ ಮಧ್ಯದಲ್ಲಿ ವೃತ್ತಾಕಾರವನ್ನು ಚಿತ್ರಿಸಲಾಗಿದ್ದು, ಅದರ ಒಳಗೆ ಮಧ್ಯದ ಭಾಗದಲ್ಲಿ ಸೂರ್ಯಕಾಂತಿಯ ಹೂ ಇದ್ದಂತೆ ಇದೆ. ಇದನ್ನು ಕಂಡೊಡನೆ ನಿಜವಾದ ಅಂದಕಾರದ ಸೂರ್ಯಕಾಂತಿಯಹೂವನ್ನೇ ಇಟ್ಟಿರಬಹುದೆಂದು ಸೂಚಿಸುತ್ತದೆ. ಮತ್ತೇ ಅದಕ್ಕೆ ಹೊಂದಿಕೊಂಡು ಎಲ್ಲಾ ದಿಕ್ಕಿ ನೆಡೆಗೆ ಎಲೆಗಳು, ಹರಡಿಕೊಂಡು ಅದಕ್ಕೆ ಚಿಕ್ಕ ಚಿಕ್ಕ ಮತ್ತೆ ಅದೇ ತೆರೆನಾದ ಚಿತ್ರಗಳನ್ನು ರಚಿತಗೊಂಡಿವೆ. ಹೀಗೆ ನಾಲ್ಕು ಭಾಗದಲ್ಲಿಯೂ ನಾವು ನೋಡಬಹುದು ಈಗ ಮಧ್ಯದ ನಾಲ್ಕು ದಿಕ್ಕಿನೆಡೆಗೆ ಹರಡಿರುವ ಎಲೆ ಆಕಾರದಂತಿರುವ ವಿನ್ಯಾಸವು ಎಲೆಯ ಪಕ್ಕಕೊಂದೊಂದು ಲಂಬಕೋನವನ್ನು ರಚಿಸಿ ಅದರ ಮೇಲೆ ಊರಿತಿರುವ ದೀಪದಂತೆ ಕಂಡು ಬರುತ್ತದೆ. ಲಂಬಕೋನದಲ್ಲಿ ಅಮೂರ್ತ ಚಿತ್ರದಂತೆ ಎರಡು ಕಣ್ಣುಗಳ ಮತ್ತು ಚೌಕಾಕಾರದಂತಿರುವ ಮೂಗ್ಗನ್ನು ತೋರಿಸಿ ಇದು ಒಂದು ಅಮೂರ್ತ ಕಲೆಯಲ್ಲಿ ಗೊಂಬೆಯಂತೆ ಕಂಡುಬರುತ್ತದೆ. ಇದೇ ತರವು ನಾಲ್ಕು ಎಲೆಗಳಲ್ಲಿ ಒಂದೊಂದು ರಚಿತಗೊಂಡಿವೆ. ಈ ನಾಲ್ಕು ಎಲೆಗಳ ಮಧ್ಯ ಒಂದು ಸುಂದರವಾದ ಹೂವಿನ ವಿನ್ಯಾಸವಿದೆ. ಈ ಹೂ ದಳಗಳನ್ನು ಹೊಂದಿ ಚಿಕ್ಕ ಅರಳುತಿರುವ ಹೂವಿನ ಭಾಸವಾಗುತ್ತದೆ. ಮತ್ತು ಇದು ರಂಗೋಲಿಯ ಡಿಸೈನ ಅಂತಲು ಭಾಸವಾಗುತ್ತದೆ. ಈ ಚಿತ್ರದ ಹೊರ ಭಾಗವು ದಟ್ಟ ಕೆಂಪು ಬಣ್ಣವನ್ನು ಹೊಂದಿದೆ ಮತ್ತು ನಕ್ಷತ್ರಾಕಾರವನ್ನು ಹೊಂದಿದ ಸುತ್ತಳದ ಎಲೆಗಳು ಹೊರರೇಖೆಗಳನ್ನು ದಟ್ಟ ನೀಲಿ ಕಪ್ಪು ಮಿಶ್ರಿತವನ್ನು ಹೊಂದಿ ಅದಕ್ಕೆ ಮತ್ತೆ ಸಣ್ಣದಾರ ರೇಖೆಯಿಂದ ಹೊರ ರೇಖೆಯನ್ನು ಎಳೆದಿದ್ದಾರೆ. ಅದರ ಮಧ್ಯದಲ್ಲಿನ ಗೆರೆಯ ಗೋಡೆಯಂತೆ ಕಂಡು ಬರುವ ಬಿಳಿಯ ಬಣ್ಣದಿಂದ ತುಂಬಿದ್ದು, ಅದರ ಸುತ್ತಲೂ ಕಂದು ಕೆಂಪು ಬಣ್ಣದಿಂದ ತುಂಬಿದೆ. ಈ ಬಣ್ಣವನ್ನು ಎದ್ದು ಕಾಣಲು ಹೊರಭಾಗದಲ್ಲಿ ದಟ್ಟ ನೀಲಿ ಕಪ್ಪು ಮಿಶ್ರಿತ ಬಣ್ಣವನ್ನು ತುಂಬಿದೆ ಒಟ್ಟಾರೆ ಈ ಚಿತ್ರವು

ಇನ್ನು ಹೆಚ್ಚು ಸುಂದರವನ್ನಾಗಿ ಕಾಣಲು ಇಲ್ಲಿ ಹೆಚ್ಚಾಗಿ ಬಂಗಾರ ವರ್ಣದ ಬಣ್ಣವನ್ನು ತುಂಬಲಾಗಿದೆ. ಈ ಎಲೆಗಳ ಮಧ್ಯದ ಹೂವಿನಲ್ಲಿ ಹೊರಭಾಗವು ಬಂಗಾರ ಎಲ್ಲಾ ವರ್ಣದಿಂದ ತುಂಬಿದೆ ಇದರ ಮಧ್ಯದಲ್ಲಿ ಒಂದು ಬಿಳಿಯ ಬಣ್ಣದ ಚುಕ್ಕೆ ಇಟ್ಟು ಈ ಹೂವನ್ನು ಸದೃಢ ಜೀವಾಳ ಕಾಣುವಂತೆ ಇಲ್ಲಿ ಚಿತ್ರಕಲಾಕಾರನು ಚಿತ್ರಿಸಿದ್ದಾನೆ.

ಈ ವಿನ್ಯಾಸದಲ್ಲಿ ಹೊರಭಾಗದಲ್ಲಿ ನಾಲ್ಕುದಿಕ್ಕಿನಲ್ಲಿ ಇರುವ ಪುಷ್ಪಿಗೋಚವು ಒಂದನ್ನು ದೊಡ್ಡ ಜಿಲ್ಲೆಯೊಂದನ್ನು ಕಪ್ಪು ಮಿಶ್ರಿತ ಬಿಳಿಯ ಬಣ್ಣವನ್ನು ತುಂಬಿ ಅದರಲ್ಲಿ ಸೂರ್ಯಕಾಂತಿಯ ಹೂವು ಸೂರ್ಯಕಾಂತಿಯ ಹೂವಿನ ಬಣ್ಣವನ್ನೇ ತುಂಬಲಾಗಿದೆ. ಅದನ್ನು ಅಂಟಿಕೊಂಡು ಒಂದಕ್ಕೊಂದು ಹರಡಿರುವ ಬಿಳಿಯರೇಖೆಗಳು ಆಕಾರ ಎಲೆಯಿಂದ ಕೂಡಿದ್ದು, ಅಲ್ಲಲ್ಲಿ ಸಣ್ಣದಾದ ಪುಷ್ಪಗಳನ್ನು ರಚಿಸಿ ಅವುಗಳ ಹೊರಭಾಗವು ಬಂಗಾರ ವರ್ಣದಿಂದ ತುಂಬಿದ್ದು, ಮಧ್ಯದಲ್ಲೊಂದು ಚುಕ್ಕೆ ಇಡಲಾಗಿದೆ.ಪುಷ್ಪ ರೇಖೆಗಳು ದಟ್ಟ ನೀಲಿ ಕಪ್ಪು ಮಿಶ್ರಿತದಿಂದ ಕೂಡಿದೆ. ಎಲೆಗಳಿಂದ ಕೂಡಿದ ಪುಷ್ಪಗುಚ್ಚಗಳು ಕಮಾನು ಕಿಟಕಿಯ ಸುತ್ತಲಿನ ಆವರಣವನ್ನು ಸುಂದರಗೊಳಿಸುವೆ.

ಈ ಡಿಸೈಬ್ ಸಮಾಧಿಯ ಒಳಗೆ ಪ್ರವೇಶ ಮಾಡುವ ಬಲಕ್ಕೆ ಮೊದಲನೆಯ ಕಿಟಕಿಯೊಂದರ ಮೇಲೆ ರಚನೆಯಾಗಿದ್ದು ಈ ಡಿಸೈನಗಳ ವಿವಿಧ ಧಾತುಗಳು ವಕ್ರರೇಖೆ ಇಂದ ಕೂಡಿದ್ದು ಹೂವಿನಿಂದ ತುಂಬಿದ ಎಲ್ಲಾ ರೆಂಬೆಗಳು ಎಲ್ಲಾ ದಿಕ್ಕುಗಳಲ್ಲಿ ಹರಡಿಕೊಂಡು ರಚನೆಗೆ ಒಂದು ಅದ್ಭುತ ಗತಿ ಶೀಲತೆಯನ್ನು ಕೊಡುತ್ತದೆ, ಪರಿಣಾಮವನ್ನು ಹೆಚ್ಚು ಸ್ಪಷ್ಟ ಪಡಿಸಲು ಗಾಡ ವರ್ಣಗಳನ್ನು ಬಳಸಲಾಗಿದೆ. ಕಪ್ಪು ವರ್ಣದ ಹಿನ್ನೆಲೆಯಲ್ಲಿ ಪ್ರಧಾನವಾಗಿ ಬಂಗಾರ ವರ್ಣದ ಜತೆ ತಿಳಿ ಗುಲಾಬಿ ಕಂದು ಮತ್ತು ಬಿಳಿ ಬಣ್ಣದ ಛಾಯೆಯನ್ನು ಮಿತವಾಗಿ ಬಳಸಲಾಗಿದೆ. ಇದನ್ನು ರಚಿಸಿದ ಕಲಾವಿದ ಅತಿ ತೆಳುವಾದ ಕುಂಚವನ್ನು ಎಲೆ ಮತ್ತು ಪಕಳೆಗಳನ್ನು ಬಿಡಿಸಲು ಬಳಸಿದ್ದಾನೆ, ಮೂರು ಬಣ್ಣದ ವಿಭಿನ್ನ ಛಾಯೆಗಳನ್ನು ಅಥವಾ ವಿಭಿನ್ನ ಬಣ್ಣಗಳನ್ನು ಒಟ್ಟಾಗಿ ಬಳಸಿ ಎಲೆ ಮತ್ತು ಪಕಳೆಗಳನ್ನು ಎತ್ತಿ ತೋರಿಸಿದ್ದಾನೆ. ಮಧ್ಯದಲ್ಲಿ ಕಮಲದಂತೆ ಎಲೆ ಇರುವ ಎಲೆ ಇದ್ದು ಸುತ್ತಲೂ ತುಸು ಹೋಯ್ದಾಡುತ್ತಿರುವ ಎಲೆಗಳನ್ನು ಎಡ ಮತ್ತು ಬಲಭಾಗದಲ್ಲಿ ರಚಿಸಿದ್ದಾನೆ. ನಿಸ್ಸಂದೇಹವಾಗಿಯೂ ಈ ಕಲಾವಿದ ತೈಮೂರು ಕಲಾ ಶೈಲಿಯಲ್ಲಿ ಸಂಪೂರ್ಣ ಪರಿಣತಿ ಪಡೆದವನಾಗಿದ್ದಾನೆ. ಇದಕ್ಕೆ ಸಂವಾದಿಯಾದ ಅನೇಕ ರಚನೆಗಳನ್ನು ಹೊರತ ಚಿತ್ರಕಲೆ ಮತ್ತು ಹಸ್ತ ಪ್ರತಿಗಳಲ್ಲಿ ಕಾಣಬಹುದು.

ಜಾಲಾಂದ್ರಗಳು ಜಾಮಿತಿಗಳು, ನಕ್ಷತ್ರಗಳು, ಧಾರ್ಮಿಕ ಸಂಕೇತಗಳು, ಇತ್ಯಾದಿಗಳು ಒಳಗೊಂಡಿರುವ ಈ ಚಿತ್ರಗಳು ವಿನ್ಯಾಸವು ಅಲಮ ಪ್ರಭು ದೇವಾಲಯದ ಅಥವಾ ಅಹಮದ್‌ಶಾಹನ ಗೋರೆಯಲ್ಲಿ ಒಳಗೆ ಭಿತ್ತಿ ಮೇಲೆ ರಚಿತಗೊಂಡಿರುವ ಮೋಟಿಫ ಗೋರೆ ಒಳಗಡೆ ಪ್ರವೇಶ ಮಾಡುತ್ತಿದ್ದಂಗೆಯೇ ಪ್ರೇಕ್ಷಕರ ಕಣ್ಣಿಗೆ ನಮ್ಮ ಕಣ್ಣಿಗೆ ಗೋಚರಿಸುವುದು ಎದುರುಗೋಡೆಯ ಭಾಗದಲ್ಲಿ ಮೆಲ್ಗೋಡೆಯ ಮೇಲೆ ಕಂಡುಬರುತ್ತದೆ. ಇಲ್ಲಿ ನಕ್ಷತ್ರಗಳು, ಬಿಲ್ಲೆಗಳು, ಚೌಕಟ್ಟು, ಷಡ್ಭುಜಾಕೃತಿಗಳು, ನಕ್ಷತ್ರದಲ್ಲಿಯೇ ಹೂವಿನ ವಿನ್ಯಾಸಗಳು, ಕೆಂಪು,ಬಿಳಿ ಹಳದಿ ದಟ್ಟ ನೀಲಿ ಬಣ್ಣಗಳನ್ನು ಮತ್ತು ಬೂದು ಬಣ್ಣಗಳು ಇಲ್ಲಿ ಬಳಕೆಯಾಗಿದೆ.

ಇಲ್ಲಿ ಒಂದು ಚೌಕಾಕೃತಿಯನ್ನು ರಚಿಸಿದ್ದು, ಇದರ ಹೊರ ರೇಖೆಯು ದಪ್ಪವಾದ ಪಟ್ಟಿಯೊಂದನ್ನು ಎಳೆಯಲಾಗಿದೆ. ಮತ್ತು ಇದರ ಹೊರಗಡೆಯ ಸುತ್ತಲೂ ಕಪ್ಪು ಬಣ್ಣದ ಪಟ್ಟಿಯೊಂದು ಇದೆ. ಇದನ್ನು ನೋಡಿದರೆ ಇದರ ಸತ್ತಲೂ ಚೌಕಾಕಾರವಾಗಿರತಕ್ಕಂತ ಅಂಚುಗಳು ಒಳಗೆ ಹೋದಂತಿವೆ ಮತ್ತು ಅದರ ಒಳಗೆ ರಚಿತವಾಗಿರುವ ವಿನ್ಯಾಸದ ಡಿಸೈನಗಳು ಹೊರಗಡೆ ಬಂದು ಒಂದು ಬೋರ್ಡ್‌ನಲ್ಲಿ ಚಿತ್ರ ರಚನೆಮಾಡಿ ತೂಗು ಹಾಕಿದೆ ಎಂಬಂತೆ ಭಾಸವಾಗುತ್ತದೆ. ಆದರೆ ಇದು ಬಣ್ಣದಿಂದಲೇ ಹೊರಗೆ ಎದ್ದು ಬರುವಂತೆ ರಚನೆ ಮಾಡಿದ್ದಾರೆ. ಈ ಚೌಕಟ್ಟಿನಲ್ಲಿ ಜಾಲಾಂದ್ರೀಯಗಳಂತೆ ರಚನಾ ವಿನ್ಯಾಸಮಾಡಿದ್ದು, ಈ ಜಾಲೇಂದ್ರೀಯಗಳಿಗೆ ನಕ್ಷತ್ರಗಳು ಮತ್ತು ಷಡ್ಬುಜಾಕೃತಿಗಳನ್ನು ಬಳಸಲಾಗಿದೆ. ಇದರಲ್ಲಿ ಎಂಟು ದೊಡ್ಡ ಹೂಗಳಿವೆ. ಅವುಗಳು ತನ್ನ ಎಲ್ಲಾ ದಳಗಳನ್ನು ತೆರೆದುಕೊಂಡು ಅರಳಿದಂತಿವೆ. ಇವುಗಳು ಷಡ್ಬುಜಾಕೃತಿಗಳನ್ನು ಕೂಡದೆ.ಮತ್ತೆ ಇದೇತರೆನಾದ ೮ ಚಿಕ್ಕ ಹೂಗಳು ರಚನೆಮಾಡಲಾಗಿದೆ. ಈ ಹೂಗಳು ನಕ್ಷತ್ರದಂತೆಯ ಇದ್ದು ಇವುಗಳ ದಳಗಳು ತ್ರಿಕೋನವನ್ನು ಹೊಂದಿದೆ. ಈ ಷಡ್ಬುಜಾಕೃತಿ ಮತ್ತು ತ್ರಿಕೋನದಿಂದ ಹೂವನ್ನು ರಚಿತವಾಗಿದ್ದು, ಅವುಗಳಲ್ಲಿ ಒಂದೊಂದು ದುಂಡಾದ ಬಿಲ್ಲೆಗಳನ್ನು ಕೂಡಾ ರಚಿಸಲಾಗಿದೆ. ಮತ್ತು ಈ ಒಂದು ಚಿತ್ರದ ಮಧ್ಯಭಾಗದಲ್ಲಿ ಇಸ್ಲಾಂ ಧಾರ್ಮಿಕಗಳನನು ಕುರಿತು ಒಂದು ಸಣ್ಣದಾದ ಚೌಕಟ್ಟಿನಲ್ಲಿ ಸಾಂಕೇತಿಕಗಳನ್ನು ತೋರಿಸಿದ್ದಾರೆ. ಮತ್ತು ಈ ರೇಖಾವಿನ್ಯಾಸದ ಜಾಲಾಂದ್ರಿಯ ಚಿತ್ರದ ಹೊರಭಾಗದಲ್ಲಿ ಕೆಲವು ಡಿಸೈನ್‌ಗಳು ಕಂಡು ಬರುತ್ತವೆ. ಇಸ್ಲಾಂ ಧಾರ್ಮಿಕ ಸಂಕೇತಗಳೊಂದಿಗೆ ಅಹಮದ್ ಶಾಹನ ಸಮಾಧಿಯ ಷಡ್ಬುಜ ಆಕೃತಿಗಳಿಂದ ಹೂವನ್ನು ಸೃಷ್ಟಿಸಿ ಈ ಸಮಾಧಿಯ ಪರದಾ ಗೋಡೆಯ ಮೇಲೆ ಅಲಂಕರಿಸಿದ ಜಾಮಿತಿಯ ನಕ್ಷತ್ರಗಳು ನಾಲ್ಕು ಗೋಡೆಯ ಮೂಲೆಗಳಲ್ಲಿ ಒಂದೊಂದು ರಚಿತವಾಗಿದ್ದು, ಆದರೆ ಈಗ ಇವುಗಳು ಎರಡು ಗೋಡೆಗಳಲ್ಲಿ ಉಳಿದುಕೊಂಡು ಉಳಿದ ನಕ್ಷತ್ರಗಳು ನಾಶವಾಗಿವೆ.

ಈ ಜಾಮಿತಿಯ ಜಾಲಂದಿಗಳಿಂಥ ಕೂಡಿದ ನಕ್ಷತ್ರ ವಿನ್ಯಾಸವು ಚೌಕಟ್ಟಿನ ಹೊರ ರೇಖೆಯ ದಪ್ಪನೆಯದಾಗಿದ್ದು, ಇದು ಕೆಂಪು ಬಣ್ಣವನ್ನು ಹೊಂದಿದೆ. ಇದರ ಒಳಗಿನ ಚೌಕಟ್ಟು ಹೊರರೇಖೆಯ ಸಣ್ಣ ಕುಂಚವನ್ನು ಅದನ್ನು ಬಿಳಿಯ ಬಣ್ಣವನ್ನು ಲೇಪನೆ ಮಾಡಲಾಗಿದ್ದು, ಇದರ ಒಳಗಿನ ಭಾಗದಲ್ಲಿ ಷಡ್ಬುಜಾಕೃತಿಯಿಂದ ಹೂಗಳಂತೆ ರಚಿತವಾಗಿರುವ ಇವುಗಳು ಕೆಂಪು ಬಣ್ಣವನ್ನು ಕೂಡಿದ್ದು, ಅವುಗಳ ಮಧ್ಯದಲ್ಲೊಂದೊಂದು ತಿಳಿ ನೀಲಿಯ ಬಣ್ಣದಿಂದ ಗೋಲಾಕೃತಿಯ ಚುಕ್ಕೆಗಳನ್ನು ಇಡಲಾಗಿದೆ. ಅವುಗಳಿಂದಲೇ ಒಳಭಾಗದಲ್ಲಿ ತ್ರಿಕೋನಗಳಿಂದ ಒಂದು ಹೂವಿನ ಆಕೃತಿ ಸೃಷ್ಟಿಸಿದೆ. ಇವುಗಳು ದಟ್ಟ ನೀಲಿಯ ಬಣ್ಣವನ್ನು ತುಂಬಲಾಗಿದೆ. ಮತ್ತು ಆ ಹೂವಿನ ಮಧ್ಯದಲ್ಲೊಂದು ಪದಕ ಆಕಾರದ ಬಿಲ್ಲೆಯೊಂದನ್ನು ಆಕಾರ ಹಳದಿಯ ವರ್ಣವನ್ನು ಲೇಪಿಸಲಾಗಿದೆ. ಮತ್ತು ಈ ಎಲ್ಲಾ ಹೂಗಳಲ್ಲಿ ಮಿನುಗುವ ನಕ್ಷತ್ರಗಳು ಇದ್ದು, ಇವುಗಳು ದಟ್ಟ ಕಪ್ಪು ಮಿಶ್ರಿತ ನೀಲಯ ವರ್ಣವನ್ನು ಕೊಟ್ಟಿದ್ದಾರೆ. ಅವುಗಳ ಮಧ್ಯದಲ್ಲಿ ತಿಳಿ ನೀಲಿಯ ವರ್ಣದಿಂದ ಆರು ಚುಕ್ಕೆಗಳನ್ನು ಇಡಲಾಗಿದೆ.ಈ ಎಲ್ಲಾ ಡಿಸೈನಗಳಿಗೆ ಬಿಳಿಯ ಬಣ್ಣದಿಂದ ಹೊರ ರೇಖೆಗಳನ್ನು ಎಳೆದಿದ್ದಾರೆ. ಮಧ್ಯದಲ್ಲಿನ ಧಾರ್ಮಿಕ ಸಂಕೇತದ ನಕ್ಷೆಯ ಚೌಕಪಟ್ಟಿಯ ಹೊರ ರೇಖೆಯು ಬಿಳಿಯ

ಬಣ್ಣವಿದ್ದು ಅದಕ್ಕೆ ಹತ್ತಿರವೇ ಇನ್ನೊಂದು ಕಪ್ಪು ಬಣ್ಣದ ಪಟ್ಟಿಯನ್ನು ಎಳೆಯಲಾಗಿದೆ. ಇದರ ಹೊರ ಭಾಗವು ಬಿಳಿಯ ವರ್ಣದ ಲೇಪನವಿದ್ದು ಅದರಲ್ಲಿ ಕಪ್ಪು ಬಣ್ಣದಿಂದ ಸಾಂಕೇತಿಕಗಳನ್ನು ಸೂಚನೆಯನ್ನು ತೋರಿಸಿದ್ದಾರೆ. ಇನ್ನೂಈ ಒಂದು ರಾತ್ರಿಗಳ ಸೂಚನೆಯನ್ನು ತೋರಿಸಿದ್ದಾರೆ. ಇನ್ನೂ ಈ ಒಂದು ರಾತ್ರಿಗಳ ನಕ್ಷತ್ರ, ಹೂಗಳನ್ನೊಳಗೊಂಡಿರುವ ಮತ್ತು ಧರ್ಮದ ದೇವರಾಧನೆಯ ಹಿನ್ನೆಲೆಯ ಸಂಕೇತಗಳನ್ನೊಂದಿದ ಈ ಚಿತ್ರದ ಹೊರ ಭಾಗದಲ್ಲಿ ಇನ್ನೊಂದು ಕಪ್ಪು ಬಣ್ಣದ ಕಲ್ಲಿನ ಚೌಕಟ್ಟು ಕಟ್ಟಿದಂತೆ ಭಾಸವಾಗುವ ಮೋಟಿಫನ ಮೇಲೆ ಬಿಳಿಯ ಬಣ್ಣದ ಆರು ಲಂಭಕೋನ ಪಟ್ಟಿ ಇದದುದರಲ್ಲಿ ಆಕಾರ ಹಳದಿ ಮತ್ತು ಕಂದು ಕೆಂಪು ಹೊರ ರೇಖೆಗಳಿಗೆ ದಟ್ಟ ನೀಲಿಯ ಬಣ್ಣದಿಂದ ಜಾಮಿತಿಕ ಡಿಸೈನ್‌ಗಳು ರಚನೆಮಾಡಲು ಬಳಕೆ ಮಾಡಿದ್ದಾರೆ. ಅವುಗಳ ಮಧ್ಯದಲ್ಲೊಂದು ಚೀಟಿಯಾಕಾರದ ಚಿತ್ರವನ್ನು ರಚಿಸಿ ಅದಕ್ಕೆ ರೆಕ್ಕೆಗಳಿಗೆ ಕೆಂಪು ಮತ್ತು ಮಧ್ಯದ ಅದರ ದೇಹಕ್ಕೆ ಕಪ್ಪು ಬಣ್ಣವನ್ನು ಲೇಪನ ಮಾಡಿದ್ದಾರೆ. ಒಟ್ಟಾರೆ ಈ ಕಲಾ ಕೃತಿಯು ನೋಡಿದರೆ ನಮಗೆ ಆಕಾಶದಲ್ಲಿಯೇ ಹೂಗಳು, ನಕ್ಷತ್ರಗಳು ದೇವರನ್ನು ಆರಾಧನೆಗೋಸ್ಕರ ಹಾರಾಡುತ್ತಿರುವುದು ಮತ್ತು ಆ ಹೂಗಳನ್ನು ಕಂಡು ಅಲ್ಲಿ ಚಿಟ್ಟೆಗಳು ಬರುತ್ತಿರಬಹುದೆಂದು ಭಾಸವಾಗುತ್ತದೆ.

ಕಮಾನಿನ ಭಿತ್ತಿಯು ಅಲಂಕರಿಸಿಕೊಂಡ ವರ್ಣ ಲೇಪನವು ಹೊರಭಾಗದ ಭಿತ್ತಿಯು ಕೆಂಪು ಬಣ್ಣದಿಂದ ಕೂಡಿಕೊಂಡಿದೆ. ಈ ಬಣ್ಣದ ಮೇಲೆ ಎಲೆಗಳು ಮತ್ತು ಹೂವೊಂದನ್ನು ರಚಿಸಿದ್ದು, ಇಲ್ಲಿಯ ಎಲೆಗಳು ಹೊರಭಾಗವನ್ನು ಕಪ್ಪು ಬಣ್ಣದಿಂದ ತುಂಬಿ, ಅದರ ಹೊರಭಾಗವು ಬುದ್ಧ ಬಿಳಿ ಮಿಶ್ರಿತ ವರ್ಣದಿಂದ ರೇಖೆಯನ್ನು ಎಳೆಯಲಾಗಿದೆ. ಒಳಭಾಗ ಹೂಲಗಳು ಕೆಂಪು ಬಣ್ಣದಿಂದ ತುಂಬಲಾಗಿದ್ದು, ಹೊರ ರೇಖೆಗಳು ತಿಳಿನೀಲಿ ವರ್ಣದಿಂದ ಅಲಂಕರಿಸಲಾಗಿದೆ. ಎಲೆಯೊಳಗಿನ ಮಧ್ಯದ ಹೂವು ತಿಳಿ ನೀಲಿ ಬಣ್ಣದಿಂದ ಚಿತ್ರಿಸಲಾಗಿದೆ. ಈ ಎರಡು ಎಲೆಗಳ ಮಧ್ಯದಲ್ಲಿ ಒಂದು ನಕ್ಷತ್ರ ಆಕಾರದ ಹೂ ಇದ್ದು, ಇದು ಹೊರಬಣ್ಣವು ಬೂದು ಬಣ್ಣದಿಂದ ಲೇಪನಗೊಂಡು ಹೊರ ರೇಖೆಯು ತಿಳಿಬೂದು ಬಣ್ಣದಿಂದ ಎಳೆಯಲಾಗಿದೆ. ಈ ಹೂವಿನ ದಳದ ಎಲೆಯ ಒಳಗಡೆ ಮತ್ತೊಂದು ಎಲೆಯು ಹಿಪ್ಪೆ ಎಲೆಯ ಬಣ್ಣವನ್ನು ಲೇಪಿತಗೊಂಡಿದೆ. ಮತ್ತು ಅದರ ಒಳಗಡೆ ಇನ್ನು ಒಂದು ನವಿಲಿನ ಗೆರೆಯ ಆಕಾರದ ಎಲೆ ಇದ್ದು, ಇದು ತಿಳಿ ನೀಲಿಯ ಬಣ್ಣದಿಂದ ಅಲಂಕರಿಸಿಕೊಂಡಿದೆ. ಎಲ್ಲವುಗಳ ಮಧ್ಯ ಈ ಹೂವೊಂದು ತಿಳಿನೀಲಿಯ ಬಣ್ಣದಿಂದ ಎಲೆಗಳನ್ನು ಅಲಂಕರಿಸಿದ್ದಾರೆ. ಮತ್ತು ಅದರ ಹೊರಗಡೆ ಗಾಢವಾದ ಹಳದಿ ಬಣ್ಣದಿಂದ ರೇಖೆಗಳ ವಿನ್ಯಾಸವನ್ನು ತೋರಿಸಿದ್ದಾರೆ. ಇವುಗಳಿಗೆ ಚೌಕಟ್ಟನ್ನು ಹೊಂದಿದ ಪಟ್ಟಿಗಳ ಮೇಲೆಬಲಕ್ಕೆ ಮತ್ತು ಎಡಕ್ಕೆ ಐದೈದು ಲಂಬಕೋನದಲ್ಲಿ ರಚನೆಯಾಗಿದ್ದ ಈ ಪಟ್ಟಿಗಳು ಹೊರಭಾಗ ಕಪ್ಪು ಬಣ್ಣವನ್ನು ತುಂಬಿಕೊಂಡಿದೆ. ಇದರ ಒಳಭಾಗವು ಸರಳ ರೇಖೆ ಡಿಸೈನಗಳಿಂದ ಅಲಂಕೃತದ್ದಾಗಿದ್ದು, ಇವುಗಳ ತಿಳಿ ಬೂದು ಬಣ್ಣ ಮತ್ತು ತಿಳಿಗೆಂಪು ಬಣ್ಣಗಳ ಮೂಲಕ ರೇಖೆಗಳನ್ನು ಎಳೆಯಲಾಗಿದೆ. ಈ ಲಂಬಕೋನದ ಎಡಕ್ಕೆ ಮತ್ತು ಬಲಕ್ಕೆ ತಿಳಿ ಆಕಾರ ಹಳದಿ ಬಣ್ಣವನ್ನು ತುಂಬಿಕೊಂಡಿದೆ. ಇವುಗಳ ಮಧ್ಯದಲ್ಲಿ ಒಂದೊಂದು ನಕ್ಷತ್ರ ಆಕಾರದ ಹೂಗಳು ರಚಿತವಾಗಿದ್ದು, ಇದು ಕೆಂಪು ಬಣ್ಣದಿಂದ ತುಂಬಿಕೊಂಡು ಅದರಲ್ಲಿ ಮಧ್ಯ ಬಿಳಿ ಬಣ್ಣದಿಂದ

+ ಮತ್ತು x ಚಿಹ್ನೆಗಳನ್ನು ಎಳೆದಿದ್ದಾರೆ. ಈ ಒಟ್ಟಾರೆ ಕಲಾಕೃತಿ ಬಿಳಿ, ಕಪ್ಪು, ತಿಳಿಬೂದಿ, ತಿಳಿನೀಲಿ ಕೆಂಪು ಆಕಾರೆಲೋಗಳಿಂದ ಕೂಡಿದೆ.

### ೪.೯. ಆಪತ್ತು ಮತ್ತು ಸಂರಕ್ಷಣೆ

ಪ್ರಕೃತಿಯಲ್ಲಿನ ಒಂದು ವಸ್ತುವು ತನ್ನ ಸ್ಥಿತಿಯನ್ನು ಕಾಲಕ್ಕೆ ಅನುಗುಣವಾಗಿ ಕಳೆದುಕೊಳ್ಳುತ್ತಾ ಹೋಗುತ್ತದೆ. ಪ್ರಕೃತಿಯು ನಿತ್ಯ ಬದಲಾವಣೆಗಳನ್ನು ಕಂಡುಕೊಳ್ಳುವ ಸ್ವಭಾವಿಕ ಗುಣಗಳನ್ನು ಹೊಂದಿದೆ. ಎಂಬುವುದನ್ನು ಪ್ರಸ್ತುತ ಅಧ್ಯಯನದ ಭಿತ್ತಿ ಚಿತ್ರಗಳನು ನೋಡುವುದರಿಂದ ತಿಳಿದು ಬರುತ್ತದೆ. ಅವುಗಳೆಂದರೆ ಬೀದರ ಜಿಲ್ಲೆಯಲ್ಲಿನ ಅಸ್ಟೂರಿನ ಭಿತ್ತಿ ಚಿತ್ರಕಲೆಯನ್ನು ನೋಡಿದರೆ ಇವುಗಳ ಮೇಲಿನ ಸಿದ್ಧಾಂತಕ್ಕೆ ಹೊರತಾಗಿಲ್ಲ ಆದರೆ ಸೂಕ್ತ ಕ್ರಮಗಳನ್ನು ಅನುಸರಿಸುವುದರಿಂದ ಕೆಲವು ದಿನಗಳವರೆಗೆ ಕಲಾ ಸಂಪತ್ತನ್ನು ಉಳಿಸಿಕೊಳ್ಳಬಹುದಾಗಿದ್ದು ಅಸ್ಟೂರಿನ ಭಿತ್ತಿ ಚಿತ್ರಗಳು ೧೭-೧೮ನೇ ಶತಮಾನದಲ್ಲಿ ರಚಿಸಲಾಗಿದ್ದು, ನಾಲ್ಕಾರುಶತಮಾನಗತಿಸಿದರೂ ಸ್ವಲ್ಪ ಉತ್ತಮ ಮಟ್ಟದಲ್ಲಿವೆ. ಅಲ್ಲದೇ ನಿಧಾನವಾಗಿ ಅವನತಿಯತ್ತ ಸಾಗುತ್ತಿದ್ದು ಒಂದಲ್ಲ ಒಂದು ದಿನ ಕಣ್ಮರೆಯಾಗಿ ಬಿಡುವ ಸಾಧ್ಯತೆಗಳೆ ಹೆಚ್ಚು. ಇವುಗಳನ್ನು ಉಳಿಸಿಕೊಳ್ಳಲಾಗದರು ಕೂಡ ನಾಡಿನ ಸಂಸ್ಕೃತಿಯ ಆಸ್ತಿಯಾಗಿವೆ ಎಂದು ಮುಂದಿನ ಜನಾಂಗಕ್ಕೆ ಉಳಿಸಿಕೊಡುವುದು ಇದಕ್ಕೆ ಸಂಬಂಧಪಟ್ಟ ದೃಶ್ಯಕಲಾ ಸಂಶೋಧನ ವಿನ್ಯಾಸಗಳ ಕರ್ತವ್ಯ.

ಅಸ್ಟೂರಿನ ಸಮಾಧಿ, ಮಸೀದಿಗಳ ಒಳ ಭಾಗದಲ್ಲಿ ವರ್ಣಗಳಿಗೆ ಒದಗಿರುವ ಅಪತ್ತುಗಳು ಮತ್ತು ಅವುಗಳ ಸಂರಕ್ಷಣಾ ಕ್ರಮಗಳನ್ನು ಕುರಿತು ವ್ಯವಸ್ಥಿತವಾಗಿ ವಿಂಗಡಿಸಿ ಹೇಳುವುದು ಅಗತ್ಯವಾಗಿದೆ. ಅನೇಕ ಹಿರಿಯ ಸಂಶೋಧಕರ ಒಟ್ಟಾರೆ ಅಭಿಪ್ರಾಯ ದಡಿ ಚರ್ಚಿಸಿ ಭಿತ್ತಿ ಚಿತ್ರಗಳ ಆಪತ್ತುಗಳು ಮತ್ತು ಸಂರಕ್ಷಣಾ ಕ್ರಮಗಳನ್ನು ಕುರಿತು ವ್ಯವಸ್ಥಿತವಾಗಿ ವಿಂಗಡಿಸಿಕೊಂಡು ಅಸ್ಟೂರಿನ ಭಿತ್ತಿಯ ಸ್ಥಿತಿ ಗತಿಗಳಡಿಯಲ್ಲಿ ಚರ್ಚಿಸುವುದು ಸೂಕ್ತವೆಂದು ಪ್ರಸ್ತುತ ಭಿತ್ತಿ ಚಿತ್ರಗಳಿಗೂ ಸಂಬಂಧಿಸಿದೆ.

### ೪.೧೦. ಆಪತ್ತುಗಳು

ಸ್ವಾಭಾವಿಕ ಆಪತ್ತುಗಳಲ್ಲಿ ಭಿತ್ತಿಚಿತ್ರಗಳಲ್ಲಿ ಬದಲಾಗುವಂತಹ ಪರಿಕರಗಳಲ್ಲಿ ಮಾಧ್ಯಮ ಸತ್ವಕಚಿಯಾಗಿ ಭಿತ್ತಿಯೂ ಹಾಳಾಗುವದನ್ನು ಸ್ವಾಭಾವಿಕ ಆಪತ್ತು ಎನ್ನುವರು. ಪ್ರಾಕೃತಿಕ ಆಪತ್ತು ಪ್ರಕೃತಿಯಲ್ಲಿನ ಮಳೆ, ಗಾಳಿ, ಬೆಳಕು, ಬೆಂಕಿಯಿಂದ ಭಿತ್ತಿಚಿತ್ರಗಳು ಹಾಳಾಗುವುದು ಕಾಣಬಹುದು. ಗೋಡೆಯ ಹಿಂದೇ ಮಳೆ ನೀರು ಬೀಳುವುದರಿಂದ ಗೋಡೆ ತೇವಾಂಶದಿಂದ ಕೂಡಿರುತ್ತದೆ. ಆದ್ದರಿಂದ ಜಿನುಗುವ ನೀರಿನಿಂದ ಭಿತ್ತಿ ಚಿತ್ರಗಳು ಹಸುರಾಗಿ, ಅಥವಾ ನೀರಿನೊಂದಿಗೆ ರಾಸಾಯನಿಕ ಬಳಸಿ ತೊಳೆಯುವುದರಿಂದಲೂ ಸಹ ಭಿತ್ತಿಚಿತ್ರಗಳು ಹಾಳಾಗುತ್ತವೆ. ಸಮಾಧಿಯಲ್ಲಿ ಹಾಕುವ ಬೆಂಕಿಕೆಂಡದಿಂದ ಕಪ್ಪುಕಲೆ ಉಳಿದು ಭಿತ್ತಿಚಿತ್ರದ ಬಣ್ಣ ಬದಲಾಗಿ ಹಾಳಾಗುವದು ನೋಡುತ್ತೇವೆ. ಗಾಳಿಯಿಂದ ಬೀಸುವ ಧೂಳಿನ ಕಣಗಳಿಂದ ಹಾಳಾಗುತ್ತವೆ. ಅಷ್ಟೂರಿನ ಭಿತ್ತಿಚಿತ್ರಗಳು ಗೋಡೆಯ ಎರಡು ಭಾಗದಲ್ಲಿನ ಚಿತ್ರಗಳು ಮುಸುಕಾಗಿರುವುದನ್ನು ಕಾಮಬಹುದು.

ಕಣ್ಣಿಗೆ ಕಾಣದೆ ಇರುವಂತಹ ಅನೇಕ ಕೀಟಗಳು ಹಾಗೂ ಜೇನುನೊಣ, ಜೇಡ, ಸೊಳ್ಳೆ, ಇತ್ಯಾದಿಗಳು ಭಿತ್ತಿಚಿತ್ರದ ಮೇಲೆ ಕುಳಿತುಕೊಂಡಾಗ ಅವುಗಳು ಕಾಲಿನ ಅಂಟಿನಿಂದ ಈ ಚಿತ್ರಗಳು ತನ್ನ ಹೊಳಪು ಕಳೆದುಕೊಳ್ಳುವವು.

**ಸಂರಕ್ಷಣೆ ಮಾಡುವುದು**

ದೀಪದ ಹೊಗೆಯಿಂದ ಸೃಷ್ಟಿಗೊಂಡ ಕಾಡಿಗೆಯು ರಾಸಾಯನಿಕ ದ್ರವ್ಯಗಳಿಂದ ತೊಳೆಸುವದು. ವಿಡಿಯೋ ಚಿತ್ರಣ ಮಾಡಿ ದಾಖಲಿಸಿಟ್ಟುಕೊಂಡಿರಬೇಕು. ಭಿತ್ತಿಚಿತ್ರ ಪುನಃ ರೂಪಿಸುವದು ಪರಿಣಿತಿವುಳ್ಳ ಕಲಾವಿದರನ್ನು ಬಳಸಿಕೊಂಡು ಕೆಲವು ಹಳೆಯ ನೈಸರ್ಗಿಕ ಬಣ್ಣಗಳನ್ನು ತಯಾರಿಸಿ ಬಣ್ಣಗಳ ಲೇಪನ ಮಾಡುವುದು. ಚಿತ್ರಗಳನ್ನು ಯಥಾವತ್ತಾಗಿ ಸೆರೆಹಿಡಿಯಬಹುದು. ಚಿತ್ರಗಳ ಮೂಲ ಸ್ವರೂಪ ಉಳಿಸಲು ಒಂದು ಸಣ್ಣ ಪ್ರಯತ್ನ ಮಾಡಬಹುದು. ವಿಡಿಯೋದಿಂದ ಸಂಗ್ರಹಿಸಿದ ಚಿತ್ರಗಳನ್ನು ಸ್ಲೈಡ್ ಶೋ ಮಾಡುವುದರಿಂದ ಜನರಿಗೆ ಅಲ್ಲಿ ಸಣ್ಣಾಗಿರುವ ಚಿತ್ರಗಳು ಸಿನಿಮಾ ಮಾದರಿಯಂತೆ ತೋರಿಸಲು ಸಾಧ್ಯ. ಈ ವಿಧಾನದಿಂದ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಕೊಂಡೊಯ್ಯಲು ಹಾಗೂ ದಾಖಲಿಸಿಡಲು ಅನುಕೂಲವಾಗುತ್ತದೆ. ಹೀಗೆ ಈ ಚಿತ್ರಗಳು ಮುದ್ರಣದ ಮೂಲಕ ಕಲಾಭಿಮಾನಿಗಳಿಗೆ ಹಾಗೂ ಜನಸಾಮಾನ್ಯರಿಗೂ ಸಹ ಪರಿಚಯಿಸಿದಂತಾಗುತ್ತದೆ.

* * *

ಉರ್ದು ಅಕ್ಷರ ವಿನ್ಯಾಸ



ಹುಲಿಯ ಚಿತ್ರ





ಭಿತ್ತಿ ಚಿತ್ರಕಲೆ



ಉರ್ದು ಅಕ್ಷರ ವಿನ್ಯಾಸ



ಅಷ್ಟೂರಿನ ಭಿತ್ತಿ ಚಿತ್ರಕಲೆ





ಅಪ್ಪುರಿನ ಮೇಲ್ಚಾವಣಿಯ ಭಿತ್ತಿಚಿತ್ರಕಲೆ



ರಂಗಿನ ಮಹಲ ಮೇಲ್ಚಾವಣಿಯ ಭಿತ್ತಿಚಿತ್ರಕಲೆ





ರಂಗಿನ ಮಹಲಿನ ಭಿತ್ತಿ ಚಿತ್ರಗಳು



ರಂಗಿನ ಮಹಲಿನಲ್ಲಿರುವ ಕಟ್ಟಿಗೆ ವಿನ್ಯಾಸಗಳು

ಅಧ್ಯಾಯ - ಐದು

# ಬೀದರ ಜಿಲ್ಲೆಯ ಸಂಕೀರ್ಣ ಚಿತ್ರಕಲೆ

ಸಂಕೀರ್ಣ ಮಾಧ್ಯಮದ ಚಿತ್ರಕಲೆಯಲ್ಲಿ ಬೀದರಿನ ಬಿದ್ರಿಕಲೆ ಸುಂದರ ಅಲಂಕಾರಿಕ ಅಕ್ಷರ ವಿನ್ಯಾಸ, (ಕ್ಯಾಲಿಯೋಗ್ರಾಫಿ) ಚಿತ್ರಕಲೆಯೂ ಬೆಳೆದು ಬಂದ ಬಗೆಯನ್ನು ಇಲ್ಲಿ ವಿವೇಚಿಸಲಾಗಿದೆ.

ಇಸ್ಲಾಂ ಸಂಸ್ಕೃತಿಯಲ್ಲಿ ಅಷ್ಟೊಂದು ಮಹತ್ವ ಪಡೆಯದೇ ಇವರು ರಂಗವೇ ಶಿಲ್ಪಕಲೆ, ಇಸ್ಲಾಂ ಧರ್ಮ ನಿರಾಕಾರವಾದ ಏಕದೇವೋಪಾಸನೆಯನ್ನು ಬೋಧಿಸುವುದಲ್ಲದೇ ವಿಗ್ರಹಾರಾದನೆಯನ್ನು ನಿಷಿದ್ಧಗೊಳಿಸಿರುವದರಿಂದ ಎಲ್ಲಾ ತರಹದ ಕೆತ್ತನೆ ಕೆಲಸವನ್ನು ದೂರವಿರಿಸಿ ಮಸೀದಿಯ ಪರಿಸರವು ನಿರ್ದೇಶನ ಶಿಕ್ಷಣ ಮತ್ತು ಸಂಸ್ಕೃತಿಯ ಕೇಂದ್ರಬಿಂದುವಾಗಿ ಪರಿವರ್ತನೆಗೊಂಡಿತು. ಧರ್ಮಬೋಧನೆ ಮತ್ತು ಶಿಕ್ಷಣ ನೀಡುವ ಮದರಸಾಗಳು, ಪುಸ್ತಕ ಭಂಡಾರ, ಆಡಳಿತ ನಿರ್ದೇಶನಾಲಯ ಕೂಡಾ ಅಲಂಕಾರ ಮತ್ತು ಆರಾಧನಾಲಯವಾಗಿ ಮಹತ್ವ ನೀಡುವ ನವೀನ ಯೋಜನೆಗಳು ಕ್ರಮೇಣ ಬೆಳೆಯತೊಡಗಿದವು. ಇಸ್ಲಾಮಿಕ್ ವಾಸ್ತು ಶಿಲ್ಪವು ಅಥವಾ ಶಿಲೆಯಲ್ಲಿ ಕೆತ್ತನೆಯ ಕೆಲವು ವಿಶೇಷತೆಗಳನ್ನು ಗಮನಿಸಬಹುದು.

೧. ಪ್ರತಿಮೆಗಳಾಗಲಿ ವಿಗ್ರಹಗಳಾಗಲಿ ಮುಸ್ಲಿಂ ವಾಸ್ತುಶಿಲ್ಪದಲ್ಲಿಲ್ಲ.

೨. ಅಲಂಕಾರಿಕ ಕೆತ್ತನೆಗಳು ಮಾನವ ಅಥವಾ ಪ್ರಾಣಿ ಜೀವನಕ್ಕಾಗಲೀ ಸಂಬಂಧಪಡುವ ದೃಶ್ಯಗಳಿಗಿರುವುದಿಲ್ಲ.ಬದಲಾಗಿ ಸಾಂಕೇತಿಕ ಚಿತ್ರಗಳಿರುತ್ತವೆ.

೩. ವೇದಿಕೆಗಳು, ಕಮಾನುಗಳು, ಮಿನಾರಗಳು, ಗುಮ್ಮಟಗಳು ಸಾಮಾನ್ಯವಾಗಿರುತ್ತವೆ.

## ೫.೧. ಬೀದರ್‌ನ ಬಿದ್ರಿಕಲೆ

ಶಿಲಾಯುಗದಿಂದಲೂ ಬಿದ್ರಿಕಲೆಯ ಪ್ರಕಾರ ಕಾಣಿಸುತ್ತದೆ. ಮುಂದಿನ ಯುಗದಲ್ಲಿ ಕಲೆಯು ಹಂತ ಹಂತವಾಗಿ ಬದಲಾವಣೆ ಹೊಂದಿರುವುದು ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ಮಣ್ಣಿನ ಮಡಕೆಗಳ ಮೇಲೆ ಲೋಹದ ವಸ್ತುಗಳ ಮೇಲೆ ಚಿತ್ತಾರಗಳನ್ನು ನಕ್ಷೆ ಬಿಡಿಸುವ ಕಲೆಯನ್ನು ಮಾನವ ಬಹು ಹಿಂದೆಯೇ

ಬಳಸಿಕೊಂಡಿದ್ದ. ಇದು ಮಾನವ ವಿಕಾಸದ ಸಂಕೇತವಾಗಿ ರಾಜಾಶ್ರಯದಲ್ಲಿ ಈ ಕಲೆಗಳು ಹುಲುಸಾಗಿ ಬೆಳೆದು ಜನ ಮುನ್ನಣೆಗೊಳಿಸಿವೆ. ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದ ಕಳಚೂರಿ ಅರಸರ ಕಾಲದಲ್ಲಿ ವಿವಿಧ ಪರಿಕರಗಳ ಮೇಲೆ ಅಲ್ಲದೇ ಕಬ್ಬಿಣದ ವಸ್ತುಗಳ ಮೇಲೆ ಬೆಳ್ಳಿ, ಬಂಗಾರ ಲೇಪಿಸುವ ಹಾಗೂ ಚಿತ್ತಾರ ಕೆತ್ತಿ ಅದರಲ್ಲಿ ಕೊಡಿಸುವ ಕಲೆ ಜಾರಿಯಲ್ಲಿದ್ದು ಕಂಡು ಬರುತ್ತದೆ.

ಬ್ರಿದಿಕಲೆಯ ತಂತ್ರ, ಕೌಶಲ್ಯ ಮತ್ತು ನಿರ್ಮಾಣ ವಿಧಾನಗಳನ್ನು ಕುರಿತು ಚರ್ಚಿಸುವುದಕ್ಕಿಂತ ಮೊದಲು ಅದರ ಹೆಸರು ಮತ್ತು ಉತ್ಪತ್ತಿಯ ಬಗೆಗೆ ನಮಗೆ ದೊರೆವ ಆಕಾರಗಳನ್ನು ಗಮನಿಸಬಹುದು. ಸುಮಾರು ೮೦೦ ವರ್ಷಗಳಿಂದ ಬೆಳೆದು ಬಂದ ಸಂಪ್ರದಾಯದ ಪ್ರಕಾರ ದಕ್ಷಿಣದ ಬಹುಮನಿ ವಂಶದೊಂದಿಗೆ ಬಿದ್ರಿಕಲೆಯ ಸಂಬಂಧವಿದೆ. ಬಾಯಿಯಿಂದ ಬಾಯಿಗೆ ಹರಡುತ್ತ ಹೋದಂತೆ ಹೆಚ್ಚಿನ ಅಂಶಗಳು ಸೇರ್ಪಡೆಯಾಗುವುದುಂಟು. ಈ ಬಗೆಗಿನ ವಿವರಣೆಯು ಸಾಕಷ್ಟು ಗೋಜಲಾಗಿದೆ.

ಒಂದು ಸಂಪ್ರದಾಯದ ಪ್ರಕಾರ ಬಿದ್ರಿಯ ಕಲಾತಂತ್ರವು ಇರಾನ್‌ದಿಂದ ಇರಾಕ್‌ನ ಮೂಲಕ ಬಹುಮನಿ ರಾಜ್ಯವನ್ನು ಬಂದು ಸೇರಿತು. ಇದನ್ನು ಭಾರತಕ್ಕೆ ತಂದವರು ರಾಜಸ್ತಾನ ಇರಾನ್ ದಿಂದ ಧರ್ಮ ಪ್ರಚಾರಕ್ಕೆ ಬಂದ ಸೂಫಿ ಖ್ವಾಜಾ ಮೋಯಿನುದ್ದೀನ್ ಹಸನಚಿಸ್ತಿ ಕ್ರಿ.ಶ.೧೧೯೨ ಆ.ಹಿ.೫೮೭ನಲ್ಲಿ ಅವರ ಮೂಲಕ ಇದು ಮೊದಲಿಗೆ ಅಜ್‌ಮೀರನ್ನು ಪ್ರವೇಶಿಸಿತು. ಅಲ್ಲಿಂದ ಅದು ಬಿಜಾಪುರವನ್ನು ಪ್ರವೇಶಿಸಿತು.

ಅನೇಕ ವಿದ್ವಾಂಸರು ಬಿದ್ರಿಕಲೆಯ ಬಗ್ಗೆ ಹಲವು ರೀತಿಯಲ್ಲಿಉಲ್ಲೇಖಿಸಿದ್ದಾರೆ.ಬಿದ್ರಿ ಕುಶಲಕಲೆಯು ಬೀದರದಲ್ಲಿ ಮೊಟ್ಟಮೊದಲಿಗೆ ಪರಿಚಯಿಸಿದ್ದು, ೧೫ನೆಯ ಶತಮಾನದ ಆರಂಭದಲ್ಲಿಯೇ ಎನ್ನಬಹುದು ಬಹಮನಿ,ಸುಲ್ತಾನ ಅಹಮದ ಶಹವಲಿ ಬಹಮನಿ (ಕ್ರಿ.ಶ.೧೪೨೨-೧೪೩೬) ತನ್ನ ರಾಜಧಾನಿಯನ್ನು ಕಲಬುರ್ಗಿಯಿಂದ ಬೀದರಗೆ ವರ್ಗಾಯಿಸಿದಾಗ ರಂಗೀನ ಮಹಲ ಹಾಗೂ ಅಷ್ಟೂರಿನ ಭಿತ್ತಿ ಚಿತ್ರಗಳು ಇತರ ಕಲಾತ್ಮಕ ಕಟ್ಟಡಗಳನ್ನು ಕಟ್ಟಿಸಲು ಇರಾನ್‌ನಿಂದ ಕುಶಲಕರ್ಮಿಗಳನ್ನು ಕರೆಸಿದ್ದ ಅವರಲ್ಲಿ ಅಬ್ದುಲ್ಲಾ ಬಿನ್ ಖೈಸರ್ ಎಂಬಾತ ಸತುವಿನ ಮಿಶ್ರಲೋಹದ ಮೇಲೆ ಚಿನ್ನದ ಕುಸುರಿ ಕೆಲಸವನ್ನು ಮಾಡಿ ಸುಂದರ ಕಲಾತ್ಮಕ ವಸ್ತುಗಳನ್ನು ತಯಾರಿಸಬಲ್ಲವನಾಗಿದ್ದ. ಅದರಲ್ಲಿ ಬೆಳ್ಳಿ ಕೂಡಿಸಿದ್ದರೂ ಅದು ಕಾಣುತ್ತಿರಲಿಲ್ಲ. ಕಾರಣ ಅವೆರಡರ ಬಣ್ಣ ಒಂದೇಯಾಗಿದ್ದವು. ಈ ಸಂಪ್ರದಾಯದ ಅಧಿಕಾಂಶವು ಉಳಿದುಕೊಂಡು ಬಂದಿರುವುದರಿಂದ ಪ್ರಬಂಧಕ್ಕೆ ಮಂಡಿಸಿರುವ ಸಾಕ್ಷಿ ಆಧಾರಗಳನ್ನು ಬಿದ್ರಿ ಕಲೆಯ ಪುರಾತನತೆಯನ್ನು ತೋರಿಸಿಕೊಡತ್ತದೆ. ಆದರೆ ಇದರ ಸರಿಯಾದ ಸಾಕ್ಷಿ ಆಧಾರಗಳು ಇನ್ನೂ ದೊರೆಯಬೇಕಾಗಿವೆ.

ಪ್ರವಾದಿ ಮಹಮ್ಮದ(PBUH)ರ ಮರಣದ ನಂತರ ಸುಮಾರು ಐದು ನೂರು ವರ್ಷಗಳ ಮೇಲೆ ಅಂದರೆ ಕ್ರಿ.ಶ.೬೩೨ ರಲ್ಲಿ ಇಸ್ಲಾಂ ಧರ್ಮವು ತನ್ನ ಮೂಲ ಸ್ಥಾನವಾದ ಅರೇಬಿಯದಿಂದ ದೂರದೂರದ ಪ್ರದೇಶಗಳಿಗೆ ಪಸರಿಸಿತು.ಮಧ್ಯಪೂರ್ವದ ಇನ್ನಿತರ ಭಾಗಗಳು ಉತ್ತರ ಆಫ್ರಿಕಾ, ಸ್ಪೇನ್, ಮಧ್ಯ ಏಷಿಯಾ ಮತ್ತು ಭಾರತದ ಉತ್ತರ ಮತ್ತು ಮಧ್ಯಭಾಗಗಳನ್ನು ಮೊಹಮ್ಮದರ ಅನುಯಾಯಿಗಳಾದ ಮುಸಲ್ಮಾನರು ಜಯಿಸಿದರು. ಇಸ್ಲಾಂಧರ್ಮದ ಪ್ರಚಾರದೊಂದಿಗೆ ಮುಸ್ಲಿಂ ಕಲೆಯ ವಿಶಿಷ್ಟವಾದ ಶೈಲಿಯ ಕ್ರಮೇಣ ವಿಕಾಸ

ಹೊಂದಿದ್ದು, ಅದು ಪ್ರಮುಖವಾಗಿ ಧಾರ್ಮಿಕ ವಾಸ್ತುಶಿಲ್ಪ ಪುಸ್ತಕಗಳಲ್ಲಿ ಚಿತ್ರ ರೂಪದ ನಿದರ್ಶನಗಳು ಮಡಕೆಗಳ ಅಲಂಕರಣ, ಧಾತು ಪಾತ್ರೆ ಮತ್ತು ಇನ್ನಿತರ ನಿತ್ಯೋಪಯೋಗಿಯಾದ ವಸ್ತುಗಳಲ್ಲಿ ಬಳಕೆಗೊಂಡಿತು. ಮುಸ್ಲಿಂ ಕಲೆಯ ಮೇಲೆ ರೋಮನ್, ಬೈಝಂಟಾಯಿನ್ ಮತ್ತು ಪರ್ಶಿಯನ್ ಕಲೆಗಳ ಪ್ರಭಾವ ಬೀರಿದ್ದವು.

ಮುಸ್ಲಿಂ ಕಲೆಯ ಬೆಳವಣಿಗೆಯ ಮೇಲೆ ಎರಡು ಧಾರ್ಮಿಕ ನಿಬಂಧನೆಗಳು ಕೂಡ ಪ್ರಭಾವ ಬೀರಿವೆ. ಜೀವಂತವಾಗಿರುವ ಪ್ರಾಣಿಗಳು ಪ್ರತಿಮೆ ಅಥವಾ ಪ್ರಕೃತಿಯನ್ನು ನಿರ್ಮಿಸುವುದು ಜೀವಿಗಳನ್ನೆಲ್ಲ ಸೃಷ್ಟಿಸಿದ ಎಲ್ಲಾ ಹೂವಿನ ಅನುಕರಣೆಯೆನಿಸುವುದರಿಂದ ಅದನ್ನು ಮಾಡಬಾರದೆಂದು ಮಹಮ್ಮದರು ಕಲಾವಿದರಿಗೆ ಎಚ್ಚರಿಕೆಯನ್ನು ನೀಡಿದ್ದಾರೆ. ಹಾಗಾಗಿ ಹೆಚ್ಚಿನ ಧಾರ್ಮಿಕ ಕಲೆಯಲ್ಲಿ ಮನುಷ್ಯ ಅಥವಾ ಪ್ರಾಣಿಗಳ ಚಿತ್ರಣವಿಲ್ಲದ ಇತರ ಅಲಂಕಾರಿಕ ವಿನ್ಯಾಸಗಳು ತುಂಬಿಕೊಂಡಿವೆ. ಎರಡನೆಯ ನಿಬಂಧನೆಯಕಲಾಕೃತಿಗಳ ನಿರ್ಮಾಣಕ್ಕೆ ಬೆಲೆಬಾಳುವ ವಸ್ತುಗಳ ಬಳಕೆಗೆ ಉತ್ತೇಜನವಿಲ್ಲ ಹಾಗಾಗಿ ಮುಸ್ಲಿಂ ಕಲಾವಿದರು ಬಹುಮಟ್ಟಿಗೆ ಹಿತ್ತಾಳೆ ಮಣ್ಣು ಮತ್ತು ಕಟ್ಟಿಗೆಯಂಥ ಅಗ್ಗದ ವಸ್ತುಗಳನ್ನು ಅಲಂಕರಿಸುವ ಕೌಶಲ್ಯವನ್ನು ಕರಗತಗೊಳಿಸಿಕೊಂಡು ಅವು ಬೆಲೆಬಾಳುವ ಬೆಳ್ಳಿ ಬಂಗಾರದ ವಸ್ತುಗಳಂತೆ ಸುಂದರವಾಗಿ ಕಾಣುವಂತೆ ಮಾಡಿದನು.

ಪ್ರತಿಮೆ ಅಥವಾ ಪ್ರಕೃತಿಗಳನ್ನು ನಿರ್ಮಿಸಬಾರದೆಂದು ನಿಬಂಧನೆಯ ಕಾರಣದಿಂದ ಮುಸ್ಲಿಂ ಕಲೆಯಲ್ಲಿ ಎದ್ದು ಕಾಣುವ ಗುಣಲಕ್ಷಣವೊಂದನ್ನು ಬೆಳೆದು ಬಂದಿತು, ಕಲಾವಿದರು ಜೀವಿಗಳನ್ನು ಹೇಳುವ ಆಕೃತಿಗಳನ್ನು ರಚಿಸುವುದನ್ನು ತ್ಯಜಿಸಿದರು, ಬದಲಿಗೆ ಅರೇಬಸ್ಕ ಎಂದು ಕರೆಯಲಾಗುವ ಅತ್ಯಂತ ಸಂಕೀರ್ಣವಾದ ವಿಶಿಷ್ಟವಾದ ಅಲಂಕರಣ ಪ್ರಕಾರವನ್ನು ಬೆಳೆಸಿದರು. ಅಲ್ಲಲ್ಲಿ ತಿರುವುಗಳನ್ನು ಪಡೆದುಕೊಳ್ಳುವ ಬಳ್ಳಿ ಎಲೆ ಹೂವುಗಳನ್ನು ಚಿತ್ರಿಸಬಹುದು. ಹಾಗೆಯೇ ಅಲ್ಲಿ ಜ್ಯಾಮಿತಿಯ ಆಕೃತಿಗಳಿರಬಹುದು ನೇರವಾದ ರೇಖೆಗಳ ರಚನೆಯಿರಬಹುದು ಅಥವಾ ಪರಸ್ಪರ ಬೆಸೆದುಕೊಂಡಿರುವ ರೇಖಾ ವಿನ್ಯಾಸಗಳನ್ನು ಕೊರೆಯಬಹುದಾಗಿದೆ. ಕೆಲವೊಮ್ಮೆ ಪ್ರಾಣಿಗಳ ಆಕಾರಗಳನ್ನು ರಚಿಸಬಹುದಾದರೂ ಅವು ತುಂಬಾ ಶೈಲೀಕೃತವಾಗಿದ್ದು, ಜೀವಗಳ ಹೋಲಿಕೆಯನ್ನು ಹೊಂದಿರುವುದಿಲ್ಲ. ಧಾತುಕರ್ಮಿಗಳು ತುಂಬಾ ಸುಂದರವಾದ ಕೆತ್ತನೆಯುಳ್ಳ ಹಿತ್ತಾಳೆ ಮತ್ತು ಕಂಚಿನ ವಸ್ತುಗಳನ್ನು  ಬಳಸಿದರು ಕೆಲವೊಮ್ಮೆ ಅವರು ಕುಂಭ ಪಟ್ಟಿಗೆ ಮತ್ತು ತಟ್ಟೆ ಮುಂತಾದ ವಸ್ತುಗಳ ಮೇಲೆ ಬೆಳ್ಳಿ ಅಥವಾ ಬಂಗಾರದ ಕುಸುರಿ ಕೆಲಸಗಳನ್ನು ಮಾಡಿದರು.ಅನಂತರ ಅತ್ಯಂತ ಕೌಶಲ್ಯದಿಂದ ವಸ್ತು ಅಥವಾ ಧಾತುವಿನೊಂದಿಗೆ ಸೇರಿಸಿಕೊಂಡರು.

ಮುಸ್ಲಿಂ ಅರಸರ ಕಾಲದ ಲೋಹ ಮಾಧ್ಯಮದ ಚಿತ್ರಕಲೆ ಲೋಹ ಎಂದರೆ ಉಕ್ಕು, ತಾಮ್ರ, ಚಿನ್ನ ಮುಂತಾದ ಧಾತು ವಿವಿಧ ಬಗೆಯ ಲೋಹ ಕಂಡುಕೊಂಡು ಮಾನವನ ಇತರೆ ವಸ್ತುಗಳಿಂದ ಉಪಯೋಗ ಕಂಡುಕೊಂಡಂತೆ ದೈನಂದಿನ ಬಳಕೆಗೆ ಲೋಹ ಬಳಸಿಕೊಂಡಿದ್ದಾನೆ.ಲೋಹಗಳ ಉಪಯೋಗಗಳಿಂದ ಮಾನವ ಹೆಚ್ಚು ಸಂಸ್ಕೃತವಂತನಾಗಲು ವೈವಿಧ್ಯಮಯವಾಗಿ ಜೀವನ ಸಾಗಿಸಲು ಸಾಧ್ಯವಾಯಿತು. ಮಣ್ಣಿನ ಪದರಗಳಲ್ಲಿ

ಸಿಗುವ ಲೋಹವನ್ನು ಶೋಧಿಸಿ ಅದನ್ನು ಕರಗಿಸಿ ಒಂದು ಆಕೃತಿಯನ್ನಾಗಿಸುವುದು ಸಾಹಸದ ಕಲೆಯು ಆಗಿರುತ್ತದೆ. ವಿವಿಧ ಬಗೆಯ ಲೋಹಗಳಲ್ಲಿ ದೈನಂದಿನ ಉಪಯೋಗಕ್ಕೆಬೇಕಾಗುವ ಪಾತ್ರೆ ಪಗಡಿಗಳನ್ನು ತಯಾರಿಸಿಕೊಂಡಿದ್ದಾನೆ. ಕುಂಭಕಲೆಯ, ಗಾಢವಾದ ಪ್ರಭಾವ ಲೋಹದ ಉಪಕರಣಗಳ ಮೇಲೆ ಆಗಿರುವುದನ್ನು ಕಾಣಬಹುದು.

ಭಾರತೀಯ ಲೋಹ ಶಿಲ್ಪಕಲೆಯು ಅಭಿವೃದ್ಧಿ ಹೊಂದಿದ್ದು, ದಕ್ಷಿಣ ಭಾರತದ ತುಂಗಭದ್ರೆಯಿಂದ ಕನ್ಯಾಕುಮಾರಿಯವರೆಗಿನ ಪ್ರದೇಶದಲ್ಲಿ ಮಾತ್ರ ಕ್ರಿ.ಶ.ಒಂಭತ್ತರಿಂದ ಹದಿನಾರನೆಯ ಶತಮಾನದ ಸಂದರ್ಭದಲ್ಲಿ ಲೋಹ ಶಿಲ್ಪದ ಬೆಳವಣಿಗೆಯ ಕಡೆ ಅರಸರು ಗಮನಹರಿಸಿದರಲ್ಲದೇ ಜನಪ್ರಿಯಗೊಳ್ಳುವಂತೆ ಕಲೆಯಲ್ಲಿ ಅಭಿರುಚಿ ಮಾಡುವಂತೆ ವ್ಯವಸ್ಥೆ ಮಾಡಿದ್ದು, ಲೋಹ ಶಿಲ್ಪ ಕಲಾಕಾರರಿಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟಿದ್ದು ಗಮನಾರ್ಹ ಅಂಶವಾಗಿದೆ. ಕಲ್ಲು, ಮಣ್ಣು, ಕಟ್ಟಿಗೆ, ಲೋಹ, ಗಾಜು, ಹೀಗೆ ಎಲ್ಲಾ ಮಾಧ್ಯಮಗಳಲ್ಲಿ ಚಿತ್ರಶಿಲೆಯೆಂಬ ಬಳ್ಳಿಹಬ್ಬಿ, ಎಲೆಬಿಟ್ಟು ಮೊಗ್ಗು ಹೂ ಕಾಯಿಗಳನ್ನು ಬಿಟ್ಟಿದೆ ಎಂದು ಹೇಳಬಹುದು. ಭಾರತದ ಇನ್ನುಳಿದ ಭಾಗಗಳಿಗಿಂತಲೂ ದಕ್ಷಿಣ ಭಾಗ ವಿಪುಲವಾಗಿ ಲೋಹ ಮಾಧ್ಯಮದ ಚಿತ್ರಕಲೆಯ ಬೆಳವಣಿಗೆಯಾದದ್ದು ಆಶ್ಚರ್ಯಕರವೆನಿಸುತ್ತದೆ. ಯೂರೋಪಿನ ಆಡಳಿತವು ಇಪ್ಪತನೆಯ ಶತಮಾನದವರೆಗೆ, ದಕ್ಷಿಣ ಭಾರತದಲ್ಲಿ ಹಾಗೂ ಹೈದರಾಬಾದ ಪ್ರಾಂತದಲ್ಲಿಇದ್ದುದರ ಪ್ರಭಾವ ಹಾಗೂ ಇಸ್ಲಾಂ ಧರ್ಮದ ಸಂಸ್ಕೃತಿಯ ಪ್ರಭಾವವು ಬಹುತೇಕ ಕಾರಣವಾಗಿದೆ. ಹಿಂದೂಗಳು ಹಾಗೂ ಮುಸ್ಲಿಂರು ತಮ್ಮ ಪೂರ್ವಜರಿಂದ ಬಂದ ಲೋಹದ ವಸ್ತುಗಳು ಬಹಳ ಕಾಲದವರೆಗೆ ಬಳಕೆಯಲ್ಲಿರುತ್ತವೆ. ಎಂಬ ಭಾವನೆಯಿಂದ ಲೋಹ ಮಾಧ್ಯಮದ ಚಿತ್ರಕಲೆಯ ಪಾತ್ರೆ, ಪೂಜಾ ವಸ್ತುಗಳನ್ನು ತಯಾರಿಸತೊಡಗಿದರು. ಲೋಹ ಶಸ್ತ್ರಗಳು, ಪಾತ್ರೆಗಳು ಪ್ರಾಚೀನ ಕಾಲದ ವಿಷಯಗಳ ಜೊತೆ ಚಿತ್ರಕಲೆಯನ್ನು ತಿಳಿಯಲು ಉಪಯುಕ್ತವಾಗಿವೆ.

## ಬಹಮನಿ ಅರಸರು

ಕ್ರಿ.ಶ.೧೪೩೭ರಿಂದ ೧೫೩೮ ಕರ್ನಾಟಕವನ್ನಾಳಿದ ಬಹುಮನಿ ಅರಸರ ಕಾಲದಲ್ಲಿ ಲೋಹ ಮಾಧ್ಯಮ ಚಿತ್ರಕಲೆಯು ತಾಮ್ರ, ಹಿತ್ತಾಳೆ, ಕಂಚು, ಬೆಳ್ಳಿ, ಬಂಗಾರದ ಪಾತ್ರಗಳು ಆಭರಣಗಳು ಆಯುಧಗಳು, ಯುದ್ಧದ ಸಮಯದಲ್ಲಿ ತೊಡುವ ಉಡುಪುಗಳು, ಪೀಠೋಪಕರಣಗಳ ಮೇಲೆ ಬೆಳೆದದ್ದು ನಮಗೆ ತಿಳಿದು ಬರುತ್ತದೆ.

ಬಹಮನಿ ಅರಸರ ರಾಜಧಾನಿಯು ಮೊದಲು ಗುಲಬರ್ಗಾ, ನಂತರ ಬೀದರಗೆ ಸ್ಥಳಾಂತರಗೊಂಡಿತ್ತು. ಈ ಅರಸರು ಇರಾನ್, ಪರ್ಷಿಯಾದಿಂದ ಲೋಹ ಮಾಧ್ಯಮ ಕರಕುಶಲ ಕಲಾಕಾರರನ್ನು ಕರೆಸಿ ತಮ್ಮ ಆಸ್ಥಾನದಲ್ಲಿಟ್ಟುಕೊಂಡು ರಾಜಾಶ್ರಯವನ್ನು ನೀಡಿದ್ದರು. ಅವರು ಇಲ್ಲಿಯ ಸ್ಥಳಿಯರ ಸಂಗಡ ಕೂಡಿಕೊಂಡು ಸುಂದರವಾದ ನಕ್ಷೆಗಳನ್ನು ಆಭರಣ, ಆಯುಧಗಳು ಶಿರಸ್ತ್ರಾನ್ ಹಾಗೂ ಯುದ್ಧ ಕವಚಗಳ ಮೇಲೆ ಅಲಂಕಾರಿಕವಾಗಿ ಕೆತ್ತಿದ್ದು, ದೊರೆತ ವಸ್ತುಗಳಿಂದ ಗಮನಕ್ಕೆ ಬರುತ್ತದೆ.

ಬಹಮನಿ ಸಾಮ್ರಾಜ್ಯದ ಪತನ ನಂತರ ಐದು ಶಾಹಿರಾಜ್ಯಗಳಲ್ಲಿ ಬರೀದಷಾಹಿಯು ಬೀದರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ.೧೪೬೨ರಿಂದ ೧೬೧೯ರ ವರೆಗೆ ರಾಜ್ಯವನ್ನಾಳಿದರು. ಇವರ ಕಾಲದಲ್ಲಿ ಇರಾನ ಮಾದರಿಯ ಬಿದರಿ ವಸ್ತುಗಳ ಕುಸುರಿ ಕಲೆ ಬೆಳೆದು ಜಗತ್ಪಸಿದ್ಧಿ ಪಡೆಯಿತು.

ಲೋಹ ಮಾಧ್ಯಮದ ಚಿತ್ರಕಲೆಯೂ ಸಹ ಪಾತ್ರೆ, ಆಯುಧ, ಯುದ್ಧ ಕವಚಗಳಲ್ಲಿ, ನಾಣ್ಯ ಮೆಡಲುಗಳು ಲೋಹದ ಚಿತ್ರಗಳಲ್ಲಿ ನಾವು ಕಾಣಬಹುದು. ಇವರ ಕಾಲದಲ್ಲಿ ಕಂಪನಿ ಚಿತ್ರಕಲಾ ಶೈಲಿ ಬೆಳೆಯಿತು. ಲೋಹಗಳಾದ ಕಂಚು ಕಬ್ಬಿಣ, ಉಕ್ಕು, ಬಂಗಾರ, ಬೆಳ್ಳಿಯ ವಸ್ತುಗಳ ಚಿತ್ರವನ್ನು ತುಂಡರಿಸಿದ್ದು ಕಾಣುತ್ತೇವೆ.

ಲೋಹ ಮಾಧ್ಯಮದ ಚಿತ್ರಕಲೆಯು ಕರ್ನಾಟಕದ ಮುಸ್ಲಿಂ ಅರಸರ ಆಡಳಿತಾವಧಿಯಲ್ಲಿ ಅತ್ಯಂತ ಸುಂದರವಾಗಿ ಬೆಳೆದು ಬಂದಿದ್ದನ್ನು ನಾವು ಗಮನಿಸಬೇಕಾದದ್ದು ಅತಿ ಅವಶ್ಯವಾಗಿದೆ. ಕಬ್ಬಿಣ ಉಕ್ಕು ತಾಮ್ರ, ಬೆಳ್ಳಿ, ಬಂಗಾರ, ಸತುವು, ಕಂಚಿನ, ಲೋಹಗಳ ಹಾಳೆ ಮೇಲೆ ವಸ್ತುಗಳ ಮೇಲೆ ಸುಂದರವಾದ ಚಿತ್ರಗಳನ್ನು ಬಿಡಿಸಿ, ಲೋಹ ಶಿಲ್ಪದ ಬೆಳವಣಿಗೆಯನ್ನು ಜನಪ್ರಿಯತೆಗೊಳ್ಳುವಂತೆ ಕಲೆಯಲ್ಲಿ ಅಭಿರುಚಿ ಮೂಡುವಂತೆ ವ್ಯವಸ್ಥೆ ಮಾಡಿದ್ದು, ಲೋಹ ಶಿಲ್ಪಕಾರರಿಗೆ ಹೆಚ್ಚಿನ ಪ್ರೋತ್ಸಾಹ ನೀಡಿರುವುದು ಗಮನಾರ್ಹ ಅಂಶಗಳಾಗಿವೆ. ಲೋಹ ಮಾಧ್ಯಮ ಚಿತ್ರಕಲೆಯಲ್ಲಿ ಆಭರಣಗಳು ಬಿದರಿ ಲೋಹ ಶಿಲ್ಪಗಳು ಆಯುಧಗಳು ಹಾಗೂ ಕವಚಗಳು,ನಾಣ್ಯಗಳು, ತಾಮ್ರ, ಹಿತ್ತಾಳೆ, ಬೆಳ್ಳಿಯ ಪಾತ್ರೆಯ ಮೇಲಿನ ಚಿತ್ರಗಳನ್ನು ಕಾಣಬಹುದು.

**೫.೨. ಬಿದರಿಕಲೆ**

ಉತ್ತರ ಕರ್ನಾಟಕದ ಊಟಿ ಎಂದು ಹೆಸರು ಪಡೆದಿರುವ ಬೀದರ ಪಟ್ಟಣ ಒಂದು ಐತಿಹಾಸಿಕ ಸುಂದರ ಸ್ಥಳ. ಆ ನಗರಕ್ಕೆ ಭೇಟಿಯಿಟ್ಟವರಿಗೆ ಮೊದಲು ಎದುರಿಗೆ ಬಿದರಿವಸ್ತುಗಳ ಅಂಗಡಿಗಳು ಕಾಣಿಸುತ್ತದೆ. ಅವುಗಳ ಸುಂದರ ಕಲಾವಿನ್ಯಾಸಗಳಿಗೆ ಮಾರು ಹೋಗದ ಕಲಾರಸಿಕರೇ ಇಲ್ಲ ಎನ್ನಬೇಕು.

**೫.೩. ಬೀದರ್ ಹೆಸರಿನ ಮೂಲ**

ಕರ್ನಾಟಕದ ನಕ್ಷೆಯಲ್ಲಿ ಉತ್ತರ ದಿಕ್ಕಿನ ತುದಿಯಲ್ಲಿ ಬೀದರ್ ಜಿಲ್ಲೆ ಕಾಣಿಸುತ್ತದೆ. ಬೀದರ್ ಹೆಸರಿನ ಮೂಲದ ಬಗ್ಗೆ ಹಲವಾರು ಅಭಿಪ್ರಾಯಗಳಿವೆ. ಇದು ನಳದಮಯಂತಿ ಕಥೆಯಲ್ಲಿ ವಿದುರ ಎಂಬ ಯವರಾಜನಿಂದ ನಿರ್ಮಿಸಲ್ಪಟ್ಟನಗರ, ಮಹಾಭಾರತದ ಕಾಲದಲ್ಲಿ ವಿದುರನಗರದ ಅಥವಾ ವಿದರ್ಭಪುರ ಆ ವಿದರ್ಭಪುರವೇ ಬೀದರ ಆಗಿರಬಹುದೆಂಬ ಹಲವು ಪಂಡಿತರ ಅಭಿಪ್ರಾಯ ಬಿದರು ಪದವೇ ಬೀದರ ಆಯಿತೆಂದು ಹಾಗೂ ಬಿದರೂರು ಬೀದರ ಎಂದಾಗಿ ರೂಪಾಂತರ ಹೊಂದಿತೆಂದು ಹೇಳುವ ಅಭಿಪ್ರಾಯದ ವಿದ್ವಾಂಸರು ಇದ್ದಾರೆ. ಆದ್ದರಿಂದ ಈ ನಗರದ ನಾಮವೂ ಬೀದರ್, ಬಿದರಿಪುರ, ಬಿದರೂರು, ಬಿದರೆ, ಬೀದರ ಇತ್ಯಾದಿಯಾಗಿ ಹೆಸರು[1] ಬಂದಿದೆ. ಈ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ಬೀದರ ಹೆಸರಿನ ಉಲ್ಲೇಖಗಳಿಲ್ಲ ಬಹಮನಿ ಸುಲ್ತಾನರ ಕಾಲದಲ್ಲಿ ಇದು ಮೊಹಮದಾಬಾದ ಬೀದರ್ ಎಂದು ಪ್ರಸಿದ್ಧಿ ಹೊಂದಿದ್ದರಿಂದ ಕಳೆದ ದಶಕಗಳಲ್ಲಿಯೂ ಇದನ್ನು ಎಂ.ಬೀದರ ಎಂದೇ ಕರೆಯುತ್ತಿದ್ದರು.

---

೧. ಕರ್ನಾಟಕದ ಬಿದ್ರಿಕಲೆ, ಗುಲಬರ್ಗಾ ವಿ.ವಿ.ಕ್ಕೆ ಸಲ್ಲಿಸಿದ ಪಿಹೆಚ್.ಡಿ ಮಹಾಪ್ರಬಂಧ, ೨೦೦೯

## ೫.೪. ಬಿದರಿಕಲೆಯ ಅರ್ಥಸ್ವರೂಪ

ಬಿದರಿ ಕಲೆಗೆ ಈ ಹೆಸರು ಮೊದಲಿಗೆ ಹೇಗೆ ಬಂತು ಎಂಬುದಕ್ಕೆ ಜನಪದರು ನಾನಾ ರೀತಿಯಲ್ಲಿ ನಡೆದುಬಂದ ಕಥೆಗಳನ್ನು ಹೇಳುತ್ತಾರೆ. ಯಾವುದೋ ಒಂದು ರೀತಿಯಲ್ಲಿರುವ ಒಂದು ಕಲೆ ಈಗಿರುವ ಬಿದ್ರಿಕಲೆಯ ರೂಪದಲ್ಲಿ ಕಂಡುಕೊಂಡಾಗ ಅವನು ತನ್ನ ಭಾಗ್ಯ ವಿಧಿ ಅದೃಷ್ಟದಿಂದಲೇ ಈ ಕಲೆ ಕರಗತವಾಯಿತೆಂದು ತಿಳಿದ ಆದ್ದರಿಂದ ಇದಕ್ಕೆ ವಿಧಿ ಎಂದು ಕರೆದ. ಅದು ವಿಧಿ ಬಿದಿ ಎಂದು ಅಪಭ್ರಂಶ ಹೊಂದಿ ಬಿದ್ರಿ ಆಯಿತು ಎನ್ನುವ ಅಭಿಪ್ರಾಯವು ಇದೆ. ಇನ್ನೂ ಕೆಲವರು ಈ ಕಲೆಯ ರೂಪಕಂಡುಕೊಂಡವನು ಮುಂದೆ ಬಣ್ಣ ಏರಿಸುವುದಕ್ಕಾಗಿ ಪ್ರಯತ್ನ ಮಾಡುವಾಗ ಅವನು ಕೆಳಗೆ ಬಿದ್ದನು. ಆಗ ಅವನ ಕೈಯಲ್ಲಿರುವ ಕಲೆಯು ಕೆಳಗೆ ಬಿತ್ತು. ಆಗ ಕಲೆಯು ಪಾತ್ರೆ ಬಿದ್ದ ಕೋಟೆಯ ಮಣ್ಣಿನಾಂಶದಲ್ಲಿ ಕಲೆಯ ಬಣ್ಣ ಬದಲಾಗುವುದನ್ನು ಗಮನಿಸಿದ. ಈ ಅನುಭವದಿಂದ ಕಲೆಗಾರ ಕಲೆಗೆ ಬಣ್ಣ ಏರಿಸಲು ಬೀದರ ಕೋಟೆಯ ಪಕ್ಕದ ಮಣ್ಣನು ಬಳಸಿಕೊಳ್ಳಲು ಪ್ರಾರಂಭಿಸಿದ.

ಈ ರೀತಿಯಾಗಿ ಇವನು ಬಿದ್ದಾಗಲೇ ಒಂದು ಹೊಸ ಶೋಧವಾಯಿತು. ಆದ್ದರಿಂದ ಆತನು ಬಿದ್ವಿವಿ, ಬಿದ್ವಿವಿರಿ, ಬಿದ್ದಿರು, ಬಿದ್ರಿ ಎಂದು ಹೇಳುತ್ತಾ ಅದೆ ಹೆಸರು ಕಲೆಗೆ ಕರೆಯಲು ಪ್ರಾರಂಭಿಸಿದ ಎಂದು ರಾಜೇಂದ್ರಯರನಾಳೆ ಅವರು ಹೇಳುತ್ತಾರೆ. ಆದರೆ ಭಾಷಾ ರೂಪನಿಷ್ಪತ್ತಿಯ ಪ್ರಕಾರ ಈ ಪ್ರದೇಶದಲ್ಲಿ ಬಿದ್ರಿ ಕಲೆಯಲ್ಲಿ ನಿಪುಣತೆಯನ್ನು ಪಡೆದ ಪರಿಣಾಮವಾಗಿ ಬೀದರಿನ ಮೂಲಬದ್ಧ ಬಿದಿರು, ಬಿದರೆ, ಬಿದಿರೆ, ಬಿದಿರುಪುರ, ಬೀದರ ಆಗಿದೆ. ಎನ್ನುವವಾದವು ಇದ್ದು ಇವೆಲ್ಲದರ ಹಿನ್ನೆಲೆಯಲ್ಲಿ ಇಂದಿನ ಬೀದರನಲ್ಲಿ ಆಗಿದೆ ಎಂದು ರಾಜಶೇಖರ ಕೆ.ಎಲ್.ಅವರು ಅಭಿಪ್ರಾಯ ಪಡುತ್ತಾರೆ.[೨] ಬೀದರನಲ್ಲಿ ವಿಕಾಸ ಹೊಂದಿದ ಈ ಕಲೆಗೆ ಬಿದರಿ ಕಲೆಯೆಂದು ಹೆಸರು ಬಂದಿದೆ.

## ೫.೫. ಬಿದರಿಕಲೆಯ ಹುಟ್ಟುಬೆಳವಣಿಗೆ

ಶಿಲಾಯುಗದಿಂದಲೂ ಬಿದರಿ ಕಲೆ ಕಾಣಸಿಗುತ್ತದೆ. ಮುಂದಿನ ಯುಗಗಳಲ್ಲಿ ವೇದ್ಯವಾಗುತ್ತದೆ. ಮಣ್ಣಿನ ಮಡಕೆಗಳ ಮೇಲೆ ಲೋಹದ ವಸ್ತುಗಳ ಮೇಲೆ ಚಿತ್ತಾರಗಳನ್ನು ನಕ್ಷೆ ಬೆಳೆಸಿಕೊಂಡಿದ್ದ ಇದು ಮಾನವನ ವಿಕಾಸದ ಸಂಕೇತವಾಗಿದೆ ರಾಜಾಶ್ರಯಗಳಲ್ಲಿ ಕಲೆಗಳು ಹಲುಸಾಗಿ ಬೆಳೆದು ಜನ ಮನ್ನಣೆಗಳಿಸಿವೆ. ಹನ್ನೆರಡನೇಯ ಶತಮಾನದಲ್ಲಿ ಕಲ್ಯಾಣದ ಕಳಚೂರಿ ಅರಸರ ಕಾಲದಲ್ಲಿ ವಿವಿಧ ಪರಿಕರಗಳ ಮೇಲಲ್ಲದೆ ಕಬ್ಬಿಣದ ವಸ್ತುಗಳ ಮೇಲೆ ಬೆಳ್ಳಿ, ಬಂಗಾರ ಲೇಪಿಸುವ ಹಾಗೂ ಚಿತ್ತಾರ ಕೆತ್ತಿ ಅದರಲ್ಲಿ ಕೂಡಿಸುವ ಕಲೆ ಜಾರಿಯಲ್ಲಿದ್ದುದು ಕಂಡು ಬರುತ್ತದೆ. ಬಿದರಿಕಲೆ ಕೈ ಕಸುಬು ಬೀದರಲ್ಲಿ ಮೊಟ್ಟ ಮೊದಲಿಗೆ ಪರಿಚಯಿಸಿದ್ದು, ೧೫ನೇ ಶತಮಾನದ ಆರಂಭದಲ್ಲಿಯೇ ಎನ್ನಬಹುದು ಬಹಮನಿ ಸುಲ್ತಾನ ಅಹ್ಮದಶಹ ಅಲಿ ಬಹಮನಿಯ ರಾಜಧಾನಿಯನ್ನು ಕಲ್ಬುರ್ಗಿಯಿಂದ ಬೀದರಗೆ ಕ್ರಿ.ಶ.೧೪೨೭ರಲ್ಲಿ ವರ್ಗಾಯಿಸಿದಾಗ ರಂಗಿನ ಮಹಲ್ ಹಾಗೂ ಇತರೆ ಕಲಾತ್ಮಕ ಕಟ್ಟಡಗಳನ್ನು ಬೀದರಿನಲ್ಲಿ ಕಟ್ಟಿಸಲು ಇರಾನ್‌ದಿಂದ ಕುಶಲಕರ್ಮಿಗಳನ್ನು ಕರೆಸಿದ

೨. ಕರೀಗೌಡ ಬೀಚನಹಳ್ಳಿ ಸಂ., ಕರಕುಶಲ ಕಲೆಗಳು, ಕ.ವಿ.ವಿ.ಹಂಪಿ, ಪುಟ-೧೨೭ ಮತ್ತು ೧೨೭

ಇವರಲ್ಲಿ ಅಬ್ದುಲಾಬಿನ್ ಕೈಸರ್[೧] ಎಂಬಾತ ಸತುವಿನ ಮಿಶ್ರಲೋಹದ ಮೇಲೆ ಚಿನ್ನದ ಕುಸುರಿ ಕೆಲಸವನ್ನು ಮಾಡಿ ಸುಂದರ ಕಲಾತ್ಮಕ ವಸ್ತುಗಳನ್ನು ತಯಾರಿಸುವವನಾಗಿದ್ದ ಸತುವು ಬಿಳಿಯಾಗಿದ್ದುದರಿಂದ ಅದರಲ್ಲಿ ಬೆಳ್ಳಿ ಕೂಡಿಸಿದರೂ ಅದು ಕಾಣುತ್ತಿರಲಿಲ್ಲ ಏಕೆಂದರೆ ಅವೆರಡರ ಬಣ್ಣ ಒಂದೇ ಆಗಿದ್ದವು.

ಒಮ್ಮೆ ಕೋಟೆಯ ಕಟ್ಟಡದ ಕೆಲಸಕ್ಕೆ ಈ ಕಲಾಕೃತಿಯೊಂದಿಗೆ ಹೋದಾಗ, ಆತನ ಕೈಯಿಂದ ಕಲಾಕೃತಿ ಜಾರಿ ಕೆಳಗೆ ಕೆಸರಲ್ಲಿ ಬಿದ್ದು ಸತುವಿನ ಬಣ್ಣ ಕಪ್ಪಾಗಿರುವುದನ್ನು ಕಂಡು ಆಶ್ಚರ್ಯಪಟ್ಟು ಕಲಾಕೃತಿ ಬಿದ್ದ ಸ್ಥಳದ ಮಣ್ಣು ಪರೀಕ್ಷೆ ಮಾಡಿದ ಮಣ್ಣಿನ ವಾಸನೆ ಹಾಗೂ ರುಚಿ ವಿಚಿತ್ರವಾಗಿರುವುದನ್ನು ಕಂಡು ಕೊಂಡನು ಆ ಮಣ್ಣಿಗೆ ಉಪ್ಪು ಹಾಗೂ ಖಾರದ ವಿಶಿಷ್ಟ ರುಚಿ ಇರುವುದನ್ನು ತಿಳಿದುಕೊಂಡು ಕಲಾಕೃತಿಗಳ ಮೇಲೆ ವಿವಿಧ ರೀತಿಯಲ್ಲಿ ಮಣ್ಣು ಉಪಯೋಗಿಸಿದ[೨] ಈ ಪ್ರಯೋಗ ಫಲಿಸಿ ಬಿದ್ರಿಕಲೆ ಬೀದರ್‌ನಿಂದಲೇ ಹುಟ್ಟಿತೆಂಬುದು ಜನಪದರ ಒಂದು ವಾದವಾಗಿದೆ.

ಅತಿಪೂರ್ವ ಹಾಗೂ ಉನ್ನತ ಕಲಾ ಕೌಶಲ್ಯ ಹೊಂದಿರುವ ಬಿದ್ರಿಕಲೆ ಪರ್ಶಿಯಾ ಮೂಲದ್ದು ಎಂದು ಹೇಳಲಾಗಿದೆ. ರಾಜಾಶ್ರಯ ಪೋಷಿತವಾಗಿರುವ ಈ ಕಲೆ, ಜನ ಸಾಮಾನ್ಯರಿಗೂ ಉಪಯುಕ್ತ ಎನಿಸಿದರಿಂದ ಇಂದಿಗೂ ತನ್ನ ಜೀವಂತಿಕೆಯನ್ನು ಉಳಿಸಿಕೊಂಡಿದೆ. ಸೂಫಿ ಸಂತ ಖ್ವಾಜಾ ಮೋಹಿನೊದಿನ್ ಚಸ್ತಿ ಎಂಬುವರು ಈ ಕಲೆಯನ್ನು ಮೊದಲಿಗೆ ಅಜ್ಮೀರ್, ರಾಜಸ್ತಾನ ಉದಯ ಪುರಗಳಲ್ಲಿ ಜನ ಪ್ರಿಯಗೊಳಿಸಿದರೆಂದು ಹೇಳಲಾಗಿದೆ. ಕುಶಲಕರ್ಮಿಯಾಗಿದ್ದ ಅಬ್ದುಲ್ ಬಿನ್ ಕೈಸರ್ ಈ ಕಲೆಯನ್ನು ಮೊದಲು ಬಿಜಾಪುರದಲ್ಲಿ ಪ್ರಚುರ ಪಡಿಸಿದನು. ಅವನು ಬಿದರಿ ಕರಕುಶಲ ವಸ್ತುಗಳನ್ನು ಇರಾನ್ ಇರಾಕ್‌ಗಳಿಂದ ತಂದು ಬಿಜಾಪುರದಲ್ಲಿ ಮಾರಾಟ ಮಾಡುತ್ತಾ ಈ ಕರಕುಶಲ ಕಲೆಯನ್ನು ಇಲ್ಲಿ ಬೆಳೆಸಿದರೆಂದು ಹೇಳುತ್ತಾರೆ. ಇದೇ ಸಂದರ್ಭದಲ್ಲಿ ಅವರ ವಿಶ್ವಾಸಗಳಿಸಿದ ಬೀದರಿನ ಶಿವಣ್ಣ ಎಂಬ ಕುಶಲಕರ್ಮಿ ಈ ಕಲೆಯನ್ನು ಕರಗತ ಮಾಡಿಕೊಂಡು ನಂತರ ಬಿಜಾಪುರದಿಂದ ಬೀದರನಲ್ಲಿ ಬಿದರಿಕಲೆಯನ್ನು ಪ್ರಚುರ ಪಡಿಸಿದನೆಂದು ಹೇಳುತ್ತಾರೆ.

ರಾಮಣ್ಣ ಮತ್ತು ಹೇಮಣ್ಣ ಎಂಬ ಪ್ರಸಿದ್ಧ ಜಿನಿವಾರರು. ೧೪ನೇಯ ಶತಮಾನದ ಉತ್ತರಾರ್ಧದಲ್ಲಿದ್ದು, ಬಂಗಾರ, ಬೆಳ್ಳಿ ಇತ್ಯಾದಿ ಕಲಾಕೃತಿಗಳಲ್ಲಿ ಮುತ್ತು ರತ್ನ ಹವಳಗಳ ಜೋಡಣೆಯ ಕಲೆ ಕರಗತ ಮಾಡಿಕೊಂಡಿದ್ದರೆಂಬ ವಿಚಾರ ಲಕ್ಕಣ ದಂಡೇಶನ ಶಿವತತ್ವ ಚಿಂತಾಮಣಿಯಿಂದ ತಿಳಿದು ಬರುತ್ತದೆ.[೩] ಸ್ಥಳೀಯ ಜಿನಿವಾರರ ಕಲಾಕೃತಿಗಳ ಪ್ರೇರಣೆಯಿಂದ ಅಬ್ದುಲ್ಲಾಬಿನ್ ಕೈಸರನ್ನು ಬಿದರಿಕಲೆಯ ಹುಟ್ಟಿಗೆ ಕಾರಣಕರ್ತನಾದನು ಎಂಬುದು ಒಂದು ಅಭಿಪ್ರಾಯವಾದರೆ ಆತನು ಪರ್ಶಿಯಾದಲ್ಲಿನ ಕಲೆಯಿಂದಲೇ ಪ್ರೇರಣೆ ಪಡೆದಿದ್ದೇನೆಂಬುದು ಇನ್ನೊಂದು ಅಭಿಪ್ರಾಯವಾಗಿದೆ.

ಹೈದರಾಬಾದ್ ರಾಜ್ಯ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಿಸಿದ ಬಿದರಿಕಲೆ ೧೬ನೆಯ ಹಾಗೂ ೧೭ನೆಯ ಶತಮಾನದ್ದೆಂದು ಮತ್ತು ಅವುಗಳ ಮೇಲೆ ಲಘು ಚಿತ್ತಾರಗಳಿವೆ ಎಂದು ಜಗದೀಶ ಮಿತ್ತಲ ಅವರು

---

೧. ರಹೇಮಾನ ಪಟೇಲ್, ಕರ್ನಾಟಕದ ಬಿದ್ರಿಕಲೆ,

೨. ಕರ್ನಾಟಕ ಸರ್ಕಾರ, ಯುವ ಕರ್ನಾಟಕ ನವೆಂಬರ ಸಂಚಿಕೆ-೧, ಪುಟ-೧

೩. ಡಾ.ಶೇಖ್‌ಅಲ್ಲಿ ಕರ್ನಾಟಕ ಚರಿತ್ರೆ, ಸಂ-೪, ಪುಟ-೧೨೧

ಸಂಶೋಧನೆ ಮಾಡಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ರಾಬರ್ಮ ಆಂಡ್ ಲಿಸಾ ಸೇನ್ಸ್‌ಬರಿ ಕಲೆಕ್ಷನ್ ಯುನಿವ್ಹರ್‌ಸಿಟಿ ಆಫ್ ಈಸ್ಟ್ ಆನ್‌ಜಿಲಿಯ (Anglia)ದ ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಿಸಿದ ಬಿದರಿಕಲೆ ಹುಕ್ಕಾ ದಖನಿ ಲಘು ಚಿತ್ತಾರಗಳನ್ನು ಹೊಂದಿದ್ದು, ಅದರ ಆಕಾರ ಮೊಘಲ್ ಕುಶಲ ಕಲಾ ಶೈಲಿಗೆ ಹೋಲಿಕೆಯಾದರೆ ಅದರ ಕಲಾಕೃತಿಯ ಚಿತ್ತಾರಗಳು ಪರ್ಷಿಯಾ ದೇಶದ ಕಲೆಗೆ ಹೋಲುತ್ತದೆ.[೬]

ಮೊಘಲ್ ವಿನ್ಯಾಸಗಳಿಗೆ ಹೋಲಿಕೆಯಾಗುವ ಬಿದರಿ ಕಲೆ ದಖನಿ ಲಘು ಚಿತ್ತಾರಗಳ ಬಗ್ಗೆ ಬರೆದ ಪುಸ್ತಕದಲ್ಲಿ ಬಿದರಿ ಕಲೆಯ ವಿನ್ಯಾಸಗಳನ್ನು ಕುರಿತು ಮಾರ್ಕ್ ಜಿಬ್ರೊವಸ್ಕಿ ಪ್ರಸ್ತಾಪಿಸಿದ್ದಾರೆ. ೧೬ ಹಾಗೂ ೧೭ನೇ ಶತಮಾನದ ಬಿದರಿಕಲೆಯಲ್ಲಿ ಪರ್ಷಿಯನ್ ಹಾಗೂ ಮೊಘಲ್ ಕಲೆಯ ಪ್ರಭಾವ ಕಂಡುಬರುತ್ತದೆ.

೧೮ನೇಯ ಶತಮಾನದಲ್ಲಿ ಔದ್ಯೋಗೀಕರಣ ಆರಂಭವಾದಂತೆ ಬಿಹಾರ ರಾಜ್ಯದ ಪೂರ್ಣೆಯ ಎಂಬಲ್ಲಿ ಬ್ರಿಟಿಷ್ ಸಹಕಾರದೊಂದಿಗೆ ಬಿದರಿ ಕಲೆ ಕುಶಲಕರ್ಮಿಗಳಿಂದ ತಲೆ ಎತ್ತಿತ್ತು. ಅಲ್ಲಿಂದ ಬಿದರಿ ಕಲೆಗಳು ದೇಶವಿದೇಶಗಳಿಗೆ ರಫ್ತಾಗುತ್ತಿದ್ದವು. ಈ ಅವಧಿಯಲ್ಲಿ ಬೀದರ್, ಪೂರ್ಣೇಯಾ, ಲಕ್ನೋ ಹಾಗೂ ಮುರ್ಶಿದಾಬಾದಗಳು ಬಿದರಿ ಕಲೆಯ ತಯಾರಿಕೆಯ ಕೇಂದ್ರಗಳಾಗಿ ಬೆಳೆದವು ಕಲ್ಕತ್ತಾ ಫೈಜಾಬಾದ, ಢಾಕಾ ಇಂಗ್ಲೆಂಡ್ ಇತ್ಯಾದಿಗಳು ನಿರ್ಯಾತದ ಕೇಂದ್ರ ಸ್ಥಾನಗಳಾದವು.

ಬಹಮನಿ ವಂಶದ ರಾಜರಕಾಲದಲ್ಲಿ ಉರ್ಜಿತಾವಸ್ಥೆಯನ್ನು ಮುಟ್ಟಿದ ಈ ಬಿದರಿ ಪರ್ಷಿಯಾ ದೇಶದ ಸಾಂಸ್ಕೃತಿಕ ಮತ್ತು ಕಲೆಯ ಮೂಲದಿಂದ ಬಂದಿರುವುದಾಗಿ ಭಾವಿಸಲಾಗಿದೆ. ಅರೇಬಿಯಾ ಮತ್ತು ಪರ್ಷಿಯಾದಲ್ಲಿ ಸ್ಟೀಲ್ ಅಥವಾ ತಾಮ್ರದ ವಸ್ತುಗಳ ಮೇಲೆ ಬಂಗಾರದ ಎಲೆಗಳನ್ನು ಮಾಡುವ ಕಲೆಯು ಬಿದರಿ ಕಲೆಗೆ ಹೋಲುತ್ತದೆ. ಅಬ್ದುಲ್ಲಾ ಬಿನ್‌ಕೈಸರನು ಮಹ್ಮದ ಗವಾನನ ಮದರಸಾದಲ್ಲಿ ಶಿಕ್ಷಕನಾಗಿದ್ದು, ಈ ಕಲೆಯನ್ನು ಮುಂದುವರೆಸಿ ಹೊಸ ಶಿಷ್ಯರನ್ನು ತಯಾರು ಮಾಡಿದನು ತರ್ಕ ಶಿಕ್ಷಣ ತಜ್ಞ ಮಹ್ಮದ ಗವಾನನ ಬಹಮನಿ ರಾಜ್ಯದ ಪ್ರಧಾನಿಯಾಗಿದ್ದು. ತನ್ನ ಹೆಸರಿನಲ್ಲಿ ಕ್ರಿ.ಶ.೧೪೭೨ರಲ್ಲಿ ಮದರಸಾವನ್ನು ಶಿಕ್ಷಣಕ್ಕಾಗಿ ಕಟ್ಟಿಸಿದನು.

ಬಹಮನಿ ರಾಜ್ಯದ ಪತನದ ನಂತರ ಹೈದರಾಬಾದ ನಿಜಾಮನ ಆಡಳಿತದಲ್ಲಿ ಈ ಕಲೆಯ ಬೆಳವಣಿಗೆಗಾಗಿ ಮದರಸಾ ಸನತ್ ಹಿರಫತ್ ಎಂಬ ಹೆಸರಿನ ಕಲಾ ಶಾಲೆಯೊಂದು ಆರಂಭವಾಯಿತು ಅದರಲ್ಲಿ ಬಿದರಿ ಕಲೆಯೊಂದಿಗೆ ವಿವಿಧ ಬಗೆಯ ಕರಕುಶಲ ಕಲೆಗಳಿಗೆ ತರಬೇತಿ ನೀಡಲಾಗುತ್ತಿತ್ತು. ಈ ಶಾಲೆಯಲ್ಲಿ ಗುಲಾಮಸತ್ತಾರ ಮಾಸ್ತರ ಆಗಿದನು. ಈ ಶಾಲೆಯಲ್ಲಿ ಬೀದರಿನ ಕುಲಸಮ್ ಕುಸುಮಗಲ್ಲಿ ಓಣಿ ಯವರೇ ಹೆಚ್ಚಾಗಿ ಬಿದರಿ ಕಲೆಯ ತರಬೇತಿ ಪಡೆದರು. .

ಚಾರ್‌ಗುಲಶನ್ ಎಂಬ ಗ್ರಂಥ ಪರ್ಶಿಯಾ ಭಾಷೆಯಲ್ಲಿ ೧೭೫೭ರಲ್ಲಿ ಬರೆಯಲಾಗಿದ್ದು. ಅದರಲ್ಲಿ ದಖ್ಖಿನ ರಾಜ ಮಹಾರಾಜರ ಆಡಳಿತ ಹಾಗೂ ಕರಕುಶಲತೆ ಇತ್ಯಾದಿಗಳನ್ನೊಳಗೊಂಡ ವಿವರಗಳಿವೆ. ಈ ಗ್ರಂಥದಿಂದ ಹದಿನೇಳನೆಯ ಶತಮಾನದಲ್ಲಿ ಈ ಕಲೆಯು ಬೀದರ ನಗರದ ಹೆಸರಿನಿಂದ ಬಿದರಿ ಕಲೆ ಎಂದು

೬. ರಾಧಾಕೃಷ್ಣ ರಾವ್, ಡೆಕ್ಕನ್ ಹೆರಾಲ್ಡ್ (ಇಂಗ್ಲೀಷ್ ದೈನಂದಿನ ಪತ್ರಿಕೆ-೩), ಶುಕ್ರವಾರ, ೨೦೦೨, ಪುಟ-೫

ಗುರುತಿಸಲ್ಪಡುವದು ಹಾಗೂ ೧೭ನೇ ಶತಮಾನದಿಂದ ಬಿದರಿ ಕಲೆಯ ಕೇಂದ್ರಬಿಂದು ಬೀದರ ಆಗಿರುವುದು ಪ್ರಪ್ರಥಮವಾಗಿ ದಾಖಲಿಸಿದ್ದು ತಿಳಿದು ಬರುತ್ತದೆ.[೭]

ಬೀದರನ್ನು ಹೊರತು ಪಡಿಸಿದರೆ ಬಿಹಾರದ ಪೂರ್ಣಿಯಾ ವಿಶ್ವದಲ್ಲಿಯೇ ಬಿದರಿಕಲೆ ತಯಾರಿಕೆಯ ಎರಡನೇ ಮುಖ್ಯಸ್ಥಾನವಾಗಿತ್ತು. ಫ್ರಾನ್ಸಿಸ್ ಬುಕ್ ನನ್ನನ್ನು ೧೮೯೦ರಿಂದ ೧೮೧೦ರವರೆಗೆ ಪೂರ್ಣಿಯಾದಲ್ಲಿದ್ದು ಬಿದರಿ ಕಲೆಯ ಬಗ್ಗೆ ಈ ರೀತಿಯಾಗಿ ಬರೆದಿದ್ದಾನೆ. ಪೂರ್ಣಿಯಾದಲ್ಲಿ ೨೧ ಬಿದರಿ ಕಲೆಯ ಕುಶಲಕರ್ಮಿಗಳಿದ್ದು ಬಿದರಿ ಕಲಾಕೃತಿಗಳು ಮುರ್ಶಿದಾಬಾದ, ದಿನಜಪುರ, ರಂಗಪುರ, ಢಾಕಾ ಇತ್ಯಾದಿಗಳತ್ತ ನಿರ್ಯಾತಗೊಳ್ಳುತ್ತಿದ್ದವು.[೮] ಇಲ್ಲಿಯ ಕುಶಲ ಕರ್ಮಿಗಳು ಬಿದರಿ ಕಲಾಕೃತಿಗಳ ತಯಾರಿಕೆಯಲ್ಲಿಯ ಕೆಲವು ಹಂತಗಳಿಗೆ ತಕ್ಕಂತೆ ಕೆಲಸ ಮಾಡುತ್ತಿದ್ದರು. ಉದಾ. ಲೋಹಗಳನ್ನು ಮಿಶ್ರಮಾಡಲು ಕುದಿಸುವರು, ವಿನ್ಯಾಸಗೊಂಡ ಚಿತ್ತಾರಗಳಲ್ಲಿ ಬೆಳ್ಳಿಹುದುಗಿಸುವವರು ಇತ್ಯಾದಿ ವಿಭಿನ್ನ ಕೆಲಸಗಳು ಹೀಗೆ ಬಿದರಿ ಕಲಾಕೃತಿ ಪೂರ್ಣವಾಗಬೇಕಾದರೆ ಅನೇಕ ಕುಶಲಕರ್ಮಿಗಳಿಂದ ಹಸ್ತಾಂತರಗೊಂಡವರಿಗೆ ಹಾಗೂ ನಯನಗೊಳಿಸುವವರಿಗೆ ಹೆಚ್ಚಿನ ಸಂಭಾವನೆ ಲಭ್ಯವಾಗುತ್ತಿತ್ತು.

೧೮ನೇ ಶತಮಾನದ ಉತ್ತರಾರ್ಧದಲ್ಲಿ ಮುರ್ಶಿದಾಬಾದ ಹಾಗೂ ಲಕ್ನೋದಲ್ಲಿ ಬಿದರಿಕಲೆ ಆರಂಭವಾಯಿತು. ೧೮೮೦ರಲ್ಲಿ ಔದ್ಯೋಗೀಕರಣದ ಮುರ್ಶಿದಾ ಬಾದಿನ ವರದಿಯಲ್ಲಿ ಮೀರ್ ಇಲಾಹಿ ಬಕ್ಷ ಎಂಬ ಹೆಸರಿನ ವ್ಯಕ್ತಿಯು ಬಿದರಿಕಲೆಯನ್ನು ಮುರ್ಶಿದಾಬಾದಿನ ಕಲಾಕಾರರಿಗೆ ಪರಿಚಯ ಮಾಡಿದನು. ತನ್ನ ಹಲವು ಶಿಷ್ಯರೊಂದಿಗೆ ಬಿದರಿಕಲೆಯಲ್ಲಿ ಹಲವಾರು ಹೊಸ ವಿನ್ಯಾಸಗಳನ್ನು ಮಾಡಿ ಈ ಕಲೆಯಲ್ಲಿ ಸುಧಾರಣೆ ತಂದನು ಎಂದು ಹೇಳಲಾಗಿದೆ.[೯]

ವಿಶ್ವದಲ್ಲಿ ಬೀದರಿ ಬಿದ್ರಿಕಲೆಯ ಕೇಂದ್ರ ಬಿಂದುವಾಗಿದ್ದರೂ ಹೈದರಾಬಾದ, ಗೋಲ್ಕೊಂಡಾ, ಬಿಜಾಪುರ, ಅಹಮದ್‌ನಗರ, ಅಜಮೀರ್, ಮುಂಬಯಿ, ಲಕ್ನೋಮುರ್ಶಿದುಬಾದ ಪೂರ್ಣಿಯಾ, ಸೂರತ, ಜೈಪುರ, ದೆಹಲಿ, ಫೈಜಾಬಾದ ಬನಾರಸ್, ಕಲ್ಕತ್ತಾ ಗಯಾ ಈ ಸ್ಥಳಗಳಲ್ಲಿಯೂ ಬಿದರಿಕಲೆಯ ಉತ್ಪಾದನೆ ಹಾಗೂ ಮಾರಾಟವಿತ್ತೆಂಬುದು ಸುಸನ್‌ಸ್ಟ್ರಾಂಗರ ಅಧ್ಯಯನದಿಂದ ನಮಗೆ ತಿಳಿಯುತ್ತದೆ.[೧೦] ೧೮೮೧ರಲ್ಲಿ ಸಿಮ್ಲಾ ೧೮೮೩ ೧೮೮೪ರಲ್ಲಿ ಕಲ್ಕತ್ತಾ ೧೮೮೩ರಲ್ಲಿ ಜೈಪುರ ೧೮೮೬ರಲ್ಲಿ ಇಂಗ್ಲೆಂಡ್‌ಗಳಲ್ಲಿ ಬಿದರಿಕಲೆ ಪ್ರದರ್ಶನಗೊಂಡು ವಿಶ್ವವ್ಯಾಪಕವಾಯಿತು. ಇದರಿಂದ ಬಿದರಿ ಕಲಾಕೃತಿಗಳ ಬೇಡಿಕೆ ಹೆಚ್ಚಾಗಿ ಕುಲಕರ್ಮಿಗಳಿಗೂ ಮಾನ್ಯತೆ ಪ್ರಾಪ್ತವಾಗಲಾರಂಭಿಸಿತು.[೧೧]

---

೭. ರಾಧಾಕೃಷ್ಣ ರಾವ್, ಡೆಕ್ಕನ್ ಹೆರಾಲ್ಡ್ (ಇಂಗ್ಲೀಷ್ ದೈನಂದಿನ ಪತ್ರಿಕೆ-೩), ಶುಕ್ರವಾರ, ೨೦೦೨, ಪುಟ-೪

೮. Mark zebraweski Bidri, Metalware from the islamic courts of India Art East-I, 26.9

೯. ಲಕ್ಕಣ ದಂಡೇಶ ಶಿವತತ್ತ್ವ ಚಿಂತಾಮಣಿ

೧೦. ಲಕ್ಕಣ ದಂಡೇಶ ಶಿವತತ್ತ್ವ ಚಿಂತಾಮಣಿ

೧೧. ವಜೀರ ಭಾಷಾ ಬಗಾಯತ್, ಮುಸ್ಲಿಂ ಅರಸರಕಾಲದ ಚಿತ್ರಕಲೆ,

೫.೫. ಬಿದರಿ ಕಲೆಯ ಪರಿಕರಗಳು

ಬಿದರಿಕಲೆ ಮೋಲ್ನೋಟಕ್ಕೆ ಶಿಷ್ಟ ಎನಿಸಿದರೂ ಅದು ಮೂಲಭೂತವಾಗಿ ಜಾನಪದ ನೆಲೆ ಹೊಂದಿದೆ. ವಿದೇಶದಲ್ಲಿ ಜನಿಸಿ ಬೀದರನಲ್ಲಿ ವಿಕಸಿತವಾದ ಈ ಕಲೆಯನ್ನು ಸ್ಥಳೀಯ ಕಲೆ ಎಂದು ಕರೆಯಬಹುದಾಗಿದೆ. ಬಿದರಿಕಲೆ ಸಿದ್ಧಗೊಳಿಸಲು ಮುಖ್ಯವಾಗಿ ಬೇಕಾಗುವ ಕಚ್ಚಾವಸ್ತುಗಳು ಒಟ್ಟು ಹದಿಮೂರು ಸುಧೀರ್ಘ ತಯಾರಿಕಾ ವಿಧಾನ ಹೊಂದಿರುವುದು ಸಾಕಷ್ಟು ಶ್ರಮದಾಯಕವೂ ಆಗಿದೆ.

ಸತು, ತಾಮ್ರ, ಬೆಳ್ಳಿ, ಸೀಸ, ತವರ, ರಾಳ, ತಾಮ್ರದ ಸಲ್ಫೇಟ್, ಅಮೋನಿಯಂ, ಕ್ಲೋರೈಡ ನವಸಾಗರ ಬೀದರ ಕೋಟೆಯ ವಿಶಿಷ್ಟ ಬಗೆಯ ಮಣ್ಣು, ಮೇಣ, ಕಡಲೆಕಾಯಿ ಎಣ್ಣೆ, ಹರಳೆಣ್ಣೆ, ಔಡಲ ಎಣ್ಣೆ, ಸಂಗಜೀರಾ ಮುಂತಾದ ಕಚ್ಚಾ ವಸ್ತುಗಳು ಅವಶ್ಯಕವಾಗಿದೆ. ಜೊತೆಗೆ ಕತ್ತರಿಗಳು ಕಟಿಂಗ್ ಪ್ಲೇಯರ್, ಎರಕದ ಪೆಟ್ಟಿಗೆಗಳು, ಕೈ ಸಹಾಯದಿಂದ ರಂಧ್ರ ಕೊರೆಯುವ ಯಂತ್ರ, ಬರ್ಮಾ, ಅರಾ, ಆದಿ, ಸರಳು, ಬಡಗಿ ಹತಾರಗಳು ಲೋಹಕರಗಿಸುವ ಮೂಸೆ, ಸ್ಕ್ರೀಪರಗಳು, ಬಾತಾ, ಪ್ಯಾಲಾ ಸೌಟು, ಚಾಕಿ, ಪರಕಾರ ಮಂಗನ, ಹತೋಡಿ, ಕಲಮ ಪಟ್ಟಿತಾರಪಟ್ಟಿ, ಕಂದಾ ಸಾನ ಇತ್ಯಾದಿ ಸಲಕರಣೆಗಳು ಬಿದರಿಕಲೆ ತಯಾರಿಕೆಗೆ ಅವಶ್ಯಕವಾಗಿವೆ.[೨]

ಮೂಸ

ಇದು ಒಂದು ರೀತಿಯ ಮಣ್ಣಿನಿಂದ ಮಾಡಿದ ಮಡಿಕೆ ಅದು ಸಾಮಾನ್ಯ ಮಡಕೆಗಳಿಗಿಂತ ಭಿನ್ನವಾಗಿರುವುದು. ಇದನ್ನು ಮದ್ರಾಸ್ ಮುಂತಾದ ಕಡೆಗಳಲ್ಲಿ ತಯಾರಿಸಲಾಗುತ್ತದೆ. ಇದರ ವಿಶಿಷ್ಟಗುಣ ಎಂದರೆ ಸತು ಮತ್ತು ತಾಮ್ರ ಎಷ್ಟೇ ಕಾಲಾವಧಿಯವರೆಗೂ ಅದರಲ್ಲಿ ಕುದಿಸಿದರೂ ಅದಕ್ಕೆ ಎಷ್ಟು ಅಂಟಿಕೊಳ್ಳಲಾರದು ಆದರೆ ಒಂದು ಜಾಗ್ರತೆ ವಹಿಸಬೇಕಾಗುತ್ತದೆ. ಉಳಿದ ಮಡಕೆಗಳಂತೆ ಇದನ್ನು ಒಲೆಗೆ ತಗುಲದಂತೆ ಬೆಂಕಿಯ ಮೇಲಿಡಬೇಕಾಗುತ್ತದೆ. ಇದು ಬಿದರಿ ಕಲೆಯ ಅತಿ ಮುಖ್ಯವಾದ ಪರಿಕರವಾಗಿದೆ.

ಭಾತಿ ಭತ್ತಾ

ಇದು ಲೋಹಕರಾಗಿಸಲು, ಮೋಲ್ಡಿಂಗ್ ಮಾಡಲು ವೆಲ್ಡಿಂಗ್ ಏರಿಸಲು ಬೆಂಕಿಗಾಗಿ ಬಲೆಗೆ ಗಾಳಿ ಊದುವ ಸಲುವಾಗಿ ಬಳಸುವ ವಿಧಾನ.

ಸೌಟು ಪ್ಯಾಲಾ

ಕಬ್ಬಿಣದಾಗಿದ್ದು ಸತು, ತಾಮ್ರ ಕುದಿಸುವಾಗ ಕಲೆಗಳ ರಂಗೇರಿಸುವಾಗ ವಸ್ತುಗಳನ್ನು ದ್ರಾವಣವನ್ನು ಅಲುಗಾಡಿಸಲು ಹಾಗೂ ದ್ರಾವಣವನ್ನು ಪೇಟೆಯಲ್ಲಿ ಹೊಯ್ಯಲು ಉಪಯೋಗಿಸುವ ಸಾಧನ ಎರಕದ ಪೆಟ್ಟಿಗೆ, ಇದನ್ನು ಮೋಲ್ಡಿಂಗ್ ಮಾಡುವ ಸಲುವಾಗಿ ಉಪಯೋಗಿಸುವರು. ಬಿದರಿಕಲೆಯಲ್ಲಿ ಇನ್ನೂರಕ್ಕೂ ಹೆಚ್ಚು ಎರಕ ಪೆಟ್ಟಿಗೆಗಳಿವೆ. ಇದನ್ನು ಬಿಳಿಗಾರಿನಂಥ ಐದು ಕಿ.ಗ್ರಾ.ಸೋಪಿನ ನುಣುಪಾದ ಮಣ್ಣಿನಲ್ಲಿ ನೂರು ಗ್ರಾಂ ರಾಂಜಾಪೆಂದಿಗೆ ಔಡಲೆಣೆಯಲ್ಲಿ ಕಲಿಸಿದಾಗ ಅದು ಸ್ವಲ್ಪ ಜಿಗುಟಾಗಿರುತ್ತದೆ. ಅದನ್ನು ಎರಕದ

---

೧೨. ಕೆ.ಎಂ.ಮೈತ್ರಿ, (ಸಂ) ಕರೀಗೌಡ ಬಿಚನಹಳ್ಳಿ, ಬಿದರಿಕಲೆ ಕರಕುಶಲ ಕಲೆಗಳು, ಪುಟ-೧೩೩

ಪೇಟೆಯಲ್ಲಿ ಹಾಕಿ ಸರಿಯಾಗಿ ಕೊಡುವಂತೆ ಒತಾಗಿ ಮುಚ್ಚಳಿಕೆಯ ಇನ್ನೊಂದು ಪೇಟೆ ಅದರ ಮೇಲೆ ಮುಚ್ಚಿ ಬಾಯಿ ಇರುವ ಕಡೆಯಿಂದ ಕಾದ ದ್ರಾವಣ ಹೊಯ್ಯುತ್ತಾರೆ. ಹೀಗೆ ಎರಕದ ಪೇಟಿಯಲ್ಲಿ ಹಾಕಿ ಸರಿಯಾಗಿ ನೋಡುವಂತೆ ಒತ್ತು. ಮುಚ್ಚಳಿಕೆಯ ಇನ್ನೊಂದು ಪೇಟೆ ಅದರ ಮೇಲೆ ಮುಚ್ಚಿ ಬಾಯಿರುವ ಕಡೆಯಿಂದ ... ದ್ರಾವಣ ಹೊಯ್ಯುತ್ತಾರೆ. ಹೀಗೆ ಎರಕದ ಪೇಟೆಯಲ್ಲಿ ಹೊಯ್ಯುವ ದ್ರಾವಣ ಕ್ಷಣದಲ್ಲಿ ಛಾಪ ಒತ್ತದ ಕಲೆಯಾಕಾರ ತಾಳುತ್ತದೆ. ಎರಕರದ ಪೆಟ್ಟಿಗೆ ಬಿದರಿ ಕಲೆಗೆ ರೂಪ ನೀಡುವ ಭೂಮಿಕೆ ನಿಭಾಯಿಸುತ್ತದೆ.

ಅರಾ

ಬಿದರಿ ವಸ್ತುಗಳನ್ನು ಮೋಲ್ಡಿಂಗ್ ಮಾಡಿದ ಮೇಲೆ ಆಕೃತಿಯಲ್ಲಿ ಸ್ವಲ್ಪಮಟ್ಟಿಗೆ ಹೆಚ್ಚು ಕಡಿಮೆ ಆದನ್ನು ಕೊಯ್ಯುವ ಸಲುವಾಗಿ ಬಳಸುವ ಸಾಧಾನ.

ಸೊಲ ಫೈಲ

ಬಿದರಿ ಕಲೆ ಮೋಲ್ಡಿಂಗ್ ಇತ್ಯಾದಿ ಮಾಡಿದಾಗ ಆಕೃತಿ ಒರಟಾಗುವುದನ್ನು ನುಣ್ಣಗೆ ತಿಕ್ಕಲು ಬಳಸುವ ಸಾಧನ. ಇದರಲ್ಲಿ ಐದಾರು ರೀತಿಯ ಆಕೃತಿಗಳಿವೆ.

ಮೋಮ್ ಮೇಣ

೨೫೦ ಗ್ರಾಮ್ ಮೇಣ, ೨೫೦ ಗ್ರಾಂ, ರಾಳ, ೧೦೦ ಗ್ರಾಂ ಪೆಟ್ಟಿಗೆಯ ಬೂದಿ, ೧೦೦ ಗ್ರಾಂ ಒಳ್ಳೆಣೆ ಮಿಶ್ರಣ ಮಾಡಿ ಕುದಿಸಿದಾಗ ಉಂಟಾಗುವುದೇ ಮೋಮ್ ಹೀಗೆ ತಯಾರಿಸಿದ ಮೋಮ್ ಬಿದರಿ ಕಲೆಯ ತಯಾರಿಕೆಯಲ್ಲಿ ಅದರ ಪೊಳ್ಳು ಭಾಗದಲ್ಲೆಲ್ಲಾ. ತುಂಬಿ ಕಲೆಗೆ ರಕ್ಷಣೆ ನೀಡುತ್ತಾರೆ. ಕಾರಣ ಕಲೆಯ ಮೇಲೆ ಚಿತ್ತಾರಗಳನ್ನು ಕೆತ್ತುವಾಗ ಅದು ಒಡೆಯಬಹುದೆಂಬ ಭಯವಿರುತ್ತದೆ. ಮೋಮ್ ಹೊರತೆಗೆಯಲು ಅದನ್ನು ಸ್ವಲ್ಪ ಕಾಯಿಸಿದರೆ ಮೋಮ್ ಹೊರಬರುತ್ತದೆ.

ಚೌಕಿ

ಫೈಲಿಂಗ್ ಮಾಡುವಾಗ, ಚಿತ್ರಕೆತ್ತುವಾಗ, ಬೆಳ್ಳಿ ಸೇರುವಾಗ, ಬಿದರಿ ಕಲೆಯನ್ನು ಚೌಕಿ ಎಂಬ ಮಣ್ಣಿಯ ಮೇಲಿಟ್ಟು ಕೆಲಸ ಮಾಡುತ್ತಾರೆ.

ಪರಕಾರ

ಕೈ ಮರದಂತಿದ್ದು ಕಲಾ ವಸ್ತುಗಳ ಮೇಲೆ ಬಿಡಿಸಲು ಉಪಯೋಗಿಸುವ ಒಂದು ಸಾಧನ.

ಹತೋಡಿ

ವಸ್ತುಗಳಲ್ಲಿ ಚಿತ್ತಾರ ಕೆತ್ತವಾಗ, ಬೆಳ್ಳಿ, ಹುದುಗಿಸುವಾಗ, ಕಲಮುಗಳಿಗೆ ಪೆನ್ನು ಕೈಯಿಂದ ಹೊಡೆಯುವ ಸಾಧನ ಹತೋಡಿಗಳು ಭಿನ್ನಮಾದರಿಯಲ್ಲಿರುತ್ತವೆ.

ಕಲಮ್

ಕಬ್ಬಿಣದ ವಿವಿಧ ಅಳತೆಯ ರಂಧ್ರಗಳ್ಳುಳ ಕಬ್ಬಿಣದ ಪಟ್ಟಿ ಕಲೆಯಲ್ಲಿ ತಾರಿನ ರೂಪದ ಬೆಳಿಕೊಡಿಸುವಾಗ ಕೆತ್ತಿದ ಚಿತ್ತಾರದ ಅಳತೆಗೆ ತಕ್ಕಂತೆ ತಂತಿ ಚಿಕ್ಕ ರಂಧ್ರದಲ್ಲಿ ಹಾಕಿ ಎಳೆಯುತ್ತ ತಳುವಾಗಿ ಮಾಡಿಕೊಳ್ಳಲು ಬರುವಂತಹದಾಗಿದೆ.

ರಂದಾ

ಕಲೆಯಲ್ಲಿ ಬಿಳಿ ಕೊಡಿಸಿದ ಮೇಲೆ ತಿಕ್ಕಿ ನುಣ್ಣುಗೆ ಮಾಡಲು ಬಳಸುವ ಸಾಧನ ಇದಕ್ಕೆ ಫೈಲಿಂಗ ಬಫಿಂಗ್ ಎಂತಲೂ ಕರೆಯುವರು.

ಬರ್ಮಾ

ಕಲೆಗಳಲ್ಲಿ ರಂಧ್ರ ಹಾಕಲು ಬಳಸುವ ಸಾಧನ.

ಸಾವ

ಬಿದರಿ ಕಲೆಗಳ ಪರಿಕರಗಳಲ್ಲಿ ಚೂಪುಗೊಳಿಸಲು ಇರುವ ಸಾಧನ.

ಮಣ್ಣು

ಬಿದರಿಕಲೆಗೆ ಕೇವಲ ಬೀದರ ಕೋಟೆಯಲ್ಲಿ ಲಭ್ಯವಿರುವ ರಂಗೇರಿಸುವ ವಿಶಿಷ್ಟ ಗುಣವುಳ್ಳ ಮಣ್ಣಿಗೆ ತಾಕತ್ತಿದ್ದೆ. ಕೋಟೆಯ ಹತ್ತಾರು ಸ್ಥಳಗಳಲ್ಲಿ ಲಭ್ಯವಿದ್ದು, ಬಿದರಿ ಕಲೆಯ ಕುಶಲಕರ್ಮಿಗಳಿಂದ ಸರಳವಾಗಿ ಪತ್ತೆ ಹಚ್ಚಬಹುದಾಗಿದೆ. ಮಣ್ಣಿನಲ್ಲಿಯ ಉಪ್ಪು, ಖಾರ, ಹಾಗೂ ವಿಶಿಷ್ಟ ರೀತಿಯ ವಾಸನೆಯಿಂದ ಕುಶಲಕರ್ಮಿಗಳು ಈ ಮಣ್ಣನ್ನು ಪತ್ತೆ ಹಚ್ಚುತ್ತಾರೆ.ಈ ಮಣ್ಣಿಗೆ ಬೆಳೆಯುವ ಗುಣವಿದೆ ಎಂಬುದು ಕುಶಲಕರ್ಮಿಗಳ ನಂಬಿಕೆಯಾಗಿದೆ. ೫೦೦ ವರ್ಷಗಳಿಂದಲೂ ಬಳಸುತ್ತಿರುವ ಈ ಮಣ್ಣು ಇನ್ನೂ ಬರಿದುಗುವ ಸೂಚನೆಗಳಿಲ್ಲದಿರುವುದೇ ಅವರ ನಂಬಿಕೆಗೆ ಮೂಲ ಕಾರಣವಾಗಿದೆ.[೧೩]

**೫.೬. ಬಿದರಿಕಲೆಯ ಸಿದ್ಧತೆಯ ಹಂತಗಳು**

**೧. ಲೋಹಗಳ ಮಿಶ್ರಣಕ್ಕಾಗಿ ಕುದಿಸುವಿಕೆ ಹಂತ**

ಬಿದರಿಕಲೆ ಮಾಡುವ ಮೊದಲ ಹಂತವೇ ಲೋಹ ಮಿಶ್ರಮ ಕ್ರಿಯೆಯಾಗಿದೆ.ಒಂದು ಕಿಲೊ ಸತುವಿಗೆ ೬೦ ಗ್ರಾಂ ತಾಮ್ರ ೧೬.೦ ಈ ಪ್ರಮಾಣದಲ್ಲಿ ಲೋಹಕರಾಗಸಲು ಮೂಸ ಎಂಬೀ ವಿಶೇಷ ಮಣ್ಣಿನ ಮಡಕೆಯಲ್ಲಿ ಹಾಕಿ ಕುದಿಸಿದಾಗ ಲೋಹಗಳು ಕರಗಿ ಸರಿಯಾಗಿ ಮಿಶ್ರಣ ಹೊಂದುತ್ತವೆ.[೧೪] ಇದಕ್ಕೆ ಉಬಾಲನಾ ಎಂದು ಕರೆಯುವರು.

**೨. ಎರಕ ಹೊಯ್ದು ಆಕೃತಿ ತಯಾರಿಸಿ ನಯಗೊಳಿಸುವಿಕೆ**

ಲೋಹಗಳು ಕರಗಿ ಮಿಶ್ರಣಗೊಂಡ ದ್ರಾವಣವನ್ನು ಮಣ್ಣಿನಿಂದ ತಯಾರಿಸಿದ ಎರಕದ ಪೆಟ್ಟಿಗೆಯಲ್ಲಿ ಹಾಕಲಾಗುತ್ತದೆ. ದ್ರಾವಣವು ಗಟಿಗೊಂಡು ಎರಕದ ಪೆಟ್ಟಿಗೆ ಆಕೃತಿ ತಾಳುತ್ತದೆ. ಎರಕದ ಪೆಟ್ಟಿಗೆಯು ಆಕೃತಿಯನ್ನು ಮಣ್ಣಿಗೆ ದ್ರಾವಣವನ್ನು ಅಂಟಿಕೊಳ್ಳದಿರಲೆಂದು ದ್ರಾವಣ ಅದರಲ್ಲಿ ಹೊಯ್ಯುವ ಮೊದಲೆ ಸಂಗಜೀರಾ ಪುಡಿಯನ್ನು ಸಿಂಪಡಿಸಲಾಗುತ್ತದೆ. ಹೀಗೆ ಅಚ್ಚಾದ ಆಕೃತಿಗಳು ಅಲ್ಲಲ್ಲಿಒರಟಾಗಿರುವುದನ್ನು ನುಣ್ಣಗೆ ಮಾಡುವ ಸಲುವಾಗಿ ಆಕೃತಿಗೆ ನಯಗೊಳಿಸುವುದು ಇಲ್ಲವೆ. ಫೈಲಿಂಗ್ ಮಾಡುವುದು ಎನ್ನುತ್ತಾರೆ.

---

೧೩. ಕೆ.ಎಂ.ಮೈತ್ರಿ, (ಸಂ) ಕರೀಗೌಡ ಬಿಚನಹಳ್ಳಿ, ಬಿದರಿಕಲೆ ಕರಕುಶಲ ಕಲೆಗಳು, ಪುಟ-೧೩೪

೧೪. ವಜೀರಬಾಷಾ ಬಗಾಯತ್, ಮುಸ್ಲಿಂ ಅರಸರಕಾಲದ ಚಿತ್ರಕಲೆ,

೩. ಬೆಸುಗೆ ಹಾಕುವುದು ಹಾಗೂ ನಯಗೊಲಿಸುವದು

ನಯಗೊಂಡ ಆಕೃತಿಯ ಬಿಡಿ ಭಾಗಗಳನ್ನು ಒಂದುಗೂಡಿಸಬೇಕಾದಲ್ಲಿ ಅಮೋನಿಯಂ ಕ್ಲೋರೈಡ್ ನವಸಾಗರ ಹಚ್ಚಿ ಬಿಡಿಭಾಗಗಳನ್ನು ಬೆಂಕಿಯ ಮೇಲಿಟ್ಟು ಕಾಯಿಸಿ ಜೋಡುಗಳಲ್ಲಿ ಬೆಸುಗೆ ಹಾಕಲಾಗುತ್ತದೆ. ಈ ಕಾರ್ಯಕ್ಕೆ ಬೆಸುಗೆ ಹಾಕುವುದು, ಇಲ್ಲವೆ ವೆಲ್ಡಿಂಗ್ ಮಾಡುವುದು ಎಂದು ಕರೆಯುತ್ತಾರೆ.ಇದರಲ್ಲಿ ಕೆಲವು ಅಖಂಡ ಆಕೃತಿಗಳಿರುತ್ತವೆ. ಅವುಗಳಿಗೆ ಬೆಸೆಯುವುದು ಅಗತ್ಯವಿಲ್ಲ ಬೆಸುಗೆಯಾದ ಭಾಗದಲ್ಲಿ ತಕ್ಕ ಫೈಲುಗಳಿಂದ ಪುನಃ ತಿಕ್ಕಿ ಆಕೃತಿಗೆ ನಯಗೊಳಿಸಲಾಗುತ್ತದೆ.

೪. ತಾತ್ಕಾಲಿಕ ರಂಗೇರಿಸುವಿಕೆ

ನಯಗೊಂಡ ಬಿದರಿ ಕಲಾಕೃತಿಯ ಮೇಲೆ ಚಿತ್ತಾರಗಳನ್ನು ಕೆತ್ತಲು ಅನುಕೂಲವಾಗಲೆಂದು ಬಿಳಿಯ ಕಲಾಕೃತಿಯ ಮೇಲೆ ನೀಲಾ ತೋತಾ ತಾಮ್ರದ ಸಲ್ಫೇಟ್ ಅನ್ನು ಬಳಿಯಲಾಗುತ್ತದೆ. ಇದರಿಂದ ಸತು ಮತ್ತು ತಾಮ್ರದ ಲೋಹದಿಂದ ಉಂಟಾದ ಬಿಲಿಯ ಕಲಾಕೃತಿಯು ಕಂದು ಬಣ್ಣಕ್ಕೆ ತಿರುಗತ್ತದೆ. ಇದು ತಾತ್ಕಾಲಿಕವಾಗಿದ್ದು ಕಲಾಕೃತಿಯ ಅಂತಿಮ ಹಂತದ ತಯಾರಿಕೆಯ ಮೊದಲೆ ತನ್ನ ಬಣ್ಣ ಕಳೆದುಕೊಳ್ಳುತ್ತದೆ.

೫. ಚಿತ್ತಾರ ಕೆತ್ತುವಿಕೆ

ಬೆಸುಗೆಗೊಂಡ ಕಲಾಕೃತಿಗೆ ತಾಮ್ರದ ಸಲ್ಫೇಟ್ ಬಳಿಯುವಿಕೆಯಿಂದ ಅದು ಕಂದು ಬಣ್ಣಕ್ಕಿಳಿದು ಚಿತ್ತಾರಗಳನ್ನು ಕೆತ್ತಿಸಿಕೊಳ್ಳಲು ಅಣಿಯಾಗುತ್ತದೆ. ಚಿತ್ತಾರಗಳನ್ನು ಕೆತ್ತುವ ಮುನ್ನ ಕಲಾಕೃತಿಯ ಪೊಳ್ಳು ಭಾಗದಲ್ಲಿ ಮೋಮನ್ನು ತುಂಬುತ್ತಾರೆ. ಇದರಿಂದ ಕಲಾಕೃತಿ ಒಡೆಯುವುದಿಲ್ಲ ಜೊತೆಗೆ ಚಪ್ಪಟೆ ಕಲ್ಲಿನ ಮೇಲೆಯೂ ಮೋಮ್ ಹಾಕಿ ಕಲಾಕೃತಿಯು ಜರುಗದಂತೆ ಚಿತ್ತಾರ ಕೆತ್ತುವುದಕ್ಕಾಗಿ ಬಿಗಿಯಾಗಿ ಕೂಡಿಸುತ್ತಾರೆ.

ಹೀಗೆ ಕೂಡಿಸಿದ ಕಲಾಕೃತಿಯ ಮೇಲೆಕಲಮ್ ಕಬ್ಬಿಣದ ಮೊಳೆ, ಪೆನ್ನಿನಿಂದ ವಿನ್ಯಾಸವನ್ನು ಬರೆದು ಇನ್ನೊಂದು ಚೂಪಾದ ಕಲಮದಿಂದ ಸ್ವಲ್ಪ ಆಳವಾದ ರೇಖೆ ಬೀಳುವಂತೆ ಕೆತ್ತಲಾಗುತ್ತದೆ. ಇದಕ್ಕೆ ಚಿತ್ತಾರ ಕೆತ್ತುವುದು ಅಥವಾ ಖೋದನಾ ಎನ್ನುವರು. ಬಿದರಿ ಕಲೆಯು ವಿನ್ಯಾಸಗಳಲ್ಲಿ ಇದುವರೆಗೆ ನಾಲ್ಕು ವಿಧಗಳಿವೆ ಅವು ಈ ರೀತಿಯಾಗಿವೆ. ೧. ತರಕಾಪಿ, ೨.ಫುಲರ್ಝುಡಿ, ೩. ಪೀಟ, ೪. ಮಳಿಗೆಗಳು, ಇವುಗಳಲ್ಲಿ ಮಹತಾವಿಯ ವಿನ್ಯಾಸ ಕೇವಲ ತಜ್ಞ ಕುಶಲಕರ್ಮಿಗಳಿಂದ ರಚಿಸಲು ಸಾಧ್ಯ.

೬. ಬೆಳ್ಳಿಬಂಗಾರ ಹುದುಗಿಸುವುದು ಹಾಗೂ ರಂಧ್ರದಿಂದ ಕಲಾಕೃತಿ ನಯಗೊಳಿಸುವಿಕೆ

ಆಕೃತಿಯ ಮೇಲೆ ಚಿತ್ತಾರದ ಕೆತ್ತನೆ ಕೆಲಸ ಮುಗಿದ ಮೇಲೆ ಆ ಕೆತ್ತಿದ ಸ್ಥಳದಲ್ಲೆಲ್ಲ ಶುದ್ಧವಾದ ಬೆಳ್ಳಿ ಅಥವಾ ಬಂಗಾರ ಇಲ್ಲವೆ ಅವೆರಡು ಕಲಮ್ ಹಾಗೂ ಹತೋಡಿಗಳ ಸುತ್ತಿಗೆ ಸಹಾಯದಿಂದ ಕುಶಲಕರ್ಮಿಗಳು ಹುದುಗಿಸುವ ದೃಶ್ಯ ಮನಮೋಹಕವಾಗಿರುತ್ತದೆ.

ಬಂಗಾರದ ಬೆಲೆ ಹೆಚ್ಚಿರುವದರಿಂದ ಇಂದು ಬಿದರಿ ಕಲಾಕೃತಿಗಳಲ್ಲಿ ಬಂಗಾರದ ಬಳಕೆ ಕಡಿಮೆಯಾಗುತ್ತದೆ. ಬೆಳ್ಳಿಯ ಬಳಕೆಅಧಿಕವಾಗಿದೆ. ಬೆಳ್ಳೆ ಹುದುಗಿಸುವಲ್ಲಿ ಎರಡು ವಿಧಗಳಿವೆ. ೧. ವಿನ್ಯಾಸವು ರೇಖೆಯ

ರೂಪದಲ್ಲಿ ಕೆತ್ತಿದರೆ ಅದರಲ್ಲಿ ನಾರಿನಂತೆ ಅಥವಾ ತಂತಿಯಂತೆ ಮಾಡಿಟ್ಟುಕೊಂಡ ಬೆಳ್ಳಿ ಅದಕ್ಕೆ ಬೇಕಾಗುವ ಗಾತ್ರದ ಕಲಮನಿಂದ ಹುದುಗಿಸುತ್ತಾರೆ.

೨. ಅಗಲವುಳ್ಳವಿನ್ಯಾಸದ ಚಿತ್ತಾರಗಳನ್ನು ಕೆತ್ತಿದರೆ ಅದರಲ್ಲಿ ತಗಡಿನ ರೂಪದ ಬೆಳ್ಳಿಯನ್ನು ಹುದುಗಿಸುತ್ತಾರೆ. ಬೆಳ್ಳಿ ಹುದುಗಿಸುವ ಕಾರ್ಯ ಪೂರ್ಣಗೊಂಡ ಮೇಲೆ ಕಲಾಕೃತಿಯಲ್ಲಿ ತುಂಬಿದ್ದ ಮೇಣ ಹೊರತೆಗೆಯಲು ಕಲಾಕೃತಿಯನ್ನು ಸ್ವಲ್ಪಕಾಯಿಸುತ್ತಾರೆ. ಆಗ ಮೇಣ ಸರಳವಾಗಿ ಹೊರಬರುತ್ತದೆ. ಕೆತ್ತಿದ ಚಿತ್ತಾರದಲ್ಲಿ ಬೆಳ್ಳಿ ಅಥವಾ ಬಂಗಾರ ಹುದುಗಿಸಿರುವುದರಿಂದ ಆಕೃತಿಯು ಅಲ್ಲಲ್ಲಿ ಒರಟಾಗಿರುವುದು ಅದನ್ನು ನುಣ್ಣಗೆ ಮಾಡುವ ಸಲುವಾಗಿ ರಂದ್ರ ಮಾಡುತ್ತಾರೆ. ಇದನ್ನು ಬಫಿಂಗ್ ಎಂಬ ಯಂತ್ರದ ಸಹಾಯದಿಂದಲೂ ನಯಗೊಳಿಸಬಹುದಾಗಿದೆ. ಇದನ್ನು ಫೈಲಿಂಗ್, ರಂದಾ, ಬಫಿಂಗ್ ಎಂಬ ಹೆಸರುಗಳಿಂದ ಕರೆಯುತ್ತಾರೆ. ಹೀಗೆ ಫೈಲಿಂಗ್ ಮಾಡುವಾಗ ವಿನ್ಯಾಸದ ಚಿತ್ತಾರದಲ್ಲಿ ಹುದುಗಿಸಲಾದ ಬೆಳ್ಳಿ ಹಾಗೂ ಕಲಾಕೃತಿಗೆ ಯಾವ ಧಕ್ಕೆಯೂ ಆಗುವುದಿಲ್ಲ ಆದರೆ ನೀಲಾ ತೋತಾ ತಾಮ್ರದ ಸಲ್ಫೇಟ್‌ದಿಂದಾಗಿ ತಾತ್ಕಾಲಿಕ ಕಂದು ಬಣ್ಣ ಅಳಿದು ಮೊದಲಿನಂತೆ ಪೂರ್ಣ ಬೆಳ್ಳಿಯದ ಬಂತೆ ಬಿಳಿಯಾಗಿ ಆಕೃತಿ ಕಾಣುತ್ತಿರುತ್ತದೆ. ಇದರಲ್ಲಿ ವಿನ್ಯಾಸದ ಚಿತ್ತಾರಗಳನ್ನು ಕೆತ್ತಿ ಬೆಳ್ಳಿಯನ್ನು ಹುದುಗಿಸಿದರೆಂಬುದು ಕೂಡಾ ಗೊತ್ತಾಗುವುದಿಲ್ಲ. ಆ ಮೇಲೆ ಆಕೃತಿಯನ್ನು ಸೀಮೆ ಎಣ್ಣೆಯಿಂದ ತೊಳೆದು ಕಟಿಗೆಯ ಬಿಳಿಬೂದಿ ಹೊಡೆದು ಬಟ್ಟೆಯಿಂದ ಅಥವಾ ವಿಶೇಷವಾದ ಬ್ರಶ್‌ದಿಂದ ತಿಕ್ಕುತ್ತಾರೆ.[೧೫]

**ಶಾಶ್ವತ ರಂಗೇರಿಸುವಿಕೆ**

ಬಿದರಿ ಕಲೆಯ ಅಂತಿಮ ಹಂತವೇ ರಂಗೇರಿಸುವುದು ೧.೬ ಪ್ರಮಾಣದಲ್ಲಿ ಅಮೋನಿಯಂ ಕ್ಲೋರೈಡ್ ನವಸಾಗರ ಬೀದರ ಕೋಟೆಯಲ್ಲಿ ಮಾತ್ರ ಸಿಗುವ ವಿಶಿಷ್ಟ ಬಗೆಯ ಮಣ್ಣನು ನೀರಿನಲ್ಲಿ ಮಿಶ್ರಣ ಮಾಡಿ ಅಗಲವಾದ ಕಬ್ಬಿಣದ ಬುಟ್ಟಿಯಲ್ಲಿ ಕುದಿಸಿ ತಯಾರಿಸಿದ ದ್ರಾವಣದಲ್ಲಿ ಕಲಾಕೃತಿಗಳನ್ನು ಅದ್ದಿ ತೆಗೆಯುತ್ತಾರೆ ಹೀಗೆ ಅದ್ದಿ ಕಲಾಕೃತಿಗಳನ್ನು ಹೊರಗೆ ತೆಗೆದಾಗ ಕಲಾತ್ಮಕ ರೀತಿಯಲ್ಲಿನ ಸತುವಿನ ಅಂಶದ ಬಿಳಿಯ ಭಾಗವೆಲ್ಲ ಕಪ್ಪಾಗಿಯೂ ಬೆಳ್ಳಿ ಇರುವ ಭಾಗ ಮಾತ್ರ ಮೊದಲ ಬಣ್ಣವನ್ನು ಉಳಿಸಿಕೊಂಡಿರುತ್ತದೆ. ಈ ಕ್ರಿಯೆಗೆ ಶಾಶ್ವತ ರಂಗೇರಿಸುವುದು ಅಥವಾ ಬಣ್ಣ ಏರಿಸುವುದು ಎನ್ನುವರು ಅದ್ದಿ ತೆಗೆದ ಕಲಾಕೃತಿಯನ್ನು ಹತ್ತು ಹದಿನೈದು ನಿಮಿಷ ಕಾಲ ಒಣಗಿಸಿ ನೀರಿನಲ್ಲಿ ತೊಳೆದು ಬಟ್ಟೆಯಿಂದ ಕಡಲೆಕಾಯಿ ಇಲ್ಲವೇ ಕೊಬ್ಬರಿ ಎಣ್ಣೆ ಹಚ್ಚಿ ಸ್ವಲ್ಪ ತುಕ್ಕುತ್ತಾರೆ. ಹೀಗೆ ತುಕ್ಕುವದರಿಂದ ಕಲೆಯಲ್ಲಿ ಬೆಳ್ಳಿಯ ಭಾಗಗಳು ಮಿಂಚುತ್ತಾ ಉಳಿದ ಭಾಗ ಕಪ್ಪಾಗಿ ಮಿನುಗುತ್ತಿರುತ್ತದೆ. ಈ ರೀತಿಯಾಗಿ ತಯಾರಾದ ಬಿದರಿ ಕಲಾಕೃತಿ ಮಾರಾಟಕ್ಕೆ ಸಿದ್ಧವಾಗುತ್ತದೆ.

ಬಿದರಿ ಕಲಾಕೃತಿಗಳು ಜನಸಾಮಾನ್ಯರಿಗಿಂತಲೂ ಶ್ರೀಮಂತ ಜನ ವರ್ಗದ ಬೋಗದ ವಸ್ತುಗಳಾಗಿವೆ. ಚಾರಗುಲ್‌ಶನ್ ಎಂಬ ಹಸ್ತ ಪ್ರತಿಗಳಲ್ಲಿ ಬಿದರಿ ವಸ್ತುಗಳ ಪಟ್ಟಿಯೇ ನೀಡಿದ್ದಾರೆ. ಈ ಗ್ರಂಥವು ಈಗ ಬ್ರಿಟಿಷ್ ಗ್ರಂಥಾಲಯದಲ್ಲಿದೆ. ಆ ಗ್ರಂಥದಲ್ಲಿ ಪಾನದಾನ, ಅಬೋರೇಹ ಬಟ್ಟಲು, ಗಿಲಾಸು ಹಾಗೂ ಭಿನ್ನ

೧೫. ವಜೀರ ಪಾಷಾ ಬಗಾಯತ್, ಮುಸ್ಲಿಂ ಅರಸರಕಾಲದ ಚಿತ್ರಕಲೆ,

ಗಾತ್ರದ ವಿಭಿನ್ನ ಪಾತ್ರೆಗಳು ಸೇರಿವೆ. ಈ ಹಸ್ತ ಪ್ರತಿಯ ಪ್ರಕಾರ ೧೯೦೧ರಲ್ಲಿ ಪತ್ತೆ ಹಚ್ಚಿದ ಮೇಣದ ಬತ್ತಿಯ ಸ್ತಂಭ ಸೇರಿಸಬಹುದು. ಪಟ್ನಾದ ಹಸ್ತಪ್ರತಿಯಲ್ಲಿ ಒಂದು ಕಣ್ಣು ಕುಕ್ಕುವ ಹೊಳಪುಳ್ಳ ಹುಕ್ಕಾ ಬಿದರಿ ವಸ್ತುವಾಗಿತ್ತು. ಚಿತ್ರಕಲೆಯಲ್ಲಿಯೇ ರಚಿತವಾದ ಪ್ರಪ್ರಥಮವಾಗಿ ಗೋಚರಿಸಿದ ಅದ್ಭುತ ಬಿದರಿ ಕಲಾಕೃತಿ ಇದಾಗಿತ್ತು. ಬಿದರಿ ವಸ್ತುವಿನಲ್ಲಿಯೇ ರಚಿತವಾದ ಹುಕ್ಕಾ ಗೋಚರಿಸುವುದು ಸಾಮಾನ್ಯವಾಗಿದೆ. ಹುಕ್ಕಾ ಇದೊಂದು ನೀರಿನ ನಳಿಕೆ ಹೊಂದಿರುವ ಬಿದರಿ ವಸ್ತು ಇದನ್ನು ಪಶ್ಚಿಮದ ಹಬಲ್ ಬಬಲ್ ಎಂದು ಪ್ರಸಿದ್ಧವಾಗಿದೆ. ಇದನ್ನು ಆರಂಭದಲ್ಲಿ ತಂಬಾಕು ಸೇದಲು ಉಪಯೋಗಿಸಿದಂತಿದೆ. ಆಗಿನ ಕಾಲದಲ್ಲಿ ಅಮಲೇರಿಸುವ ಅಫೀಮು ಭಂಗಿ ಕುಡಿಯುವ, ತಿನ್ನುವುದು, ಸಾಮಾನ್ಯವಾಗಿತ್ತು ಬಿದರಿ ವಸ್ತುವಿನಲ್ಲಿ ಹುಕ್ಕಾತಯಾರಾದ ಮೇಲೆ ತಂಬಾಕಿನ ಜೊತೆಗೆ ಅಫೀಮು ಕೂಡಾ ಅಮಲೇರಿಸಲು, ಸೇದಲು ಉಪಯೋಗಿಸಲಾರಂಭಿಸಿದರು. ಕ್ರಿ.ಶ.೧೬೦೪ರಲ್ಲಿ ದಖನ್ ಪ್ರದೇಶ ಬಿಜಾಪುರದಿಂದ ಹುಕ್ಕಾ ಹಾಗೇ ತಂಬಾಕುಗಳ ಪರಿಚಯ ಅಸಾದ್‌ಬೇಗನು ಮೊಗಲ್ ಅರಸರ ಅಕ್ಬರನಿಗೆ ಪರಿಚಯಿಸಿದನೆಂದು ಎಡ್ವರ್ಡ್ ಬೇರಿ ಚಾಪ್ಲೀನ್, ಸರ್ ಥಾಮಸ್ ರೋಯಿಯವರೆಲ್ಲರೂ ವಿವರಣೆ ನೀಡುತ್ತಾರೆ. ಭಾರತದಲ್ಲಿ ಬಿದರಿ ಹುಕ್ಕಾದ ತಳಚೌಕ ಗಡಿಗೆಯಾಕಾರ ಹೊಂದಿದ್ದು ಅದರ ತೆರೆದ ವರ್ತುಲಾಕಾರದ ಬಾಯಿ ಚಿಕ್ಕದಾಗಿರುತ್ತದೆ. ಈ ಗಡಿಗೆಯಾಕಾರದ ಬಿದರಿ ವಸ್ತುವಿನ ಹುಕ್ಕಾದಲ್ಲಿ ನೀರು ಹಾಕಿರುತ್ತಾರೆ. ಅದರ ಮೇಲೆ ಬಂದು .. ನಳಿಕೆಯಿದ್ದು ನಳಿಕೆಯ ಬಾಯಿಯಲ್ಲಿ ಬೆಂಕಿ ಕೆಂಡ ಹಾಕಿ ಹೇಗೆ ಸೊಪ್ಪು ಸೇದಲು ಅನುಕೂಲಕರವಾದ ಒಂದು ಉದ್ದನೆಯ ನಳಿಕೆಯನ್ನು ಹುಕ್ಕಾದ ಬಾಯಿಯ ರಂದ್ರಕ್ಕೆ ಜೋಡಿಸಿರುತ್ತಾರೆ. ಹೊಗೆಸೊಪ್ಪು ಹುಕ್ಕದ ಮೇಲಿರುವ ನಳಿಕೆಯ ಬಟ್ಟಲಲ್ಲಿ ಉಳಿಯುತ್ತಿರುತ್ತದೆ. ಹುಕ್ಕಾದ ಮೇಲ್ಭಾಗದ ನಳಿಕೆಯ ಬಟ್ಟಲಲ್ಲಿ ಬೆಂಕಿಯಿದ್ದು. ಕೆಳಭಾಗದಲ್ಲಿ ನೀರು ತುಂಬಿರುವುದರಿಂದ ಎರಡರ್ ಮಧ್ಯದಲ್ಲಿರುವ ಹೊಗೆಸೊಪ್ಪು ಸೇದುವ ನಳಿಕೆಯ ಜೋಡಣೆ ತಂಪಾದ ಹಾಗೂ ಆಹ್ಲಾದಕರವಾದ ಧೂಮವನ್ನು ಪೂರೈಸುತ್ತದೆ.

ಹೂದಾನಿ ಹೂಗಳನ್ನು ಅಲಂಕರಿಸಲು ಉಪಯೋಗಿಸುವ ಬಿದರಿಕಲಾತ್ಮಕಗಳಲ್ಲಿ ಒಂದು ಹಲವಾರು ವಿಭಿನ್ನ ವಿನ್ಯಾಸಗಳ ಹೂದಾನಿಗಳು ಜನಮನ ಸೂರೆಗೊಳಿಸಿವೆ. ಬಿದರಿ ಕಲಾಕೃತಿಗಳಲ್ಲಿ ಅತ್ಯಂತ ಉಪಯುಕ್ತವೆಂಬುದೇ ಪಾನದಾನ ಎಲೆಯಡಬ್ಬಿ ಭಾರತದಲ್ಲಿ ವಿಭಿನ್ನ ಮಾದರಿಯ ಪಾನದಾನಗಳು ಬಿದರಿ ಕಲಾಕೃತಿಗಳಲ್ಲಿ ಲಭ್ಯವಾಗಿದ್ದು, ಜನೋಪಯೋಗಿಯಾಗಿವೆ. ಪೀಕ್‌ದಾನಿಯು ಸಹ ಪಾನದಾನದಷ್ಟೇ ಬಿದರಿಕಲೆಯಲ್ಲಿ ಮಹತ್ವ ಪಡೆದ ಕಲಾಕೃತಿ ಹತ್ತೊಂಬತ್ತನೆಯ ಶತಮಾನದಲ್ಲಿ ಮೇಜು, ದೀಪಸ್ತಂಭಗಳು ಹಾಗೂ ಶಯನಗ್ರಹದ ದೀಪಸ್ತಂಭಗಳು ಬಿದರಿ ಕಲೆಯಲ್ಲಿ ಮಹತ್ವ ಪಡೆದ ಕಲಾಕೃತಿ ಹತ್ತೊಂಬತ್ತು ನೆಯ ಶತಮಾನದ ಮೇಜು ದೀಪಸ್ತಂಭಗಳು ಹಾಗೂ ಶಯನಗ್ರಹದ ದೀಪಸ್ತಂಭಗಳು ಬಿದರಿ ಕಲೆಯಲ್ಲಿ ಪ್ರಸಿದ್ಧಿ ಹೊಂದಿರುವ ಕಲಾಕೃತಿಗಳಾಗಿವೆ.

ಇಂದು ೨೦೦ ವಿಧಗಳಿಗೂ ಹೆಚ್ಚಿನ ವಸ್ತುಗಳು ತಯಾರಾಗುತ್ತಿದೆ. ಸಿಗರೇಟು ಡಬ್ಬಿಗಳು, ಸಿಗರೇಟು ಬೂದಿ ತಟ್ಟೆಗಳು ಗುಂಡಿಗಳು, ದೀಪದ ಪೀಠಗಳು, ಒಳೆಗಳು, ಕಡಗಗಳು ಬ್ರೋಚ್‌ಗಳು ಸರಗಳು ಕಿವಿಯ

ಓಲೆಗಳು, ಮಾದರಿ ಆಕೃತಿಗಳು ಬಟಲುಗಳು, ತಟ್ಟೆಗಳು, ಬತ್ರ ಮತ್ತು ಕನ್ನಡಿ ಚೌಕಟ್ಟುಗಳು, ಕಾಗದದ ಹೇರು ಪೇಪರ್ ಕ್ಲಿಪ್, ಹಿಡಿಕೆಗಳು ಲೇಖನ ಪೀಠ ಮುಂತಾದ ಲೇಖನಿ ಸಾಮಗ್ರಿಗಳು, ಗೋಡೆ ಮತ್ತು ಮೇಜಿನ ಮೇಲಿಡುವ ಅಲಂಕಾರ ವಸ್ತುಗಳು ಇವುಗಳ ಮೇಲೆ ವರ್ಣಮಯವಾದ ವಿನ್ಯಾಸಗಳಿಂದ ಕೂಡಿದ ಚಿತ್ರಗಳು, ವೃತ್ತ ಹಾಗೂ ತ್ರಿದಳ, ರೇಖಾ ಶಾಸ್ತ್ರದ ಮಾದರಿಗಳು ಮತ್ತು ಸಂಪ್ರದಾಯಿಕ ನಮೂನೆ ಚಿತ್ರಗಳಿಂದ ಒಳಗೊಂಡಿರುತ್ತವೆ. ಪ್ರಾಚೀನ ಬಿದರಿ ಕರಕುಶಲತೆಯಲ್ಲಿ ಮೂರು ಬಗೆಯ ಕಲೆಗಳಿದ್ದವು.

೧. ತೇಹ ನಿಸಾನೆ ಇದರಲ್ಲಿ ಕ್ರಮ ಕ್ರಮವಾಗಿ ಆಂತರಿಕವಾಗಿ ಕತ್ತರಿಸುವುದು.

೨. ತೇರ ನಿಸಾನೆ ಇದರಲ್ಲಿ ತಾನೇ ಜಾರಿದ ಮೇಲ್ಭಾಗದಲ್ಲಿ ತಿಕ್ಕಿರುವದರಿಂದ ಪ್ರತಿಬಿಂಬಿಸುವುದು ಇದನ್ನು ಮುನವದಕರಿ ಎಂದು ಕರೆಯುತ್ತಾರೆ. ಎದ್ದು ತೋರುವಂತೆ ಮಾಡುವದು.

೩. ಮಹತಬಿ ಕವರಿ, ತರಕಸಿ, ಕೆಲಸದಲ್ಲಿ ಕಪ್ಪು ಲೋಹದ ಪಾತ್ರೆಗಳ ಮೇಲೆ ಬೆಳ್ಳಿ ಸೇರಿಸುವುದು.[೧೬]

೧. ಅಕ್ಷರ ವಿನ್ಯಾಸ (ಕ್ಯಾಲಿಯೋಗ್ರಾಫಿ)

ಲಿಪಿ, ರೇಖಾಚಿತ್ರ ಕ್ಯಾಲಿಗ್ರಾಫಿಗಳಿಂದ ಅಲಂಕರಿಸಬಹುದು. ಮುಸ್ಲಿಂ ಕೆತ್ತನೆಯ ವಿಶೇಷತೆ ಸುಂದರ ಲಿಪಿ, ವಿನ್ಯಾಸಗಳು ಕೊರೆದ ರೇಖಾಚಿತ್ರಗಳು ಕೆತ್ತನೆಯ ಕಲೆಯ ಮೂಲಾಧಾರವಾಗಿರುತ್ತವೆ. ಕುರಾನ್‌ದ ಅಲಂಕಾರಿಕ ಬರಹ ಕಟ್ಟಡಗಳಿಗೂ ಗೋಡೆಗಳಿಗೂ ದ್ವಾರಗಳಿಗೂ ವಿಶೇಷ ಶೋಭೆ ತರುವ ವಿಧಾನಗಳಿರುತ್ತವೆ.

ಇಂತಹ ಪ್ರತೀಕವಾದ ಅಲಂಕಾರಿಕ ಕೆತ್ತನೆ ಕಲೆ ಇಸ್ಲಾಮಿನ್ ಸರಳ ಜೀವನ ಕ್ರಮವನ್ನು ಪ್ರತಿಪಾದಿಸುತ್ತದೆ. ಮನೆಗಳು ಮತ್ತು ಅರಮನೆಗಳಲ್ಲಿ ಅಲಂಕಾರಗಳಿರುವುದಿಲ್ಲ ಮಸೀದಿಗಳಲ್ಲಿ ಮಾತ್ರ ಇಂತಹ ಅಲಂಕಾರಗಳಿರುವುದಿಲ್ಲ ಮಸೀದಿಗಳಲ್ಲಿ ಮಾತ್ರ ಇಂತಹ ಅಲಂಕಾರ ಕಲೆಯನ್ನು ಕಾಣಬಹುದು. ಆದರೆ ಇಸ್ಲಾಮೀ ಸಾಮ್ರಾಜ್ಯ ವಿಸ್ತರಿಸಿದಂತೆ ಶ್ರೀಮಂತಿಕೆಯು ಪ್ರಭುತ್ವವೂ ಬೆಲೆಬಾಳುವ ರತ್ನಗಂಬಳಿಯ ಹಾಸುಗಳು, ಸಸ್ಯ ಚಿತ್ರಗಳೊಂದಿಗೆ ಪ್ರಾಣಿಪಕ್ಷಿಗಳ ಚಿತ್ರಗಳು ಈ ಅರಸರ ಕಾಲದ ಘಟಗಳಲ್ಲಿ ಕಾಣಬಹುದು.

ಮಸೀದಿಯ ಮೇಲೆ ಗುಮ್ಮಟವನ್ನು ಕಟ್ಟುವ ಕಲೆ ಡೆಮಾಸ್ಕಸನಿಂದ ಹಾಗೂ ಜೇರು ಸಲೇಮಿನಿಂದ ಪ್ರಾರಂಭವಾದದ್ದು ತಿಳಿದು ಬರುತ್ತದೆ. ಗುಮ್ಮಟವನ್ನು ಮರದಿಂದ ತಯಾರಿಸುತ್ತಾರೆ. ಅದರ ಮೇಲಿನ ಸೀಸ ಹೊದಿಸುವ ಪದ್ಧತಿ ಇತ್ತು. ಒಳಗಡೆ ಗಾರೆ ಮಾಡುತ್ತಿದ್ದರು. ಮಸೀದಿಯಲ್ಲಿ ಕುದುರೆ ಲಾಳಾಕಾರದ ಕಮಾನುಗಳು ಒಳಗಡೆ ಅಮೃತ ಶಿಲೆಯ ಹೊದಿಕೆಯೂ ಇದೆ. ಬೈಸಂಟೈನ್ ವಾಸ್ತುಶಿಲ್ಪದ ಪ್ರಭಾವ ಇದರಲ್ಲಿ ಎದ್ದು ಕಾಣುತ್ತದೆ. ಮಸೀದಿಗಳಲ್ಲಿಯ ಮಿಂಬರ್ ಅಥವಾ ಮೇಅರಾಬ್ ಎಂದು ಕರೆಯುವ ಆರಾಧನಾ ವೇದಿಕೆಗಳೂ ಎತ್ತರದ ಮಿನರತೆಗಳೂ ಇರುತ್ತವೆ. ಇವು ಇರಾನಿನ ವಾಸ್ತುಶಿಲ್ಪದ ಪ್ರಭಾವದಿಂದಾಗಿವೆ.[೧೭]

---

೧೬. ಲಕ್ಕಣ ದಂಡೇಶ (ಸಂ), ಶಿವತತ್ವ ಚಿಂತಾಮಣಿ

17. A.K.Choudhari Bidri, waire, 1961, p-20

ಕುಬ್ಜ ಗುಣಮಟ್ಟಗಳು ಸಹ ಇರಾನಿನ ಕೊಡುಗೆ ಕಮಾನುಗಳು ಮತ್ತು ಮಿನಾರುತುಗಳು ಇರಾನಿನ ಪ್ರಾಚೀನ ಕಲೆಯಾಗಿದ್ದು, ಮಸೀದಿ ಶಿಲ್ಪದ ಒಂದು ಭಾಗವಾಗಿ ಬೆಳೆಯಿತು.

ಇಸ್ಲಾಂ ಧರ್ಮದ ಸ್ಪೇನ್ ದೇಶದಲ್ಲಿ ಪ್ರಸಾರವಾದಾಗ ಯೂರೋಪಿಯನ್ ಕಲಾ ಪ್ರಭಾವ ಸ್ವಲ್ಪಮಟ್ಟಿಗೆ ಕಾಣಿಸಿಕೊಂಡವು, ಮಸೀದಿಗಳೂ ಮದರಸಾಗಳು ಹೊಸಮಾದರಿಯಲ್ಲಿ ತಲೆಯೆತ್ತಿದ್ದ ಕಮಾನುಗಳು ಗುಣಮಟ್ಟಗಳು ಅಲಂಕೃತವಾಗಿಯೂ ಲಿಪಿರೇಖಾ ಚಿತ್ರದ ವಿಶೇಷಾಲಂಕಾರಗಳೂ ವೈಭವೀಕರಣಕ್ಕಾಗಿ ಅಲಂಕಾರ ವಸ್ತು ಜೋಡಣೆಗಳು ಆರಂಭವಾದವು ಇರಾನ್ ಪ್ರಾಚೀನ ಕಾಲದಿಂದಲೂ ಕಟ್ಟಡ ಕಲೆಗೆ ಪ್ರಸಿದ್ಧಿ ಪಡೆದಿದೆ. ಪ್ರಾಚೀನ ಜಗ್ಗುರಟಗಳ ನವೀನ ಮಾದರಿಯ ಪಿರಮಿಡ್ ಗುಣಮಟ್ಟಗಳ ಸ್ತಂಭಗಳ ಕೊಡುಗೆ ನೀಡಿದ್ದು ಇರಾನ್ ದೇಶ, ನವೀನ ಆವಿಷ್ಕಾರಗಳಾಗಿ ಕಮಾನುಗಳು ಗುಮ್ಮಟಗಳು ಮಿನಾರತಗಳು ಬೆಳೆದು ಬಂದವು. ಜ್ಯಾಮಿತಿ ಅಲಂಕಾರ ಒಂದು ಪ್ರಾಚೀನ ಕಲೆ. ಇದೇ ಕಲೆಯ ಪ್ರಭಾವ ಮಸೀದಿ ಮದರಸಾ ಕಟ್ಟಡಗಳ ಮೇಲೂ ಉಂಟಾಯಿತು. ಮಸೀದಿಯ ವಿನ್ಯಾಸಗಳು ಅಲಂಕಾರಿಕ ಚಿತ್ರಗಳಿಗೂ ಜ್ಯಾಮಿತಕ ಅಲಂಕಾರವನ್ನು ಅಳವಡಿಸಲಾಯಿತು. ಇಂತಹ ನವೀನವಾಸ್ತು ಕಲೆಯನ್ನು ಸಾರ್ಸೆನಿಕ್ ಎಂದು ಕರೆಯುತ್ತಾರೆ. ಸಾರ್ಸೆನಿಕ್ ಕಲೆಯು ಸಹ ಇರಾನ್‌ದಿಂದಲೇ ಆರಂಭವಾಗಿರುವುದು ಕಂಡು ಬರುತ್ತದೆ. ಇಸ್ಲಾಮಿಕ್ ವಾಸ್ತು ಶಿಲ್ಪದಲ್ಲಿ ಅತ್ಯಂತ ಜನಪ್ರಿಯವಾದುವೇ ವಾಸ್ತುಶಿಲ್ಪ ಮಸಿದಿಯ ಗೋಡೆಗಳಿಗೆ ಕನ್ನಡಿ ಹೋದಿಸುವುದು ಛಾವಣಿಯಲ್ಲಿ ಮೇಲೆ ಬುರುಡೆ ಲಿಪಿ ರೇಖಾಚಿತ್ರ ಸಸ್ಯಚಿತ್ರ ಮೊದಲಾದವುಗಳನ್ನು ಸಾಮಾನ್ಯವಾಗಿ ಅಲಂಕಾರಕ್ಕಾಗಿ ಬಳಸಲಾಗುತ್ತಿತ್ತು. ಕೆಲವು ಗೋರಿಗಳ ಮೇಲೆ ಚಿನ್ನದ ಲೇಪದ ಗುಮ್ಮಟ ನಿರ್ಮಿಸಿದರು ಈ ರೀತಿಯ ಕಲೆಯು ೧೪ನೇಯ ಶತಮಾನದಲ್ಲಿ ಬೆಳೆಯಿತು. ಸಾಫಾವಿದ ಅರಸರು ಇರಾನೀ ಶಿಲ್ಪಕಲೆಯನ್ನು ವಿಶ್ವವಿಖ್ಯಾತಗೊಳಿಸಿದರು. ಕ್ರಮೇಣ ಇರಾನೀ ಶಿಲ್ಪಕಲೆಯ ಪ್ರಭಾವವು ನೆರೆಹೊರೆಯ ರಾಜ್ಯಗಳಲ್ಲಿಯೂ ಹಬ್ಬಿತು.

* * *

ಅಧ್ಯಾಯ - ಆರು

# ಬೀದರ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ವಸ್ತು ಸಂಗ್ರಹಾಯಗಳಲ್ಲಿನ ಚಿತ್ರಕಲಾಕೃತಿಗಳು



ಅಧ್ಯಾಯ - ಆರು

# ಬೀದರ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳು ಮತ್ತು ವಸ್ತು ಸಂಗ್ರಹಾಯಗಳಲ್ಲಿನ ಚಿತ್ರಕಲಾಕೃತಿಗಳು

ಕರ್ನಾಟಕ ಕಲಾಕ್ಷೇತ್ರಕ್ಕೆ ಉತ್ತರ ಕರ್ನಾಟಕದ ಕೊಡುಗೆ ಅಪಾರವಾಗಿದೆ. ಅದರಲ್ಲಿ ವಿಶೇಷವಾಗಿ ಈ ಭಾಗದ ಕಲಾ ಶಾಲೆಗಳು ಮತ್ತು ಶಿಕ್ಷಣ ಸಂಸ್ಥೆಗಳು ಚಿತ್ರಕಲೆಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರ ವಹಿಸಿದೆ. ಉತ್ತರ ಕರ್ನಾಟಕ ಭಾಗದಲ್ಲಿ ಬೀದರ ಜಿಲ್ಲೆಯು ಐತಿಹಾಸಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಹೊಂದಿದ ಪ್ರದೇಶವಾಗಿದೆ. ಈ ಭಾಗದಲ್ಲಿ ಸ್ಥಾಪಿತವಾದ ಕಲಾ ಶಾಲೆಗಳು ಸಹಿತ ತಮ್ಮ ಕೊಡುಗೆಗಳಿಂದ ಬೀದರ ಜಿಲ್ಲೆಗೆ ಮಾತ್ರವಲ್ಲದೆ. ಸಮಗ್ರ ನಾಡಿಗೆ ವಿಶಿಷ್ಟ ಕೊಡುಗೆಯನ್ನು ನೀಡುತ್ತಾ ಬಂದಿವೆ. ಬೀದರ ಜಿಲ್ಲೆಯ ಶಿಕ್ಷಣ ಸಂಸ್ಥೆಗಳು ಮತ್ತು ಕಲಾಶಾಲೆಗಳು ಸಂಪ್ರದಾಯಿಕ ಮತ್ತು ಆಧುನಿಕ ಕಲಾ ಪದ್ಧತಿಯನ್ನು ಒಟ್ಟಾಗಿ ಬಂದಿವೆ. ತಮ್ಮ ಕಲಾ ಶಿಕ್ಷಣದ ಜೊತೆಗೆ ಈ ಜಿಲ್ಲೆಯ ಜನರ ಕಲಾಭಿರುಚಿಗಳನ್ನು ಹೆಚ್ಚಿಸುವಲ್ಲಿ ಮಹತ್ವದ ಪಾತ್ರವಹಸಿವೆ. ಹೀಗೆ ಕಲಾ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳ ಕುರಿತು ಸ್ಥೂಲವಾಗಿ ವಿವೇಚನೆಯನ್ನು ಇಲ್ಲಿ ಮಾಡಲಾಗಿದೆ.

ಬೀದರ ಜಿಲ್ಲೆಯಲ್ಲಿ ಚಿತ್ರಕಲೆಗಾಗಿ ಮತ್ತು ಕಲಾ ಶಿಕ್ಷಣಕ್ಕಾಗಿ ಮೊಟ್ಟಮೊದಲು ಆರಂಭಗೊಂಡಿದ್ದು, ಬೀದರನ ಯೋಗೀಶ ಚಿತ್ರಕಲಾ ಮಹಾವಿದ್ಯಾಲಯವಾಗಿದೆ. ಉಳಿದ ತಾಲೂಕುಗಳಾದ ಬಸವಕಲ್ಯಾಣ, ಭಾಲ್ಕಿ, ಹುಮನಾಬಾದ ಔರಾದಗಳನ್ನು ಹೊರುತ ಪಡಿಸಿ ಅತೀ ಹೆಚ್ಚಿನ ಮಹತ್ವ ಪಡೆದುಕೊಂಡ ಕಲಾ ಶಾಲೆ ಇದಾಗಿದೆ. ಈ ಕಲಾ ಶಾಲೆಯು ತನ್ನ ಗಮನಾರ್ಹ ಕೊಡುಗೆಗಳಿಂದ ಜಿಲ್ಲೆಯ ಕಲಾ ಕ್ಷೇತ್ರದಲ್ಲಿ ವಿಶಿಷ್ಟ ಸ್ಥಾನಗಳಿಸಿಕೊಂಡಿದೆ. ಅದರ ಸ್ಥೂಲ ನೋಟ ಈ ಕೆಳಗಿನಂತಿದೆ.

೧. ಬೀದರ ಜಿಲ್ಲೆಯಲ್ಲಿ ಚಿತ್ರಕಲಾ ಶಾಲೆಗಳು

೧. ೧. ಯೋಗೀಶ ಚಿತ್ರಕಲಾ ಮಹಾವಿದ್ಯಾಲ, ಬೀದರ.

೧. ೨. ವೀರಭದ್ರೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಹುಮನಾಬಾದ.

೧. ೩. ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಬಸವಕಲ್ಯಾಣ.

೧. ೪. ಡಾ.ಚೆನ್ನಬಸವ ಪಟ್ಟದೇವರು ಚಿತ್ರಕಲಾ ಮಹಾವಿದ್ಯಾಲಯ,ಭಾಲ್ಕಿ.

೧. ೫. ದಿ ನ್ಯಾಚುರಲ್ ಫೈನ್ ಆರ್ಟ್ಸ್, ಬೀದರ.

೧. ೬. ಎಸ್.ಎಂ.ಪಂಡಿತ ಚಿತ್ರಕಲಾ ಮಹಾವಿದ್ಯಾಲಯ, ಬೀದರ.

೧. ೭. ಶುಭದ್ರಿತ ಚಿತ್ರಕಲಾ ಮಹಾವಿದ್ಯಾಲಯ, ಔರಾದ ಬಿ.

ಬೀದರ ಜಿಲ್ಲೆಯಲ್ಲಿ ಪ್ರತಿಯೊಂದು ತಾಲೂಕಿನಲ್ಲಿ ಕಲಾಶಾಲೆಗಳಿವೆ. ಇಂದಿನ ದಿನಗಲ್ಲಿ ಚಿತ್ರಕಲೆ ಕಲಿಯುವ ವಿದ್ಯಾರ್ಥಿಗಳಿಗೆ ತುಂಬ ಪ್ರೋತ್ಸಾಹದಾಯಕವಾಗಿದೆ. ಇಲ್ಲಿನ ಎಲ್ಲಾ ಕಲಾಶಾಲೆಗಳಲ್ಲಿ ತಮ್ಮ ತಮ್ಮ ಕ್ಷೇತ್ರದಲ್ಲಿ ಹಾಗೂ ಕಲೆಯಲ್ಲಿ ತಮ್ಮ ತಮ್ಮ ಕ್ರಿಯಾ ಶೀಲತೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಇಲ್ಲಿ ಇಂದಿನ ಕಲಾ ವಿದ್ಯಾರ್ಥಿಗಳು ಅನೇಕ ಕಲಾ ಶಿಬಿರಗಳು ಏರ್ಪಡಿಸುತ್ತಿದ್ದಾರೆ. ಅನೇಕ ಕಲಾ ಪ್ರತಿಭೋತ್ಸವದಲ್ಲಿ ಭಾಗವಹಿಸುತ್ತಿದ್ದಾರೆ.

ಈ ಜಿಲ್ಲೆಯ ಇಂದು ಚಿತ್ರಕಲೆಯಲ್ಲಿ ತನ್ನದೇ ಆದ ಪ್ರತಿಭೆ ಬೆಳೆಯುತ್ತಿದೆ. ರಾಜ್ಯ ಮಟ್ಟದಲ್ಲಿ ಕೂಡ ರಾಷ್ಟ್ರಮಟ್ಟದಲ್ಲಿ ಚಿತ್ರಕಲಾ ಪ್ರತಿಭೆಯನ್ನು ಭಾಗವಹಿಸುತ್ತಿದ್ದಾರೆ. ಇಲ್ಲಿ ಇದೊಂದು ಹೆಮ್ಮೆಯ ಸಂಗತಿ ಕಾಣಬಹುದು.

೧. ೧. ಯೋಗೀಶ ಚಿತ್ರಕಲಾ ಮಹಾವಿದ್ಯಾಲಯ, ಬೀದರ.

ಬೀದರ ಜಿಲ್ಲೆಯಲ್ಲಿ ಪ್ರಪ್ರಥಮವಾಗಿ ಪ್ರಾರಂಭವಾದ ಕಲಾ ಶಾಲೆಯು ೧೯೮೨ರಲ್ಲಿ ಆರಂಭಗೊಂಡಿತು. ಈ ಸಂದರ್ಭದಲ್ಲಿ ಪ್ರಾಚಾರ್ಯರಾದ ಸಿ.ಎಸ್.ಮಠದ ಸಂಸ್ಥಾಪಕರು ಮತ್ತು ಪ್ರಾಚಾರ್ಯರು. ಈ ಕಲಾ ಶಾಲೆಯು ಒಂದು ಮಾತ್ರ ೧೯೯೪ರಲ್ಲಿ ಅನುದಾನ ಸಹಿತ ಅನುಮೋದನೆಯಾಗಿರುತ್ತದೆ.

ಸಿ.ಎಸ್.ಮಠದ ಅವರು ೧೯೯೯ರಲ್ಲಿ ನಿಧನರಾದ ನಂತರ ಎಂ.ಡಿ.ಶರೀಫ್ ಸದ್ಯದ ಪ್ರಾಚಾರ್ಯರಾಗಿದ್ದಾರೆ.

ಪ್ರಾರಂಭದಿಂದ ೧೯೮೨ನೇ ಸಾಲಿನವರೆಗೆ ಒಂದು ವರ್ಷದ ಡಿ.ಟಿ.ಸಿ ಚಿತ್ರಕಲಾ ತರಬೇತಿ ವರ್ಗ ನಡೆಸಲಾಯಿತು. ೧೯೮೩ನೇ ಸಾಲಿನಿಂದ ರಾಜ್ಯಸರಕಾರ ಹೊಸ ಅಭ್ಯಾಸ ಪತ್ರಿಕೆ ಕೋರ್ಸ್ ಎಂಬ ಎರಡು ವರ್ಷದ ಕೋರ್ಸ್ ಪ್ರಾರಂಭಿಸಲಾಯಿತು. ವಿದ್ಯಾರ್ಥಿಗಳಿಗೆ ಹೆಚ್ಚಿನ ಅಭ್ಯಾಸ ಮಾಡಲು ಅನುವಾಯಿತು. ಡ್ರಾಯಿಂಗ್ ಮತ್ತು ಪೇಂಟಿಂಗ್ ವರ್ಗ ೧೯೯೦-೧೯೯೧ನೇ ಕೋರ್ಸ್ ೧೯೯೧-೧೯೯೨ನೇ ಸಾಲಿಗೆ ಡ್ರಾಯಿಂಗ್ ಮತ್ತು ಪೇಂಟಿಂಗ್ ವರ್ಗ ಪ್ರಾರಂಭಿಸಿ ವಿದ್ಯಾರ್ಥಿಗಳಿಗೆ ಉನ್ನತಮಟ್ಟದ ಚಿತ್ರಕಲೆ ಅಭ್ಯಾಸ ಮಾಡಲು ಬಿ.ಎಲ್.ಡಿ.ಯ ಸಂಸ್ಥೆ ಅನುವು ಮಾಡಿಕೊಟ್ಟಿತು.

ಪ್ರಾರಂಭವಾದ ೧೭ ವರ್ಷದ ನಂತರದಿಂದ ಎಮ್.ಡಿ.ಷರೀಫ್ ಅವರು ಪ್ರಾಚಾರ್ಯರು ಹಾಗೂ ಭೀಮ ರಾವ್ ಕಲ್ಪ, ಯೋಗೀಶ, ಮಹ್ಮದ ಮಕಬುಲ್, ವಿಕ್ಟೋರಾಜ, ಮಾಣಿಕ, ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸತೊಡಗಿದರು.

೨೦೦೧-೦೨ನೇ ಸಾಲಿನಿಂದ ಹೊಸ ಅಭ್ಯಾಸ ಪತ್ರಿಕೆ ರಾಜ್ಯ ಸರಕಾರದಿಂದ ಹೊರಬಂದು ಹೊಸದಾಗಿ ಡಿ.ಎಂ.ಸಿ. ಬದಲಾಗಿ ಫೌಂಡೇಶನ್ ಪ್ರಥಮ ಹಾಗೂ ದ್ವಿತೀಯ, ಮೂರನೇ ವರ್ಷ ಪೇಂಟಿಂಗ್, ನಾಲ್ಕನೇ ವರ್ಷ ಪೇಂಟಿಂಗ್, ಐದನೇ ವರ್ಷ ಪೇಂಟಿಂಗ್ ಹೀಗೆ ಪ್ರಾರಂಭವಾದವು. ಇತ್ತೀಚೆಗೆ ರಾಜ್ಯಾದ್ಯಂತ ಒಂದೇ ಪಠ್ಯಕ್ರಮ ಜಾರಿಯಲ್ಲಿದ್ದು, ಎರಡು ವರ್ಷದ ಕಲಾಮಾಲ ತರಗತಿ ಮತ್ತು ೨೦೧೧-೧೨ ರಿಂದ ಮೂರು ವರ್ಷದ ಬಿ.ವಿ.ಎ. ತರಗತಿಗಳು ನಡೆಯುತ್ತಲಿವೆ.

ಈ ಕಲಾ ಶಾಲೆಯು ಬೀದರ ನಗರ ಹಾಗೂ ಜಿಲ್ಲಾ ಮಟ್ಟದ ಕಲಾ ಪ್ರದರ್ಶನ, ಈ ಶಿಬಿರ, ಚಿಕ್ಕ ಮಕ್ಕಳ ಚಿತ್ರಕಲಾ ಸ್ಪರ್ಧೆ ನಡೆಸಿ ವಿದ್ಯಾರ್ಥಿಗಳಿಗೆ ಹಾಗೂ ಕಲಾ ಶಿಕ್ಷಕರಿಗೆ ಕಲಾವಿದರಿಗೆ ಸ್ಫೂರ್ತಿಧಾಯಕ ಕಾರ್ಯ ಮಾಡಿದೆ. ಅಲ್ಲದೆ ರಾಜ್ಯಮಟ್ಟದ ಹಾಗೂ ರಾಷ್ಟ್ರಮಟ್ಟದ ಕಲಾ ಪ್ರದರ್ಶನ, ಕಲಾ ಶಿಬಿರ, ಗ್ರಾಫಿಕ್ ಕಾರ್ಯಗಾರ, ಲಲಿತ ಕಲೆ ಕುರಿತು ವಿಚಾರ ಸಂಕೀರ್ಣ, ಪ್ರಾತ್ಯಕ್ಷಿಕೆ, ಸ್ಲಾಯಿಡ್ ಶೋ, ಚರ್ಚೆ ನಡೆಸಿ ಸರ್ವಾಂಗೀಣ ಪ್ರಗತಿಗೆ ಕಾರಣವಾಗಿದೆ. ಇದಕ್ಕೆ ಸಂಸ್ಥೆಯ ಹಾಗೂ ಕಲಾ ಶಾಲೆಯ ಸಿಬ್ಬಂದಿ, ಕಲಾ ಶಿಕ್ಷಕರು ಕಲಾವಿದರು ನೆರವಾಗಿದ್ದಾರೆ. ಸ್ಥಳೀಯ ಸಂಘ, ಸಂಸ್ಥೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಶಿಕ್ಷಣ ಇಲಾಖೆಯ ಪ್ರೋತ್ಸಾಹದಿಂದ ಈ ಕಲಾಶಾಲೆಯು ಬೃಹತ್ ಆರ್ಟ್ ಗ್ಯಾಲರಿ, ಸ್ಟೂಡಿಯೋ ವರ್ಗಕೋಣೆಗಳು ಹಾಗೂ ಕಛೇರಿ ಸಿಬ್ಬಂದಿ ವರ್ಗ ಕೋಣೆ ಒಳಗೊಂಡು ಯೋಗೀಶ ಚಿತ್ರಕಲಾ ಮಹಾವಿದ್ಯಾಲಯವು ಸುಂದರವಾಗಿ ಕಂಗೊಳಿಸುತ್ತಿದೆ.

ಈ ಕಲಾ ಶಾಲೆ ಪ್ರಾರಂಭದಲ್ಲಿ ಬೀದರನ ದುರ್ಗಾಪುರ ಹತ್ತಿರ ಪ್ರಾರಂಭವಾಗಿದ್ದು, ಸ್ವಂತ ಕಟ್ಟಡದಲ್ಲಿ ಪ್ರಗತಿ ಹೊಂದುತ್ತಾ ಬಂದು ೨೦೧೨ರಲ್ಲಿ ಹೊಸ ಕಟ್ಟಡಕ್ಕೆ ಬಂತು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು, ಜಿಲ್ಲಾ ಪರಿಷತ್ ಬೀದರ ಇವರುಗಳ ಧನಸಹಾಯದಿಂದ ಇಜೆಲ್, ಡಾಂಕಿಸೀಟ, ಡ್ರಾಯಿಂಗ್ ಟೇಬಲ, ಸ್ಟೂಲು, ಕುರ್ಚಿ,ಇಂತಹ ಪೀಠೋಪಕರಣ ಮತ್ತು ಪೀಠೋಪಕರಣಗಳಂತಹ ಸಲಕರಣೆಗಳು ಕಲಾ ವಿದ್ಯಾಲಯದಲ್ಲಿದ್ದು ಚಿತ್ರಕಲೆಯಲ್ಲಿ ಅಧ್ಯಯನ ಮಾಡಲು ಬೇಕಾದ ಎಲ್ಲ ರೀತಿಯ ಪೀಠೋಪಕರಣ ಪೀಠೋಪಕರಣಗಳು ಇರುತ್ತದೆ.

ಈ ಕಲಾ ಶಾಲೆಯ ವಿದ್ಯಾರ್ಥಿಗಳ ಬೌದ್ಧಿಕ ಬೆಳವಣಿಗೆಯಾಗಲು ಕಲಾ ಇತಿಹಾಸದ ಪುಸ್ತಕ ಹಾಗೂ ಕಲಾವಿದರ ಚಿತ್ರಗಳಿಂದ ಕೂಡಿದ ಗ್ರಂಥಗಳು ಅಲ್ಬಮ್‌ಗಳು ಇಲ್ಲಿವೆ. ಇಲ್ಲದೆ ಹಿರಿಯ ಕಲಾವಿದರ ಕಲಾಕೃತಿಗಳ ಸಂಗ್ರಹವಿದ್ದು, ಕಲಾ ವಿದ್ಯಾರ್ಥಿಗಳಿಗೆ ಅಧ್ಯಯನ ಮಾಡಲು ಉಪಯುಕ್ತವಾಗಿದೆ. ಇದರ ಜೊತೆಗೆ ಆಹ್ವಾನಿತ ಕಲಾವಿದರಿಂದ ಪ್ರಾತ್ಯಕ್ಷಿಕೆ, ಉಪನ್ಯಾಸ, ಸ್ಲೈಡ್ ಶೋ, ಹಾಗೂ ಚರ್ಚೆಗಳ ಮೂಲಕ ವಿದ್ಯಾರ್ಥಿಗಳ ಸರ್ವಾಂಗೀಣ ಪ್ರಗತಿಗೆ ಕಲಾ ಶಾಲೆಯು ಶ್ರಮಿಸುತ್ತಿದೆ.

## ೧.೨. ವೀರಭದ್ರೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಹುಮನಾಬಾದ

ಈ ಚಿತ್ರಕಲಾ ಮಹಾವಿದ್ಯಾಲಯವು ೧೯೯೩-೯೪ರಲ್ಲಿ ಪ್ರಾರಂಭವಾಯಿತು. ಬೀದರ ಜಿಲ್ಲೆಯ ಗ್ರಾಮೀಣ ಭಾಗದ ವಿದ್ಯಾರ್ಥಿಗಳು ಮತ್ತು ಹುಮನಾಬಾದದಿಂದ ಅತ್ಯಂತ ದೂರವಿರುವ ವಿದ್ಯಾರ್ಥಿಗಳಿಗೆ ಈ ಕಲಾ ಶಾಲೆ ಹೆಚ್ಚಿನ ಅನುಕೂಲವನ್ನು ಒದಗಿಸಿಕೊಟ್ಟಿತು. ಈ ಕಲಾ ಶಾಲೆಯ ಪ್ರಾಚಾರ್ಯರಾಗಿ ವಿಠಲ ಎಸ್.ಜಾಧವ ಸಂಸ್ಥಾಪಕ ಹಾಗೂ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದರು. ಈ ಶಾಲೆಯಲ್ಲಿ ವಿವಿಧ ತರಗತಿಗಳು ನಡೆಯಲಿವೆ, ಪ್ರಾರಂಭದಲ್ಲಿ ಎರಡು ವರ್ಷದ ಡಿ.ಎಮ್.ಸಿ.ಕೋರ್ಸ್ ಪ್ರಾರಂಭವಾಗಿ ಕೆಲವು ದಿನಗಳವರೆಗೆ ನಡೆಯಿತು. ಮುಂದೆ ೧೯೯೪-೯೫ರಲ್ಲಿ ೩ನೇ ವರ್ಷದ ಡ್ರಾಯಿಂಗ್, ಪೇಂಟಿಂಗ್ ೪ನೇ ವರ್ಷದ ಪೇಂಟಿಂಗ್ ಹಾಗೂ ಡಿಪ್ಲೋಮಾ ಆರ್ಟ್ ಮಾಸ್ಟರ್ ತರಗತಿಗಳು ಪ್ರಾರಂಭಗೊಂಡವು.

ಈ ಕಲಾ ಶಾಲೆಯಲ್ಲಿ ೫ ಜನ ಉಪನ್ಯಾಸಕರು ಒಬ್ಬ ಪ್ರಾಚಾರ್ಯರು ಆಫೀಸ್ ಸಹಾಯಕರು ಹಾಗೂ ಒಬ್ಬ ಸಿಪಾಯಿ ಸೇವೆ ಸಲ್ಲಿಸುತ್ತಿದ್ದಾರೆ. ಇವರೆಲ್ಲರ ದಕ್ಷವಾದ ಸೇವೆಯಿಂದ ಕಲಾ ಶಾಲೆಯು ಪ್ರಗತಿಯನ್ನು ಸಾಧಿಸುತ್ತಿದೆ. ಇಲ್ಲಿನ ವಿದ್ಯಾರ್ಥಿಗಳು ರಾಜ್ಯಮಟ್ಟದಲ್ಲಿ ಉನ್ನತ ಶ್ರೇಣಿಯಲ್ಲಿ ಪಾಸಾಗಿದ್ದಾರೆ. ಇಲ್ಲಿನ ಅಧ್ಯಾಪಕವರ್ಗ ಪ್ರತಿಭಾವಂತರಾಗಿದ್ದು. ವಿದ್ಯಾರ್ಥಿಗಳಿಗೆ ಪರಿಣಾಮಕಾರಿಯಾದ ಕಲಾ ಶಿಕ್ಷಣವನ್ನು ಕೊಡುತ್ತಲಿದೆ. ಕಲಾಶಾಲೆ ಸೂಕ್ತವಾದ ಪೀಠೋಪಕರಣ ಮತ್ತು ಪಾಠೋಪಕರಣಗಳು ಸಂಗ್ರಹಿತಗೊಂಡಿವೆ. ಈ ಕಲಾಶಾಲೆಯ ಕಾರ್ಯಚಟುವಟಿಕೆಗಳು ವಿವಿಧ ರೀತಿಯಲ್ಲಿವೆ. ಕಲಿಕೆಯ ಜೊತೆಗೆ ಇನ್ನಿತರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ.

ಉದಾಹರಣೆಗೆ:- ಕಿನ್ನಾಳ ಕಲೆಯ ಶಿಬಿರ, ಕಲಾ ಪ್ರದರ್ಶನ, ಕಾರ್ಯಾಗಾರಗಳು, ವಿಚಾರ ಸಂಕೀರ್ಣಗಳು ಇಂತಹ ಅನೇಕ ಕಾರ್ಯಕ್ರಮಗಳನ್ನು ನಡೆಸುವುದರ ಜೊತೆಗೆ ಕಲಾ ಪ್ರಾತ್ಯಕ್ಷಿಕೆಯನ್ನು ಆಗಾಗ ಹಮ್ಮಿಕೊಳ್ಳಲಾಗುತ್ತದೆ. ಈ ಕಲಾ ಶಾಲೆಯಲ್ಲಿ ನಾಡಿನ ಹೆಸರಾಂತ ಕಲಾವಿದರು ಪ್ರಾತ್ಯಕ್ಷಿಕೆ ಮತ್ತು ಉಪನ್ಯಾಸಗಳನ್ನು ನೀಡಿದ್ದಾರೆ. ಇಲ್ಲಿ ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆ ನೀಡಿದ ಕಲಾವಿದರಲ್ಲಿ.

ಈ ಕಲಾಶಾಲೆಯಲ್ಲಿ ಸಧ್ಯ ಎರಡು ವರ್ಷದ ಕಲಾ ಮೂಲ ತರಗತಿ ಮತ್ತು ಮೂರು ವರ್ಷದ ವಿಶೇಷ ಪರಿಣತಿ ತರಗತಿಗಳು ನಡೆಯುತ್ತಲಿವೆ. ಹಾಗೂ ೨೦೦೯-೧೦ A.T.C. ಚಿತ್ರಕಲಾ ಶಿಕ್ಷಕರ ತರಬೇತಿಯು ಸಹ ಈ ಎಲ್ಲ ವಿದ್ಯಾರ್ಥಿಗಳಿಗೆ ಇಲ್ಲಿನ ಶಿಕ್ಷಕರು ಕಲಾ ಶಿಕ್ಷಣವನ್ನು ನೀಡುತ್ತಲಿದ್ದಾರೆ. ಸದ್ಯದ ಸಂದರ್ಭದಲ್ಲಿ ವಿಠಲ ಎಸ್.ಜಾದವರು ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದು, ರೇವಣಸಿದ್ದ ಅವರು ಶಶಿಕಾಂತ, ಗುಂಡಪ್ಪಾ, ಧನರಾಜ ಪಾಟೀಲರು ಸೇರಿದಂತೆ ಈ ಕಲಾ ಶಾಲೆ ತನ್ನ ಸೀಮಿತ ವ್ಯಾಪ್ತಿಯಲ್ಲಿ ಪರಿಣಾಮಕಾರಿಯಾದ ಕಲಾ ಶಿಕ್ಷಣ ನೀಡುವ ಮೂಲಕ ಬೀದರ್ ಜಿಲ್ಲೆಯ ಕಲಾ ಕ್ಷೇತ್ರಕ್ಕೆ ತನ್ನ ಕೊಡುಗೆಯನ್ನು ನೀಡುತಲಿದೆ.

## ೧.೩. ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯ, ಬಸವ ಕಲ್ಯಾಣ

ಬಸವಕಲ್ಯಾಣವು ಐತಿಹಾಸಿಕ, ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯ ಶ್ರೀಮಂತ ನೆಲೆಬೀಡಿನ ತವರೂರು ವಿಶಿಷ್ಟ ನಾಗರಿಕತೆ, ಸಂಪ್ರದಾಯ, ಹೊಂದಿರುವ ನೇರ ನಡೆ ನುಡಿಯ ಸಹೃದಯ, ಸಜ್ಜನ ಶಿವಶರಣರ ತಾಲೂಕು ಎಂದು ಹೆಸರಾಗಿದೆ. ಇಂತಹ ಗತಗಾಲದ ವೈಶಿಷ್ಟ್ಯಗಳನ್ನು ಹೊಂದಿರುವ ಬಸವಕಲ್ಯಾಣ ತಾಲೂಕು ಪಟ್ಟಣದಲ್ಲಿ ಬಸವೇಶ್ವರ ಚಿತ್ರಕಲಾ ಮಹಾವಿದ್ಯಾಲಯವು ೧೯೯೪-೯೫ರಲ್ಲಿ ಪ್ರಾರಂಭವಾಯಿತು. ಪ್ರಭುಲಿಂಗಯ್ಯ ಟಂಕಸಾಲಿಮಠ ಅವರು ಪ್ರಾಚಾರ್ಯರಾಗಿದ್ದಾರೆ. ೧೯೯೪ ರಿಂದ ಪ್ರಸಕ್ತ ಅಂದರೆ ೨೦೧೨ನೇ ಸಾಲಿನವರೆಗೆ ನಿರಂತರವಾಗಿ ಗಡಿಯಾಚೆಗಿನ ವಿದ್ಯಾರ್ಥಿಗಳಿಗೆ ಕಲೆಯ ಶಿಕ್ಷಣವನ್ನು ನೀಡುತ್ತಾ ಬಂದಿರುವ ಈ ಶಾಲೆಯಲ್ಲಿ ನೂರಾರು ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಾರೆ. ಕೆಲ ವಿದ್ಯಾರ್ಥಿಗಳು ನಾಡಿನ ಕಲಾ ಶಾಲೆಗಳಲ್ಲಿ ಪ್ರೌಢ ಶಾಲೆಗಳಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಉದ್ಯೋಗ ಪಡೆದು ಕಲಾ ಸೇವೆ ಮಾಡಿಕೊಂಡಿದ್ದಾರೆ. ಇಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ನಾಡಿನಲ್ಲಿ ನಡೆದ ಕಲಾ ಪ್ರದರ್ಶನ, ಕಲಾ ಶಿಬಿರ ಸಮ್ಮೇಳನದಲ್ಲಿ ಭಾಗವಹಿಸಿದ ಹಾಗೂ ಏಕವ್ಯಕ್ತಿ ಸಮೂಹ ಚಿತ್ರಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿ ವಿದ್ಯಾಲಯಕ್ಕೆ ಹಾಗೂ ಸಂಸ್ಥೆಗೆ ಕೀರ್ತಿ ತಂದಿರುತ್ತಾರೆ.

೧೯೯೪ರಲ್ಲಿ ಡಿ.ಎಂ.ಸಿ ಪ್ರಾರಂಭವಾಗಿದ್ದು, ನಂತರ ಡಿ.ಎಂ.ಸಿ ಪ್ರಥಮ, ಡಿ.ಎಂ.ಸಿ. ದ್ವಿತೀಯ, ಡಿ.ಎಂ.ಸಿ. ೩ನೇವರ್ಷ ವರ್ಣಕಲೆ, ನಾಲ್ಕನೆಯ ವರ್ಷದ ವರ್ಣಕಲೆ, ಐದನೆ ವರ್ಷದ ಆರ್ಟ್ ಮಾಸ್ಟರ್ ಡಿಪ್ಲೋಮಾ ೨೦೦೦ ರಿಂದ ೨೦೦೧ ಫೌಂಡೇಶನ್ ಪ್ರಥಮ ವರ್ಷ, ೨೦೦೧ರಿಂದ ೨೦೦೨ರಲ್ಲಿ ಫೌಂಡೇಶನ್ ದ್ವಿತೀಯ ವರ್ಷ. ೨೦೦೩ರಿಂದ ೩ನೇ ವರ್ಷದ ಚಿತ್ರಕಲೆ, ೨೦೦೩ರಿಂದ ೦೪ರಲ್ಲಿ ನಾಲ್ಕನೆ ವರ್ಷದ ಚಿತ್ರಕಲೆ ೨೦೦೪ರಿಂದ ೨೦೦೫ರಲ್ಲಿ ೫ನೇ ವರ್ಷ ಚಿತ್ರಕಲೆ ಡಿಪ್ಲೋಮಾ, ೨೦೦೫ರಿಂದ ೨೦೦೮ರವರೆಗೆ ತರಗತಿಗಳು ಮುಂದುವರೆದಿದೆ.

ಈ ಕಲಾ ಶಾಲೆಯಲ್ಲಿ ಶಿಕ್ಷಕರಾಗಿ ನಿರ್ವಹಿಸಿದವ ವಿವರ ವಿ.ಪಾಟೀಲ್, ಶ್ರೀಧರ ಚೌಹಾನ್, ತುಕಾರಾಮಕಟ್ಟೀಮನಿ, ವಿರೇಶ ಹಗ್ಗೆ, ರೇವಣ್ಣ ಸಿದ್ಧಪ್ಪ, ವಿಜಯಕುಮಾರ, ಮಹಾಂತೇಶ, ಮಲ್ಲಿಕಾರ್ಜುನ, ದಾರಾಸಿಂಗ್ ಹೀಗೆ ಎಲ್ಲಾ ಶಿಕ್ಷಕರು ಕಲಾ ಶಾಲೆ ಮುಂದುವರೆಯುವಲ್ಲಿ ಸಹಕರಿಸಿದ್ದಾರೆ.

### ಕಲಾ ಪ್ರದರ್ಶನಗಳು, ಹಾಗೂ ಕಲಾ ಚಟುವಟಿಕೆಗಳು

೧. ೧೦ನೇ ವಾರ್ಷಿಕೋತ್ಸವದಲ್ಲಿ ಜೆ.ಎಸ್.ಖಂಡೆರಾವ್ ಅವರು ಪ್ರಾತ್ಯಕ್ಷಿಕೆ ನೀಡಲು ಬಂದಿದ್ದರು.

೨. ಕಿನ್ನಾಳ ಕಲೆಯ ಶಿಬಿರ ಏರ್ಪಡಿಸಿದ್ದರು.

೩. ಕು.ಚರೀತಾ ಕಲಾವಿದೆಯೂ ಪ್ರತ್ಯೇಕ್ಷಿಕೆ ನೀಡಿದ್ದಾರೆ.

೪. ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ವಾರ್ಷಿಕ ಚಿತ್ರಕಲಾ ಪ್ರದರ್ಶನ ಏರ್ಪಡಿಸುತ್ತಾರೆ.

೫. ೧೯೯೪ ರಿಂದ ಪ್ರಸಕ್ತ ಸಾಲಿನವರೆಗೆ ಹಲವಾರು ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಸಾಹಿತ್ಯ ಸಮ್ಮೇಳನಗಳಲ್ಲಿ ರಾಷ್ಟ್ರಮಟ್ಟದ ಚಿತ್ರಕಲಾ ಸ್ಪರ್ಧೆಗಳಲ್ಲಿ ಭಾಗವಹಿಸಿದ ಕೀರ್ತಿ ಈ ಕಲಾ ಶಾಲೆಗೆ ಇದೆ.

### ೧.೪. ಚನ್ನಬಸವ ಪಟ್ಟದೇವರು ಚಿತ್ರಕಲಾ ಮಹಾವಿದ್ಯಾಲಯ, ಭಾಲ್ಕಿ.

ಬೀದರ ಜಿಲ್ಲೆಗೆ ಸೇರಿದ ಇನ್ನೊಂದು ಕಲಾ ಶಾಲೆ ಚನ್ನ ಬಸವಪಟ್ಟದೇವರು ಚಿತ್ರಕಲಾ ಮಹಾವಿದ್ಯಾಲಯವು, ೧೯೯೪-೯೫ರಲ್ಲಿ ಪ್ರಾರಂಭವಾಗಿದ್ದು, ಜೂನ್ ತಿಂಗಳಲ್ಲಿ ಪ್ರಾರಂಭವಾದ ಡಿ.ಎಂ.ಸಿ.ಪ್ರಥಮ ವರ್ಷದಿಂದ ಪ್ರಾರಂಭವಾಗಿ ಹಂತ ಹಂತವಾಗಿ ಬೆಳೆದು ಹೆಮ್ಮರವಾಗಿ ಆರ್ಟ್ ಮಾಸ್ಟರ್ ಜೆ.ಡಿ ಯವರೆಗೆ ಬೆಳೆದು ಸಾವಿರಾರು ವಿದ್ಯಾರ್ಥಿಗಳು ಅಧ್ಯಯನ ಮಾಡುವಂತಾಗಿದೆ. ಇಲ್ಲಿ ಕಲಿತ ವಿದ್ಯಾರ್ಥಿಗಳು ಅನೇಕರು ಸ್ವಂತ ಉದ್ಯೋಗ ಹಾಗೂ ಸರಕಾರಿ ನೌಕರಿಯಲ್ಲಿ ತೊಡಗಿರುವರು ಅತ್ಯುತ್ತಮ ಕಲಾವಿದರಾಗಿ ಹೊರ ಹೊಮ್ಮಿರುವರು, ಪ್ರಾರಂಭದ ಹಂತದಲ್ಲಿ ಬಾಡಿಗೆಕಟ್ಟಡದಲ್ಲಿ ನಡೆಯುತ್ತಿದೆ. ಈ ಚಿತ್ರಕಲಾ ವಿದ್ಯಾಲಯವು ಈಗ ಸ್ವಂತ ಕಟ್ಟಡವನ್ನು ಹೊಂದಿರುವುದು.

ವಿದ್ಯಾಲಯದಲ್ಲಿ ಉತ್ತಮ ಚಿತ್ರ ಕಲಾಕೃತಿಗಳ ಪ್ರದರ್ಶನ, ಫೈಬರ್ ಪೇಂಟಿಂಗ್, ಕರಕುಶಲ ವಸ್ತುಗಳ ತರಬೇತಿ ಶಿಬಿರವನ್ನು ಹಾಕಿಕೊಂಡು ನಿರುದ್ಯೋಗಿ ಆಸಕ್ತಿ ಉಳ್ಳ ಕಲಾವಿದರಿಗೆ ಪ್ರೋತ್ಸಾಹ ನೀಡಲಾಗುವುದು. ರಾಜ್ಯಮಟ್ಟದ ಚಿತ್ರಕಲಾ ಸ್ಪರ್ಧೆಗಳಲ್ಲಿ ವಿದ್ಯಾರ್ಥಿಗಳು ಭಾಗವಹಿಸಿ ವಿದ್ಯಾಲಯಕ್ಕೆ ಕೀರ್ತಿ ತಂದಿರುವುದು. ಈ ವಿದ್ಯಾಲಯವು ಕನ್ನಡ ವಿಶ್ವವಿದ್ಯಾಲಯ ಹಂಪಿ ಅಡಿಯಲ್ಲಿ ಬರುವುದು. ಫೌಂಡೇಷನ್ ಪ್ರಥಮ ವರ್ಷ, ಫೌಂಡೇಶನ್ ದ್ವಿತೀಯ ವರ್ಷ ಹಾಗೂ ವಿಶೇಷ ಪರಿಣಿತಿ iii, iv, v ನೆಯ ವರ್ಷದ ವರ್ಗಗಳು ನಡೆಯುತ್ತಲಿವೆ.

ಉತ್ತಮ ಸಿಬ್ಬಂದಿಯನ್ನು ಹೊಂದಿದ ಭಾಲ್ಕಿಯು ಉತ್ತಮ ಚಿತ್ರಕಲಾ ಶಾಲೆಯಾಗಿ ಕೆಲಸ ಮಾಡುತ್ತಾ ಅರಳು ಚೇತನ ಪ್ರತಿಭೆ ಗುರುತಿಸಿ ಬೆಳೆಸುತ್ತಾ ಬಂದಿರುವುದು ಹೆಮ್ಮೆಯ ವಿಷಯ.

ಈ ಕಲಾ ಶಾಲೆಯು ಸಾಂಪ್ರದಾಯಿಕ ಮತ್ತು ಸಮಕಾಲೀನ ಕ್ಷೇತ್ರಗಳಲ್ಲಿ ತನ್ನದೇ ಆದ ಪಾತ್ರವನ್ನು ನಿರ್ವಹಿಸುತ್ತಲಿದೆ. ಈ ಕಾರಣದಿಂದ ಇಲ್ಲಿಯ ವಿದ್ಯಾರ್ಥಿಗಳು ನೈಜಶೈಲಿಯ ಚಿತ್ರಣ ಮತ್ತು ಆಧುನಿಕ ಚಿತ್ರ ರಚನೆಯಲ್ಲಿ ಸಮಾನವಾದ ಆಸಕ್ತಿ ಹೊಂದಿದವರಾಗಿದ್ದಾರೆ. ಇಲ್ಲಿನ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಕಲಾಕೃತಿಗಳ ಪ್ರದರ್ಶನವು ರಾಜ್ಯ ಮತ್ತು ರಾಷ್ಟ್ರ ಮಟ್ಟಗಳಲ್ಲಿ ಆಗಾಗ ನಡೆಯುತ್ತ ಬಂದಿರುವುದು. ಈ ಕಲಾ ಶಾಲೆಯು ತನ್ನ ಕಲಿಸುವಿಕೆ ಮತ್ತು ಬೋಧನೆಯ ಜೊತೆಗೆ ಕಲೆಗೆ ಸಂಬಂಧಿಸಿದಂತೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಕಲಾ ಪ್ರದರ್ಶನ ಪ್ರಾತ್ಯಕ್ಷಿಕೆ ಶಿಬಿರ ಉಪನ್ಯಾಸ ಇವುಗಳ ಜೊತೆಗೆ ಸಾಮಾಜಿಕವಾಗಿ ಸ್ಪಂಧಿಸುವ ಸಂಗೀತ ಸಾಹಿತ್ಯವನ್ನು ನಾಟಕ ಕ್ಷೇತ್ರಗಳಿಗೆ ಸಂಬಂಧಪಟ್ಟ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಬೀದರ ಜಿಲ್ಲೆಯ ಕಲಾ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆ ನೀಡುತ್ತಲಿದೆ.

### ೧.೫. ನ್ಯಾಚುರಲ್ ಫೈನ್ ಆರ್ಟ್ ಕಾಲೇಜ್ ಆಫ್ ಬೀದರ

ಬೀದರ ಜಿಲ್ಲೆಗೆ ಸೇರಿದ ಇನ್ನೊಂದು ಕಲಾ ಶಾಲೆ ನ್ಯಾಚುರಲ್ ಫೈನ್ ಆರ್ಟ್ ಕಾಲೇಜ್ ಆಫ್ ಬೀದರ ಈ ಕಲಾ ಶಾಲೆಯು ಪ್ರಾರಂಭವಾದದ್ದು, ೧೯೯೮ರಲ್ಲಿ ಈ ಕಲಾಶಾಲೆಯ ಪ್ರಾಚಾರ್ಯರು ಸೈಯದ್

ಯುನೀಸಲೀಯಾಗಿದ್ದು. ಈ ಕಲಾ ಶಾಲೆಯು ಹೊಸ ಅಭ್ಯಾಸ ಪತ್ರಿಕೆ ರಾಜ್ಯ ಸರಕಾರದಿಂದ ಹೊರಬಂದು ಹೊಸದಾಗಿ ಡಿ.ಎಂ.ಸಿ. ಬದಲಾಗಿ ಫೌಂಡೇಶನ್ ಪ್ರಥಮ ಹಾಗೂ ದ್ವಿತೀಯ, ಮೂರನೆಯ ವರ್ಷದ ಪೇಂಟಿಂಗ್ ನಾಲ್ಕನೇ ವರ್ಷದ ಪೇಂಟಿಂಗ್, ಐದನೆ ವರ್ಷದ ಪೇಂಟಿಂಗ್, ಡಿಪ್ಲೋಮಾ ನಡೆದವು ಇತ್ತೀಚೆಗೆ ರಾಜ್ಯಾದ್ಯಂತ ಒಂದೇ ಪಠ್ಯಕ್ರಮ ಜಾರಿಯಲ್ಲಿದ್ದು ಎರಡು ವರ್ಷದ ಕಲಾ ಮೂಲ ತರಗತಿಗಳಿದ್ದು, ೩ ವರ್ಷದ ವಿಶೇಷ ಪರಿಣಿತಿ ತರಗತಿಗಳು ನಡೆಯುತ್ತಲಿವೆ.

ಈ ಕಲಾ ಶಾಲೆಯು ತಾಲೂಕು ಹಾಗೂ ಜಿಲ್ಲಾ ಮಟ್ಟದ ಕಲಾ ಪ್ರದರ್ಶನ ಕಲಾ ಶಿಬಿರ, ಚಿಕ್ಕ ಮಕ್ಕಳ ಚಿತ್ರಕಲಾ ಸ್ಪರ್ಧೆ ನಡೆಸಿ ವಿದ್ಯಾರ್ಥಿಗಳಿಗೆ ಹಾಗೂ ಕಲಾ ಶಿಕ್ಷಕರಿಗೆ ಕಲಾವಿದರಿಗೆ ಸ್ಫೂರ್ತಿದಾಯಕ ಮಾಡಿದೆ ಅಲ್ಲದೇ ರಾಜ್ಯಮಟ್ಟದ ಹಾಗೂ ರಾಷ್ಟ್ರಮಟ್ಟದ ಕಲಾ ಪ್ರದರ್ಶನ, ಕಲಾ ಶಿಬಿರ ಲಲಿತ ಕಲೆಗಳ ಕುರಿತು ವಿಚಾರ ಸಂಕೀರ್ಣ, ಪ್ರಾತ್ಯಕ್ಷಿಕೆ ಸ್ಲೈಡ್ ಶೋ ಚರ್ಚೆ ನಡೆಯಿಸಿ ಸರ್ವಾಂಗೀಣ ಪ್ರಗತಿಗೆ ಕಾರಣವಾಗಿ ಇದಕ್ಕೆ ಸಂಸ್ಥೆಯ ಹಾಗೂ ಕಲಾ ಶಾಲೆಯ ಸಿಬ್ಬಂದಿ, ಕಲಾ ಶಿಕ್ಷಕರು ಕಲಾವಿದರು ನೆರವಾಗಿದ್ದಾರೆ.

ಈ ಕಲಾ ಶಾಲೆಯು ಇಜಲ್ಸ್ ಡಾಂಕಿಸೀಟು, ಡ್ರಾಯಿಂಗ್ ಟೇಬಲ್, ಸ್ಟೂಲ್, ಕುರ್ಚಿ, ಗ್ರಾಫಿಕ್ ಹಾಗೂ ಪಾಠೋಪಕರಣ ಮತ್ತು ಪೀಠೋಪಕರಣಗಳಂತಹ ಸಲಕರಣೆಗಳು ಕಲಾ ವಿದ್ಯಾಲಯದಲ್ಲಿದ್ದು, ಚಿತ್ರಕಲೆಯಲ್ಲಿ ಅಧ್ಯಯನ ಮಾಡಲು ಬೇಕಾಗುವ ಎಲ್ಲ ರೀತಿಯ ಪಾಠೋಪಕರಣ ಪೀಠೋಪಕರಣ ಇರುತ್ತವೆ.

ಈ ಕಲಾ ಶಾಲೆಯು ಉಪನ್ಯಾಸಕರು, ಸಂದೀಪ ಸಜ್ಜನ, ಭರತ, ಅನೀಲರಾಜ ಈ ಮೂವರು ಉಪನ್ಯಾಸಕರು ಚಿತ್ರಕಲಾ ಶಾಲೆಯನ್ನು ಅಚ್ಚುಕಟ್ಟಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ.

**೧.೬. ಎಸ್.ಎಂ.ಪಂಡಿತ ಮಹಾವಿದ್ಯಾಲಯ, ಬೀದರ**

ಬೀದರ ಜಿಲ್ಲೆಯಲ್ಲಿಯೇ ಇರುವ ಇನ್ನೊಂದು ಕಲಾ ಶಾಲೆ ಡಾ.ಎಸ್.ಎಂ.ಪಂಡಿತ್ ಮಹಾವಿದ್ಯಾಲವು ೧೯೯೫ರಲ್ಲಿ ಪ್ರಾರಂಭವಾಯಿತು. ಇದರ ಅಧ್ಯಕ್ಷರು ಹಾಗೂ ಪ್ರಾಚಾರ್ಯರು ಚಂದ್ರಶೇಖರ ಚಕ್ಕಿಯವರಾಗಿದ್ದು. ಸದ್ಯದಲ್ಲಿ ರೇವಣ್ಣ ಸಿದ್ದಪ್ಪ ದೊಳೆಯವರು ಪ್ರಾಚಾರ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದು, ೨೦೦೮ರಲ್ಲಿ ಈ ಪ್ರಾಚಾರ್ಯಯರು ಸಹ ನಿಧನರಾದ ನಂತರ ಸದ್ಯದಲ್ಲಿ ಪ್ರಾಚಾರ್ಯರಾಗಿ ಹಾಗೂ ಶಾಲೆಯ ಉಪನ್ಯಾಸಕರು, ಚಂದ್ರಕಾಂತ ದರ್ಗಾ, ವಿವೇಕಕುಲಕರ್ಣಿ, ಸಂತೋಷವನ್ನಿಕೇರೆಯವರು. ಈ ಕಲಾ ಶಾಲೆಗೆ ಸೇವೆಸಲ್ಲಿಸುತ್ತಿದ್ದಾರೆ.

ಈ ಕಲಾ ಶಾಲೆಯಿಲ್ಲೂ ಸಹ ಇದೇ ತರಹದ ತರಗತಿಗಳು ನಡೆಯಲಿದ್ದು, ಕಲಾ ಪ್ರಾತ್ಯಕ್ಷಿಕೆ, ಕಲಾ ಪ್ರದರ್ಶನ, ಕಲಾ ಶಿಬಿರ, ರಾಜ್ಯಮಟ್ಟದಲ್ಲಿ ನಡೆಯುತ್ತಲಿರುತ್ತವೆ. ಈ ಕಲಾ ಶಾಲೆಯ ವಿದ್ಯಾರ್ಥಿಗಳ ಬೌದ್ಧಿಕ ಬೆಳವಣಿಗೆಯಾಗಲು ಕಲಾ ಇತಿಹಾಸದ ಪುಸ್ತಕ ಹಾಗೂ ಕಲಾವಿದರ ಚಿತ್ರಗಳಿಂದ ಕೂಡಿದ ಗ್ರಂಥಗಳು ಅಲ್ಬಮ್‌ಗಳು ಇಲ್ಲಿವೆ. ಕಲಾ ವಿದ್ಯಾರ್ಥಿಗಳಿಗೆ ಉಪಯುಕ್ತವಾಗಿದೆ.

ಈ ಕಲಾಶಾಲೆಯು ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲತೆಯನ್ನು ಒದಗಿಸಿಕೊಟ್ಟಿದ್ದು. ಈ ಜಿಲ್ಲೆಯ ಕಲಾಕ್ಷೇತ್ರದಲ್ಲಿ ಮಹತ್ವದ ಪಾತ್ರವಹಿಸುತ್ತಲಿದೆ. ಆದರೂಸಹಿತ ಶ್ರೇಷ್ಠ ಪ್ರಾಧ್ಯಾಪಕರ ಕೊರತೆಯನ್ನು ಇದು ಎದುರಿಸುತ್ತಿದೆ.

ಬೀದರನಲ್ಲಿ ಪ್ರಾರಂಭಗೊಂಡ ಕಲಾ ಶಾಲೆಯು ಚಿಕ್ಕದಾಗಿದ್ದು, ಸೀಮಿತ ವ್ಯಾಪ್ತಿಯಲ್ಲಿ ತನ್ನ ಕಾರ್ಯ ಚಟುವಟಿಕೆ ಹಮ್ಮಿಕೊಳ್ಳುವ ಮೂಲಕ ಜಿಲ್ಲೆಯ ಕಲಾ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆ ನೀಡುತ್ತಲಿದೆ. ಕಲಾ ಶಾಲೆಯು ಹೆಚ್ಚಿನ ವಿದ್ಯಾರ್ಥಿಗಳನ್ನು ಹೊಂದಿದ್ದು. ಕಲಾ ಶಿಕ್ಷಣದ ಮೂಲಕ ಬೀದರ ಜಿಲ್ಲೆಗೆ ವಿಶಿಷ್ಟ ಕೊಡುಗೆ ನೀಡುತ್ತಲಿದೆ.

೨. ವಸ್ತುಸಂಗ್ರಹಾಲಯದಲ್ಲಿನ ಚಿತ್ರಕಲಾಕೃತಿಗಳು

ಕಲಾವಿದರಾದ ಕಾನ್‌ಲೆಟ್ಟೋ, ಪಾನಿಗು ಆರ್ಡಿ, ಜರ್ಮನಿಯ ಬೂಕೋಬ್ ಫಿಲಿಪ್ ಹಾಕೆರ್ಟ್, ಫ್ರಾನ್ಸಿಸ್ ಹ್ಯೂಬರ್ಟ್ ರಾಬರ್ಟ್ ಮತ್ತು ಕ್ಲಾಡ್ ಜೋಸೆಫ್ ವೆರ್ ನೆಟಕವರುಗಳಲ್ಲಿ ಕಾಣಿಸಿಕೊಂಡಿತ್ತು. ರಾಷ್ಟ್ರೀಯತೆಯನ್ನು ಗೌರವಿಸುತ್ತಲೇ ತನ್ನ ಕಲಾ ಪ್ರಜ್ಞೆಯ ಎಚ್ಚರವನ್ನು ಕಾಪಾಡಿಕೊಂಡಿರುವ ಉದಾಹರಣೆಗಳು ನಮ್ಮ ದೇಶದಲ್ಲಿ ಇವೆ.

ಅಮೃತಾ ಶೇರಗಿಲ್, ರಚಿಸಿದ ಹಣ್ಣುಮಾರುವವರು, ಅಥವಾ ಕೆ.ಕೆ.ಹೆಬ್ಬಾರ ೧೯೪೦ರಲ್ಲಿ ರಚಿಸಿದ ಭಿಕ್ಷುಕ ಚಿತ್ರ ಮುಂತಾದ ಕೃತಿಗಳನ್ನು ಗಮನಿಸಬಹುದು.

ಪ್ರೊ.ಕೆ.ಜಿ.ಸುಬ್ರಮಣ್ಯನ್ ಅವರು ಹೇಳುವಂತೆ ಹಲವು ಪಂಥಗಳಾಗಿ ಒಡೆದು ಹೋಗಿತ್ತು. ಅಂದರೆ ಹೊಸ ಕಲೆಯು ನಿಜವಾಗಿಯೂ ಭಾರತೀಯವಾಗಬೇಕಾದಲ್ಲಿ ಅದು ಧಾರ್ಮಿಕ ಪೌರಾಣಿಕ, ಭಾವಗೀತಾತ್ಮಕ ರೇಖಾನಿಷ್ಠ, ಸಾಂಕೇತಿಕ, ಪಾರಂಪರಿಕ ಇತ್ಯಾದಿಯಾಗಿ ಇರಬೇಕು ಎಂದು ಕೆಲವು ಬರಹಗಾರರು ಸೃಷ್ಟಿಸಿದ ಕೃತಕ ನಿರ್ಬಂಧಗಳಿಗೆ ಕಲಾವಿದರು ಸಿಕ್ಕಿಕೊಂಡರು. ಇಂಥ ಸಂಕುಚಿತ ದೃಷ್ಟಿಯ ಪರಿಣಾಮಗಳೇ ಶೈಲಿಯ ಚಾತುರ್ಯ ಮತ್ತು ರೂಪಣಗಳ ಕೆಲಸ ಮೇಲೋಗರಿ ಜೊತೆಗೆ ಪೂರ್ವ ಮತ್ತು ಪಶ್ಚಿಮಗಳ ಮುಖಾಮುಖಿಯ ಕಾರಣ ಕಲೆಯನ್ನು ಶೈಲಿಗಳು ಅಥವಾ ಪದ್ಧತಿಗಳು ಎಂಬುದಾಗಿ ಸರಳಿಕರಿಸುವ ಧೋರಣೆ ಹುಟ್ಟಿತು. ಕರ್ನಾಟಕದ ವಿದ್ಯಾವಂತ ವರ್ಗವು ಆಧುನಿಕ ಪರಿಕಲ್ಪನೆಯಾದ ಅನನ್ಯ ವ್ಯಕ್ತಿನಿಷ್ಠೆಯನ್ನು ಅರಗಿಸಿಕೊಳ್ಳುತ್ತಿದ್ದ ಸಮಯದಲ್ಲಿಯೇ ದೇಶಿಯ ಅನನ್ಯತೆಯ ಬಲವೂ ಈ ಗೊಂದಲದ ಹಿನ್ನೆಲೆಯಲ್ಲಿ ಕೆಲಸ ಮಾಡುತ್ತಿತ್ತು.

ಈ ವೆಳೆಗೆ ಕರ್ನಾಟಕದ ಕಲಾಸನ್ನಿವೇಶವೂ ಚುರುಕುಗೊಂಡಿತ್ತು. ಒಟ್ಟು ನೋಟದಲ್ಲಿ ಈ ವೇಳೆಗಾಗಲೇ ಕ್ಲಿಷ್ಟಗೊಂಡಿದ್ದ, ಇಂಪ್ರೆಷನಿಸಂ ಸರಿಯಲಿಸಂ ಮತ್ತು ಸ್ವದೇಶದಲ್ಲೇ ಕಟು ಟೀಕೆಗೆ ಒಳಗಾಗಿದ್ದ ಜಾನಪದ ತಂತ್ರ ಇತ್ಯಾದಿಗಳ ಅನುಕರಣೆಗಳಿಂದ ಹೆಚ್ಚಿನ ಕಲಾವಿದರು ಬಿಡುಗಡೆ ಹೊಂದಿಲ್ಲ. ಇಂಥ ಸನ್ನಿವೇಶದಲ್ಲೂ ಆಗ ಸಣ್ಣ ಸಂಖ್ಯೆಯ ಕೆಲವಾದರೂ ಕಲಾವಿದರು ಗಂಭೀರವಾಗಿ ಕ್ರಿಯಾ ಶೀಲರಾಗಿದ್ದನ್ನು ಮರೆಯುವಂತಿಲ್ಲ. ಕೆ.ಕೆ.ಹೆಬ್ಬಾರ, ಎಸ್.ಜಿ.ವಾಸುದೇವ್, ಆರಂ.ಎಂ.ಹಡಪದ್ ಮುಂತಾದವರು ಈ ನಿರ್ಮಿತವರ್ಗಕ್ಕೆ ಸೇರುವ ಇನ್ನೊಬ್ಬ ಮುಖ್ಯ ಕಲಾವಿದರು ರುಮಾಲೆ. ಪ್ರಕೃತಿ ಚಿತ್ರಣವು ಕರ್ನಾಟಕದಲ್ಲಿ ಈ ಮೇಲಿನ ಎಲ್ಲಾ

ಅವಧಿಗಳೂ ವಿಶೇಷವಾದ ಆಸಕ್ತಿಗೆ ಗುರಿಯಾದದ್ದೆ, ನಮ್ಮ ಹಲವಾರು ಕಲಾವಿದರು ಈ ಪ್ರಕಾರದಲ್ಲಿ ತೀವ್ರವಾದ ಆಸಕ್ತಿಯನ್ನು ತೋರಿಸಿದ್ದಾರೆ. ಕರ್ನಾಟಕದಲ್ಲಿ ಇವತ್ತಿಗೂ ಪ್ರಕೃತಿ ಚಿತ್ರಣವೂ ಕಲಾ ಶಿಕ್ಷಣದ ಒಂದು ಭಾಗವಾಗಿದೆ.

ನಗರವಾಸಿಗಳಾಗಿ ಉಳಿಯುವ ಹೆಚ್ಚಿನ ಕಲಾವಿದರ ಮುಖ್ಯ ಕಾಳಜಿಗಳು ಮತ್ತು ಶ್ರೇಷ್ಠ ಕೃತಿಗಳು ಕಂಡು ಬರುವುದು ಅವರ ಪ್ರಕೃತಿ ಚಿತ್ರಣಗಳಲ್ಲಿ ಅಲ್ಲ ಎಂಬುದು. ಈ ಹಿನ್ನೆಲೆಯಲ್ಲಿ ಆಶ್ಚರ್ಯಕರ. ಈ ಮಾತಿಗೆ ಒಂದು ಮುಖ್ಯವಾದ ಅಪವಾದವೆಂದರೆ ರುಮಾಲೆ, ಪ್ರಕೃತಿ ಚಿತ್ರಣದಲ್ಲಿ ರುಮಾಲೆಯವರದು ಭಾರತೀಯ ಪಾರಂಪರಿಕ ನಿಲುವಿಗೆ ಹತ್ತಿರವಾದದ್ದು ಎನ್ನಬಹುದು.

ರೂಮಾಲೆ ಮೂಲಭೂತವಾಗಿ ಒಬ್ಬ ಪ್ರಕೃತಿ ಚಿತ್ರಕಾರ ಪ್ರಕೃತಿಯನ್ನು ಅದರ ಆಳ ಹರವುಗಳು ವಿಭಿನ್ನ ಮೈವಳಿಕೆ ಮತ್ತು ವಿವಿಧ ಬಣ್ಣಗಳಿಂದ ಕೂಡಿದ ಸಂಕೀರ್ಣತೆಯೊಂದಿಗೆ ಸೆರೆಹಿಡಿಯುವ ಆಸಕ್ತಿಯೊಂದನ್ನು ಅವರ ಆರಂಭದ ಕೃತಿಗಳಲ್ಲೂ ಕಾಣಬಹುದು. ಕರಿಘಟ್ಟ ಗುಡ್ಡ, ಪಂಪಾಸರೋವರ ೧೯೬೬ ಈ ಕೃತಿಗಳಲ್ಲಿ ನಿರ್ದಿಷ್ಟವಾತಾವರಣವನ್ನು ಸೃಷ್ಟಿಸುವ ಬಲವಿರುವುದೂ ಇದಕ್ಕೆ ಪೂರಕವಾದುದೇ ಇದು ನಂತರ ಅವರ ಕೃತಿಗಳಲ್ಲಿ ಕ್ರಮೇಣ ಮರೆಯಾಗುವುದು.

ರುಮಾಲೆಯವರ ರಚನಾಕ್ರಮವು ಅತ್ಯಂತ ತಾಳ್ಮೆ ಮತ್ತು ಪರಿಶ್ರಮಗಳಿಂದ ಕೂಡಿದಷ್ಟೇ. ಆದರೆ ಅವರ ಯಾವ ಶ್ರೇಷ್ಠ ವರ್ಣ ಚಿತ್ರದಲ್ಲಿಯೂ ಈ ರೀತಿಯ ಬಣ್ಣಗಳ ಗುರುತುಗಳಿಂದ ಅಥವಾ ಕರೆಗಳಿಂದ ಅನುಭವವಾಗುವುದು. ಸಹಜವಾದ ಭಾಗವೇ ಹೊರತು ಕೃತಕವಾಗಿ ಕೌಶಲ್ಯವಲ್ಲ ಅದೇ ರೀತಿ ಆಯಾ ಕೃತಿಯ ಅಂತಿಮ ಪರಿಣಾಮಕ್ಕೆ ಇವು ಪ್ರಸ್ತುತವಾಗದಷ್ಟು ಅನಿವಾರ್ಯತೆಯನ್ನು ಹೊಂದಿದೆ ಎಂಬುದು ಈ ಮೇಲಿನ ಉದಾಹರಣೆಯಿಂದ ಸ್ಪಷ್ಟ ರುಮಾಲೆಯವರು ಜಲವರ್ಣ ಮತ್ತು ತೈಲವರ್ಣಗಳಿಗೆ ಸಹಜವಾದ ಆಯಾ ನಿರ್ದಿಷ್ಟ ಮಾಧ್ಯಮಗಳ ವೈಶಿಷ್ಟ್ಯಗಳನ್ನು ತಮ್ಮ ಕೃತಿಗಳಲ್ಲಿ ಗಣನೆಗೆ ತೆಗೆದುಕೊಂಡಿಲ್ಲ. ಅಂದರೆ ಅವರ ಜಲವರ್ಣ ಪ್ರಕೃತಿಗಳ ರಚನಾಕ್ರಮವೂ ತೈಲವರ್ಣದ ಪ್ರಕೃತಿ ಚಿತ್ರಗಳ ರೀತಿಯದೇ ಮಾಧ್ಯಮವೊಂದರ ವ್ಯಾತ್ಯಾಸಗಳು ಆಯಾ ಕೃತಿಯ ಅಂತಿಮ ಪರಿಣಾಮದಲ್ಲಿ ವಿಶೇಷ ಸ್ಥಾನವನ್ನೇನೋ ಪಡೆದಿಲ್ಲ. ಇದು ರುಮಾಲೆಯವರ ಆಸಕ್ತಿಯ ಇನ್ನೊಂದು ಪ್ರಮುಖವೂ ಹೌದು.

ರುಮಾಲೆಯವರ ಕಲಾ ಪ್ರಜ್ಞೆಯು ಅದೇ ಹೃದಯ ಮತ್ತು ಮನಸ್ಸುಗಳನ್ನು ಆಶ್ರಯಿಸಿ ಆಧ್ಯಾತ್ಮಿಕ ಒಲವಿನ ಪ್ರತ್ಯೇಕ ಆಯಾವನ್ನು ಗೌಣವಾಗಿ ಬಲ್ಲಷ್ಟು ಪ್ರಬಲ ಮತ್ತು ಪ್ರಭಾವ ಶಾಲಿ ಎಂಬುದನ್ನು ಅವರ ಶ್ರೇಷ್ಠ ಪ್ರಕೃತಿಗಳು ಮನದಟ್ಟು ಮಾಡುತ್ತವೆ. ಆದ್ದರಿಂದಲೇ ಅವರು ಭಾವುಕತೆ ಅಥವಾ ಸ್ಥಳೀಕರಣಗಳಿಗೆ ಸುಲಭವಾಗಿ ಶರಣಾಗುವುದಿಲ್ಲ. ಬಣ್ಣ ಮೈವಳಿಕೆ, ಛಾಯ ಮೌಲ್ಯಗಳಂಥ ದೃಶ್ಯಸಾಧನೆಗಳು ಸೃಷ್ಟಿಸುವ ಲಯ, ಜೀವಂತಿಕೆಗಳು ನಮ್ಮ ಮೇಲೆ ಬೀರುವ ಪರಿಣಾಮಗಳ ಆಳವಾದ ಜ್ಞಾನವು ರುಮಾಲೆಯವರಿಗೆ ಸಹಜವಾಗಿ ಬಂದಿದೆ. ಕಲಾಕೃತಿಯೊಂದು ಸಾರ್ಥಕವಾಗಲು ವೈಯಕ್ತಿಕ ತುರ್ತು ಮತ್ತು ಪ್ರಾಮಾಣಿಕ ಕಾಳಜಿಗಳ ಅಧಿಕೃತತೆಯು ಎಷ್ಟು ಅಗತ್ಯ ಎಂಬುದನ್ನು ರುಮಾಲೆಯವರ ಕೃತಿಗಳಲ್ಲಿ ಕರ್ನಾಟಕದ ಸಂದರ್ಭದಲ್ಲಿ ಅತ್ಯಂತ ಪ್ರಸ್ತುತವಾಗಿ ಗಮನಿಸಬಹುದು.

೧. ಸಂಗ್ರಹಾಲಯದಲ್ಲಿನ ಆಕರ್ಷಕ ಭೂದೃಶ್ಯ ಚಿತ್ರಗಳಲ್ಲಿ ಕರ್ನಾಟಕದ ಹೆಸರಾಂತ ಕಲಾವಿದ ಶ್ರೀ ರೂಮಾಲೆ ಚನ್ನಬಸವಯ್ಯ, ಹಳದಿ ವೃಕ್ಷಪ್ರಧಾನವಾದ ಚಿತ್ರ ಇದಾಗಿದ್ದು ಬಿಸಿಲಿನ ಜಳದಲ್ಲಿ ನೆರಳು ಬೆಳಕಿನ ಪ್ರಭಾವ ಹಿನ್ನೆಲೆಯ ಮಟ್ಟದ ದೂರದ ಮರಗಳ ರಚನೆ ಉತ್ತಮವಾಗಿ ಸಂಯೋಜನೆಯಾಗಿದೆ. ಚಿತ್ರದ ಕೇಂದ್ರದಲ್ಲಿ ಹಳದಿ ಹೂವಿನ ಮರದ ಚಿತ್ರವಿದ್ದು, ಕುಂಚದ ಹೊಡೆತಗಳಲ್ಲಿ ನಿರೂಪಿಸಿರುವ ಅವರ ತಂತ್ರಗಾರಿಕೆ ಮೆಚ್ಚುವಂತಹದು ಮರದ ಕೆಳಭಾಗದ ನೆರಳು ಬೆಳಕಿನ ಚೆಲ್ಲಾಟ ಬಳಸಿದ ವಿವಿಧ ಹಳದಿ ವರ್ಣ ಬಿಸಿಲಿನ ನಿರೂಪಣೆ ಇದ್ದು ನೆರಳಿನ ಭಾಗಕ್ಕೆ ನೇರಳೆ ವರ್ಣವನ್ನು ಯಶಸ್ವಿಯಾಗಿ ಬಳಸಲಾಗಿದೆ. ಈ ಕಲಾಕೃತಿ ನೋಡಿದೊಂಡನೆ ಪಾಶ್ಚಾತ್ಯ ಇಂಪ್ರೆಷನಿಸಂ, ಕಲಾವಿದನಾದ ವ್ಯಾನಗೋನ್ ಕಲಾಕೃತಿಗಳ ನೆನಪು ಬರುತ್ತದೆ. ಇಲ್ಲಿ ಬಳಸಿದ ಹಳದಿ ವರ್ಣಗಳ ತಂರಗಗಳಿರಬಹುದು ಕುಂಚದ ಬೀಸುಗಳಲ್ಲರಬಹುದು, ಅಥವಾ ಬಿಸಿಲು ನೆರಳಿನ ಕಣ್ಣಾಮುಚ್ಚಾಲೆಯಿಂದ ಪಾಶ್ಚಾತ್ಯ ಕಲಾವಿದನಾದ ವ್ಯಾನ್‌ಗೋನ, ಗೋದಿಹೊಲ, ಸೂರ್ಯಕಾಂತಿ, ಸೈಪ್ರಸ್ ಮತ್ತು ನಕ್ಷತ್ರಗಳು ತುಂಬಿದ ರಾತ್ರಿಯಂತಹ ಕಲಾಕೃತಿಗಳ ತಂತ್ರಗಾರಿಕೆ ಇಲ್ಲಿ ನೋಡುಗನಿಗೆ ಮರುಕಳುಹಿಸುವಂತೆ ಮಾಡಿದೆ ಎನ್ನಬಹುದು. ಒಟ್ಟಾರೆ ಕರ್ನಾಟಕ ಕಲಾವಿದರಾದ ರೊಮಾಲೆಯವರ ಅನೇಕ ಹೆಸರಾಂತ ಕಲಾಕೃತಿಗಳಲ್ಲಿ ಇದು ಒಂದು ಹೆಚ್ಚು ನೆನಪಿನಲ್ಲಿ ಉಳಿಯುವಂತಹುದು.

೨. ಬಸವ ಕಲ್ಯಾಣದ ವಸ್ತು ಸಂಗ್ರಹಾಲಯದಲ್ಲಿನ ಮತ್ತೊಂದು ಚಿತ್ರಕಲಾಕೃತಿ ಎಸ್.ಕೃಷ್ಣಪ್ಪಾನವರ ರಚಿತ ಕಲಾಕೃತಿ ಇದಾಗಿದ್ದು, ಗಾಢ ನೇರಳೆ ವರ್ಣದ ಮಧುಮಗಳು ಕಿತ್ತಳೆ ವರ್ಣದ ರವಿಕೆ ತೆಳು ಗುಲಾಬಿ ವರ್ಣದ ಉಡುಪುಧರಿಸಿ ನಾಚಿ ಎಡ ಮೊಳಕಾಲನ್ನು ಮಡಚಿ ಅಪ್ಪಿ ಹಿಡಿದು ನಾಚಿ ಕುಳಿತ ಭಂಗಿ ಇಲ್ಲಿದೆ ಆಕೆಯನ್ನು ಸಂಪೂರ್ಣವಾಗಿ ತಲೆಯಿಂದ ಕಾಲಿನವರೆಗೆ ಆವರಿಸಿದ ಕೆಂಪು ವರ್ಣದ ಮೇಲು ಹೊದಿಕೆ ದಾವಣಿ ಪಾರದರ್ಶಕವಾಗಿದ್ದು, ಆಕೆಯ ಮುಖಭಾವನೆ ಮತ್ತು ಆಕೆಯ ಶರೀರದ ಅವಯವಗಳ ಹೊರರೇಖೆಯು ಪರದೆಯಲ್ಲಿ ಕಾಣುವಂತಿದೆ. ಈ ಚಿತ್ರದ ವಿಶೇಷತೆ ಎಂದರೆ ಕುಂಚದ ಹೊಡೆತಗಳ ಆಗಲು ಚಪಟ್ಟೆಯಾಗಿದ್ದು, ಇಡಿ ಚಿತ್ರದಲ್ಲಿನ ಮೃದುತನದ ಭಾವನೆ ಬರುವಂತಹ ಮೈವಳಿಕೆಯ ರಚನೆ ಇಲ್ಲಿದೆ. ಆಕೆಯ ಹಿಂಭಾಗದಲ್ಲಿ ಗಾಢ ಕಿತ್ತಲೆ ವರ್ಣದ ಹಿನ್ನೆಲೆಯಲ್ಲಿ ಶುಭಸೂಚಕವಾದ ಮತ್ತು ಆರು ಮಡಕೆಗಳ ಮೇಲೆ ಇರಿಸಿದ ತೆಂಗಿನ ಕಾಯಿಯ ರಚನೆ ಹಾಗೂ ಆಕೆಯ ಮುಂಭಾಗದಲ್ಲಿನ ತಟ್ಟೆಯೊಂದರಲ್ಲಿರುವ ಕಾಯಿ, ವೀಳ್ಯದೆಲೆಗಳಿಂದ ಕೂಡಿರುವ ರಚನೆ ಇದನ್ನು ವಿಶೇಷ ಸಂದರ್ಭ ಎಂದು ಸೂಚಿಸುವಂತಿದೆ. ವರ್ಣಗಳ ಆಯ್ಕೆ ವರ್ಣಗಳ ಪುನರಾವರ್ತನೆ ಪ್ರಖರ ಮತ್ತು ತಂಪುವರ್ಣಗಳ ಹಾಗೆ ಪೂರಕ ತದ್ವಿರುದ್ದ ವರ್ಣಗಳ ಬಳಕೆಯನ್ನು ಇಲ್ಲಿ ಕಲಾವಿದ ಯಶಸ್ವಿಯಾಗಿ ನಿರೂಪಿಸಿದ್ದಾರೆ.ಕಲ್ಲಿನ ರೇಖಾ ಲಾಲಿತ್ಯ ಆಕೆಯ ಕೈ ಬೆರಳುಗಳ ರಚನೆ ಬಂಗಾಳದ ಕಲಾವಿದರ ವಾಷ್ ತಂತ್ರಗಾರಿಕೆ ಹಾಗೂ ಅಜಂತಾದ ಚಿತ್ರಶೈಲಿಯನ್ನು ನೆನಪಿಸುವಂತಿದೆ. ಒಟ್ಟಿನಲ್ಲಿ ಚಿತ್ರದ ರಚಿ ನೋಡುಗನನ್ನು ಮಂತ್ರಮುಗ್ಧನಾಗಿಸುವಲ್ಲಿ ಎರಡು ಮಾತಿಲ್ಲ.

೩. ಬಸವಕಲ್ಯಾಣದ ವಸ್ತುಸಂಗ್ರಹಾಲಯದಲ್ಲಿನ ಮತ್ತೊಂದು ಆಕರ್ಷಕ ಜಲವರ್ಣ ಮಾಧ್ಯಮದ ಭೂದೃಶ್ಯ ಕ್ಷಿತಿಲಗೊಂಡ ಹಾಳು ಹಂಪೆಯ ದೇವಾಲಯಯೊಂದರ ದೃಶ್ಯ ಇದಾಗಿದೆ. ಒಳಗಿನ ಬಿಸಿಲಿನ

ಪ್ರಭಾವ ಅಲ್ಲಿನ ಕಲ್ಲು ಇಟ್ಟಿಗೆಗಳ ಮೇಲೆ ಚೆಲ್ಲಿದ ರೀತಿ ಹಾಗೂ ಉತ್ತಮ ಸಂಯೋಜನೆ ಇಡೀ ವಾಸ್ತುವಿನ ರಚನೆ ಮುಂದಿನ ಮಂಟಪಗಳ ರಚನೆ ಬಿಸಿಲಿನ ಜಳದಲ್ಲಿ ಅದರ ನೆರಳು ಅಲ್ಲಲ್ಲಿ ಚಿಕ್ಕಮಾನವಾಕೃತಿಗಳ ಈ ದೇವಾಲಯವನ್ನು ಬೃಹತಾಗಿಸುವಲ್ಲಿ ಯಶಸ್ವಿಯಾಗಿದೆ. ಚಿತ್ರದ ರೇಖಾ ವಿವರಣೆ ನೈಜನೆರಳು ಬೆಳಕು ಮೋಡಗಳಿಂದ ಕೂಡಿದ ಆಗಸ ಚಿತ್ರಕ್ಕೆ ಪೂರಕವಾಗಿದೆ. ಹಾಗೂ ಕಲಾವಿದನ ತಾಳ್ಮೆ ಕುಶಲಗಾರಿಕೆಯನ್ನು ಇಲ್ಲಿ ಕಂಡುಕೊಳ್ಳಬಹುದು.

೪. ಇದೇ ವಸ್ತುಸಂಗ್ರಹಾಲಯದ ಮತ್ತೊಂದು ಕ್ಯಾನ್ವಾಸ್‌ನ ಕಲಾಕೃತಿಯಲ್ಲಿ ಬಸವಣ್ಣನ ಎರಡು ಕಿವಿಗಳ ನಡುವಿನಿಂದ ಶಿವಲಿಂಗವನ್ನು ಕಾಣುವ ಒಂದು ಸಂಪ್ರದಾಯ ನೋಟದ ಚಿತ್ರ ಇದಾಗಿದೆ. ಆಯಾತಾಕಾರದ ಈ ಚಿತ್ರ ಹಳದಿ ಮತ್ತು ಕಿತ್ತಲೆ ಬಣ್ಣ ಪ್ರಧಾನವಾಗಿ ಹೊಂದಿದ್ದು, ನೇರಳೆ ಮತ್ತು ನೀಲಿ ಬಣ್ಣ ಪ್ರಧಾನವಾಗಿ ಇಲ್ಲಿ ಬಳಸಲಾಗಿದೆ. ಶಿವಲಿಂಗುವಿನ ಜ್ಯಾಮಿತಿಕ ರಚನೆ ಇಲ್ಲಿನ ಕಮಾನು ಆಯತ ಚೌಕಗಳ ರಚನೆ ಪೂರಕವಾಗಿ ರೇಖಾ ಪ್ರಧಾನವಾದ ಈ ಚಿತ್ರದಲ್ಲಿ ಚಪ್ಪಟೆ ವಿನ್ಯಾಸದ ವರ್ಣಗಾರಿಕೆ ಈ ಕಲಾಕೃತಿಯನ್ನು ಜಾಪದ ಶೈಲಿಗೆ ಸೇರಿಸುತ್ತದೆ. ಉತ್ತಮ ಹೊರರೇಖೆಗಳು ಚಪ್ಪಟೆ ಹಾಗೂ ಕೆಲವೇ ಮಂದವರ್ಣಗಳ ಬಳಕೆಯಲ್ಲಿ ಈ ಕಲಾಕೃತಿ ಸರಳತೆಯಿಂದ ಕೂಡಿದೆ. ಆದರೆ ಚಿತ್ರದ ಹೆಚ್ಚಿನ ಭಾಗ ಕ್ಷಿತಿಲವಾಗಿದ್ದು, ಉಳಿದ ಚಿತ್ರ ಸಂಗ್ರಹಾಲಯದವದ ಬಗ್ಗೆ ಇದರ ಬಗ್ಗೆ ಗಮನಹರಿಸಬೇಕಿದೆ.

೫. ಈ ವಸ್ತು ಸಂಗ್ರಹಾಲಯದಲ್ಲಿನ ಮತ್ತೊಂದು ಹೆಸರಾಂತ ಕಲಾವಿದರು ರುಮಾಲೆವರ ಕೃತಿ ಇದ್ದು, ಜೋಡಿ ಮರಗಳ ಕೆಳಗೆ ನಾಗರಕಲ್ಲುಗಳ ರಚನೆ ಸಂಯೋಜನೆ ವರ್ಣಗಾರಿಕೆ ಸ್ಥಳಾವಕಾಶವನ್ನು ಯಶಸ್ವಿಯಾಗಿ ಬಳಸಿಕೊಂಡ ರೀತಿಯಲ್ಲಿ ಕಲಾಕೃತಿ ನೋಡುಗನಲ್ಲಿ ಹೆಚ್ಚು ನೆನಪಿನಲ್ಲಿ ಉಳಿಯುವಂತಿದೆ. ರುಮಾಲೆಯವರ ಮತ್ತದೆ ನೆರಳಿನ ಚೆಲ್ಲಾಟ ಈ ನೋಡಿ ಮರದ ಕೊಂಬೆ ಮತ್ತು ಎಲೆಗಳ ರಚನೆಯಲ್ಲಿ ಹಾಗೂ ನೆಲದ ಮೇಲಿನ ನೆರಳು ಬೆಳಕಿನ ರಚನೆಯಲ್ಲಿ ಕಾಣುತ್ತೇವೆ. ದೇಶದ ಹಿನ್ನೆಲೆ ಗಾಢ ಹಸಿರಿನ ನೆಲದ ಹಾಸು ಬಿಸಿಲಿನ ಹೊಲದಲ್ಲಿ ಕಾಣುವ ಕಾಲು ಹಾದಿ ಈ ಕಲಾಕೃತಿಯನ್ನು ಇಂಪ್ರೇಶನಿಪಂ ಶೈಲಿಗೆ ಭಾವಮುದ್ರ ಸೇರಿಸುವಲ್ಲಿ ಅನುಮಾವಿಲ್ಲಾ. ಇಲ್ಲಿ ಕಲಾವಿದನ ವಯಕ್ತಿಕ ಶೈಲಿ ತಂತ್ರಗಾರಿಕೆಯನ್ನು ಗಮನಿಸಬಹುದು.

೬. ಈ ವಸ್ತು ಸಂಗ್ರಹಾಲಯದ ಮತ್ತೊಂದು ವರ್ಣ ಕಲಾಕೃತಿ ಇದಾಗಿದ್ದು, ವಿಭಿನ್ನ ವಸ್ತು ಹಾಗೂ ಅಪರೂಪದ ಸಂಯೋಜನಾ ವಿಧಾನವನ್ನು ಸರಳವಾಗಿ ನಿರೂಪಿಸಲಾಗಿದೆ. ಅಜ್ಞಾತ ಕಲಾವಿದನೊಬ್ಬನು ಕಲಾಕೃತಿಯಲ್ಲಿ ಶಿಥಿಲಗೊಂಡ ಕಿಟಕಿಯಿಂದ ನೋಡುವ ಹೊರದೃಶ್ಯದಂತೆ ಇದು ರಚನೆಯಾಗಿದೆ. ಹೊರ ಆವರಣದ ಗೋಡೆ ಅದರ ಮೂಲಕ ಕಾಣುವ ಸಸ್ಯರಾಶಿಯನ್ನು ಕಲಾವಿದ ವಿಭಿನ್ನವಾಗಿ ರಚಿಸಿದ್ದಾನೆ. ಚಿತ್ರದ ಎಡಭಾಗ ಮತ್ತು ಬಲಭಾಗದ ಮೇಲ್ಭಾಗದ ಸ್ಥಳಗಳಲ್ಲಿ ಕಲಾವಿದನು ತಂತ್ರಗಾರಿಕೆಯಲ್ಲಿ ಹೊಸತನ ತೋರಲು ಪ್ರಯತ್ನಿಸಿದ್ದಾನೆ. ಈಡೀ ಚಿತ್ರ ನಾಲ್ಕು ಭಾಗಗಳಾಗಿ ಕಿಟಕಿಗಳಿಗೆಲ್ಲಾ ಅಳವಡಿಸಲಾದ ಮರದ ಹಲಗೆಗಳಿಂದ ರೂಪಿಸಲಾಗಿದೆ. ಅದೇ ಚಿತ್ರದ ಸೌಂದರ್ಯಕ್ಕೆಧಕ್ಕೆ ಬಾರದ ರೀತಿಯಲ್ಲಿ ಅದನ್ನು ಬಳಸಿದ ರೀತಿ ಎಲೆಗಳ ರಚನೆ ಚಿತ್ರದ ಕೇಂದ್ರಕ್ಕೆ ಪೂರಕವಾದ ಹಗ್ಗ ಒಂದನ್ನು ನೈಜವಾಗಿ ಬಿದ್ದ ರೀತಿಯಲ್ಲಿ

ಕಲಾವಿದನ ಜಾಣ್ಮೆಯನ್ನು ಕಾಣುತ್ತೇವೆ. ಮಂದವರ್ಣದಲ್ಲಿ ಇಡೀ ಕಲಾಕೃತಿ ಜೀವಂತ ಎನಿಸಿದರೂ ಕಲಾಕೃತಿಯ ಉಳಿವಿನ ಬಗ್ಗೆ ಸಂಗ್ರಹಾಲಯದವರು ಗಮನ ಹರಿಸುವ ಅವಶ್ಯಕತೆ ಇದೆ. ಪ್ರಸ್ತುತ ಮುಂಬೈನ ಹೆಸರಾಂತ ಕಲಾವಿದ ಸುಹಾಸ್ ಬಾಹುಳ್ಕರ್‌ರವರ ಕಲಾಕೃತಿಯನ್ನು ನೆನಪಿಸುವಂತಹ ಹಳೆಯ ಕಲಾಕೃತಿ ಇದಾಗಿದೆ.

೭. ಈ ವಸ್ತು ಸಂಗ್ರಹಾಲಯದ ಮತ್ತೊಂದು ವರ್ಣಚಿತ್ರ ತಿಳಿ ಹಳದಿ ಮತ್ತು ಹಸಿರಿನ ಹಿನ್ನೆಲೆಯಲ್ಲಿ ಕಪ್ಪು ಗಾಢವರ್ಣದ ಗೂಳಿಯೊಂದರ ಕಲಾತ್ಮಕ, ಸೃಜನಾತ್ಮಕವಾಗಿ ರಚಿಸಿದ ಚಿತ್ರ ಇದಾಗಿದ್ದು, ಚಿತ್ರದಲ್ಲಿ ಗೂಳಿಯ ಶಕ್ತಿ ಗಾಂಭೀರ್ಯ ಮುಂತಾದ ಅಂಶಗಳು ಎದ್ದು ಕಾಣುವಂತಹ ರೇಖಾ ಪ್ರಧಾನ ಚಿತ್ರ ಇದಾಗಿದೆ. ಕಪ್ಪು ಬಿಳಿಯನ್ನು ಕಲಾವಿದ ಇಲ್ಲಿ ಸೂಕ್ಷ್ಮವಾಗಿ ಯಶಸ್ವಿಯಾಗಿ ಹಾಗೂ ಅಷ್ಟು ಪರಿಣಾಮಕಾರಿಯಾಗಿ ಬಳಸಿರುವುದು ಗಮನಾರ್ಹ ಅಂಶವಾಗಿದೆ. ಅತಿರೇಖಿಸಿದ ನೀಳಕೊರಳಿನ ಗೂಳಿಯ ಡುಬ್ಬ ಹಾಗೂ ಕೊರಳಿನಲ್ಲಿನ ನರಿಗೆಗಳು ಈ ಚಿತ್ರವನ್ನು ವಿಶೇಷವಾಗಿಸಿದೆ. ಗೂಳಿಯ ಶಕ್ತಿ ಸೌಂದಯವನ್ನು ಅದರ ನಿಂತಭಂಗಿ ಲಿಂಗದ ರಚನೆ ಬಾಲಬೀಸಿದ ರೀತಿಯಲ್ಲಿ ಗುರುತಿಸಬಹುದು. ಈ ಚಿತ್ರದ ಅನೇಕ ಅಂಶಗಳು ಇಂದಿನ ಉದಯೋನ್ಮುಖ ಕಲಾವಿದರಿಗೆ ಪ್ರೇರಣೆ ನೀಡಿದೆ ಎನ್ನಬಹುದು. ಇದರ ವರ್ಣಗಾರಿಕೆ, ಸಂಯೋಜನೆ, ಚಿತ್ರಿತ ವಸ್ತುವಿನ ಮಾರ್ಮಿಕ ಸೌಂದರ್ಯ ಹೆಚ್ಚು ನೆನಪಿನಲ್ಲಿ ಉಳಿಯುವಂತಿದೆ. ಮೆಸಪೋಟಾಮಿಯಾ, ಹರಪ್ಪಾ, ಮೆಹೇಂಜೋದಾರೊ, ಮಾಯಾ ಮತ್ತು ಈಜಿಪ್ಟಿನ ನಾಗರಿಕತೆಗಳ ಗೂಳಿಯನ್ನು ಇಲ್ಲಿ ನೆನಪಿಸುವಂತಿದೆ.

೩. ಬೀದರ ಚಿದಂಬರಾಶ್ರಮದಲ್ಲಿ ಸಿದ್ಧಾರೂಢ ಮಠದಲ್ಲಿನ ಕಲಾಕೃತಿಗಳು

೧೨ನೇ ಶತಮಾನದಲ್ಲಿ ವಿಶ್ವಕ್ಕೆ ಬೆಳಕನ್ನು ನೀಡಿದ ಪುಣ್ಯಭೂಮಿ ಶಿವಶರಣರ ನಾಡು ಲಲಿತಕಲೆಗಳ ಬೀಡಾದ ಬೀದರ ಜಿಲ್ಲೆಯು ತನ್ನದೇ ಆದಂತ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ.

ನಮ್ಮ ರಾಜ್ಯದಲ್ಲಿ ಅನೇಕ ಮಹಾನ್ ಸ್ತ್ರೀಪುರುಷರು ಸಂತರು ಸಾಧು ಸತ್ಪುರುಷರು ನೆಲೆಸಿ ಹೋಗಿದ್ದಾರೆ. ಅಂತವರಲ್ಲಿ ೧೨ನೇ ಶತಮಾನದಲ್ಲಿ ಮಹಾನ್ ಸಿದಿ ಪುರುಷರಾಗಿದ್ದಾಗ ಸ್ವಾಮಿಗಳು ಬಾಲ್ಯದಿಂದಲೇ ಆಧ್ಯಾತ್ಮದತ್ತ ತೋರಿಸಿ ಅಂದಕಾರದಲಿದ್ದ ಸಮಾಜವನ್ನು ಜ್ಞಾನದ ಬೆಳಕಿನತ್ತ ಕೊಂಡೊಯ್ಯಲು ಪ್ರಯತ್ನಿಸಿದರು. ಅಲ್ಲದೆ, ತಮ್ಮ ಬದುಕಿನುದ್ದಕ್ಕೂ ಅನೇಕ ಪವಾಡಗಳನ್ನು ಮಾಡಿ ತೋರಿಸಿದರು. ಅಂತಹ ಸಿದ್ಧಿ ಪುರುಷರು ಅದರ ಪವಾಡಗಳ ಕುರಿತಾದ ಅನೇಕ ಆಧ್ಯಾತ್ಮಕ ಚಿತ್ರಗಳು ಬೀದರಿನ ಚಿದಂಬರಾಶ್ರಮದಲ್ಲಿ ರಚನೆಗೊಂಡಿವೆ.

ಈ ಎಲ್ಲ ಚಿತ್ರಗಳು ಸಿದ್ಧಾರೂಢರ ಜೀವನದ ಹಾಗೂ ಪವಾಡದ ಸಂಯೋಜನಾ ಚಿತ್ರಗಳಾಗಿದ್ದು, ಅವುಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಕಲಾವಿದ ಬಸವರಾಜ ಮುಗಳಿಯವರು ಈ ದೃಶ್ಯ ಚಿತ್ರಗಳನ್ನು ಒಂದೆ ಅಳತೆಯಲ್ಲಿ ರಚನೆ ಮಾಡಿದ್ದಾರೆ. ಅವುಗಳನ್ನು ಈ ಕೆಳಗಿನಂತೆ ವಿವರಣೆ ಮಾಡಲಾಗಿದೆ.

೧. ಈ ಕಲಾ ಕೃತಿಯಲ್ಲಿ ಬಾಲಕ ಸಿದ್ಧಾರೂಢನನ್ನು ತೊಟ್ಟಿಲಲ್ಲಿ ಹಾಕಿ ನಾಮಕರಮ ಮಾಡಲಾಗುತ್ತದೆ. ಆತನ ತಾಯಿ ತೊಟ್ಟಿಲ ಕೆಳಭಾಗದಲ್ಲಿ ಕುಳಿತುಕೊಂಡಿದ್ದಾಳೆ. ಉಳಿದ ಸ್ತ್ರೀಯರು ಮತ್ತು ಋಷಿಮುನಿ ಬಾಲಕ ಸಿದ್ಧಾರೂಢನನ್ನು ಹರಸುತ್ತಿದ್ದಾರೆ. ತೊಟ್ಟಿಲ ಕೆಳಭಾಗದಲ್ಲಿ ಕಳಸದ ತಂಬಿಗೆ ಆಕರ್ಷಕವಾಗಿದೆ. ಬಲಗಡೆಗೆ ನಿಂತು ಕೊಂಡಿರುವ ಮಹಿಳೆಯೊಬ್ಬಳು ಹೂವಿನ ಬುಟ್ಟಿಹಿಡಿದುಕೊಂಡಿದ್ದಾಳೆ. ಮತ್ತೊಬ್ಬ ಮಹಿಳೆ ಆರತಿಯನ್ನು ಬೆಳಗುತ್ತಿದ್ದಾಳೆ. ಇಲ್ಲಿರುವ ಸ್ತ್ರೀಪುರುಷರೆಲ್ಲರು ಹಣೆಗೆ ವಿಭೂತಿಧಾರಣ ಮಾಡಿದ್ದು, ಸಾಂಪ್ರದಾಯಿಕ ವೇಷ ಭೂಷಣದಿಂದ ಅಲಂಕೃತಗೊಂಡಿದ್ದಾರೆ.

ಹಿನ್ನೆಲೆಯಲ್ಲಿ ಬಾಗಿಲು ಮತ್ತು ಕಿಟಕಿಯನ್ನು ಚಿತ್ರಿಸಲಾಗಿದ್ದು, ಮನೆಯ ಒಳಾಂಗಣವನ್ನು ಪ್ರತಿನಿಧಿಸುತ್ತವೆ. ಇಲ್ಲಿ ಕೆಂಪು, ಹಳದಿ, ಹಸರು, ಮತ್ತು ನೀಲಿವರ್ಣಗಳನ್ನು ಪ್ರಮುಖವಾಗಿ ಬಳಸಲಾಗಿದೆ.

೨. ಈ ಕಲಾಕೃತಿಯಲ್ಲಿ ಎಮ್ಮೆಯು ಅರ್ಧ ಕಾಣುವ ದೃಶ್ಯ ಮತ್ತು ಸುತ್ತಲೂ ಜನರು ನಿಂತಿದ್ದಾರೆ. ಹುಡುಗರು ಚಿಕ್ಕವರು ಅದರ ಪಕ್ಕದಲ್ಲಿ ನಿಂತಿದ್ದಾರೆ. ಹಿಂಬದಿಯಲ್ಲಿಗೀಡ ಮರಗಳು ಆಕಾಶ ಮತ್ತು ಬಲಗಡೆ ಮಹಿಳೆಯರು ನಿಂತಿದ್ದಾರೆ. ಮತ್ತು ಕೆಳಗೆ ಮೂವರು ಸ್ವಾಮಿಗಳು ಬಂದಿರುವ ದೃಶ್ಯ ಅಲ್ಲಿ ತುಂಬಾ ಆಕರ್ಷವಾದ ಎಮ್ಮೆ ಕಾಣುತ್ತಿದೆ. ಮತ್ತು ಒಬ್ಬಳು ಸ್ತ್ರೀಯರು ಆಕರ್ಷವಾಗಿ ಕಾಣಿಸುತ್ತಿದ್ದು. ಹಿನ್ನೆಲೆಯಲ್ಲಿ ಗಿಡ, ಮರ, ಆಕಾಶ ಚಿತ್ರಿಸಲಾಗಿದ್ದು ನೀಲಿ, ಹಸಿರು, ಕೆಂಪು, ಕಂದು, ಕೆಂಪು ವರ್ಣಗಳ ಸ್ವಲ್ಪ ಬಿಳಿ ಬಣ್ಣವನ್ನು ಬಳಸಲಾಗಿದೆ.

೩. ಈ ಕಲಾಕೃತಿಯಲ್ಲಿ ಬಾಲಕ ಸಿದ್ಧಾರೂಢ ಎಳ್ಳಿನ ಮಡಿಕೆ ಹೊಡೆಯುವ ದೃಶ್ಯ ಇದಾಗಿದೆ. ಅದನ್ನು ಅವರ ಗೆಳೆಯರಿಗೆ ಎಳ್ಳು ತೆಗೆದುಕೊಳ್ಳುತ್ತಿರುವ ದೃಶ್ಯ ಮತ್ತು ಸಿದ್ಧಾರೂಢ ತಾಯಿ ಬಂದಿರುವ ದೃಶ್ಯ ಹೊರಗಡೆಯಿಂದ ಬರುವ ಜನರು ಇಲ್ಲಿ ಪ್ರಮುಖವಾಗಿ ಎಳ್ಳಧಾರಳವಾಗಿ ಸುರಿಯುತ್ತಿದೆ. ಕೆಳಗಡೆ ಚಿಕ್ಕ ಮಕ್ಕಳು ಎಳ್ಳು ತೆಗೆದುಕೊಳಿತ್ತಿದ್ದಾರೆ. ತುಂಬಾ ಆಕರ್ಷಿತವಾಗಿ ಆನಂದದಿಂದ ತೆಗೆದುಕೊಳ್ಳಿತ್ತಿರುವ ದೃಶ್ಯ ಹಿನ್ನೆಲೆಯಲ್ಲಿ ಬಾಗಿಲು ಕಿಟಕಿ ಗೋಡೆಯ ಮತ್ತು ಮಹಿಳೆಯೊಬ್ಬಳು ಹೊರಗೆ ಹೋಗುತ್ತಿರುವ ಮತ್ತೊಬ್ಬ ಹುಡುಗ ಬರುತ್ತಿರುವ ದೃಶ್ಯ ಇವು ಮನೆಯ ಒಳಗಾಂಣದಲ್ಲಿ ಪ್ರತಿನಿಧಿಸುತ್ತದೆ. ಇಲ್ಲಿ ಬಾಗಿಲಿದೆ ಕಂದು, ಕೆಂಪು, ಕಿಟಕಿ ನೀಲಿ ಬಣ್ಣ ಗೋಡೆಗೆ ಸ್ವಲ್ಪ ನೀಲಿ ವರ್ಣ ಸ್ತ್ರೀಯರು ಹಸಿರು, ಕೆಂಪು, ಬಳಪದ ಬಣ್ಣಗಳನ್ನು ಪ್ರಮುಖವಾಗಿ ಬಳಸಲಾಗಿದೆ.

೪. ಈ ಕಲಾಕೃತಿಯಲ್ಲಿ ಬಾಲಕ ಸಿದ್ಧಾರೂಢವನ್ನು ಬಸವಣ್ಣನ ಮೇಲೆ ಏರಿ ಕುಳಿತಿರುವ ದೃಶ್ಯ ಮತ್ತು ಅವನ ಹಂದೆಗಡೆ ನಾಲ್ಕು ಜನರು ಬಂದು ಹೊಡಿತಿರುವ ದೃಶ್ಯ ಮತ್ತು ಇನ್ನೊಬ್ಬನು ಸಿದ್ದನಿಗೆ ಹೇಳುತ್ತಿರುವ ದೃಶ್ಯ ಹಿನ್ನಲೆಯಲ್ಲಿ ಇಬ್ಬರು ಒಳಗೆ ಬರುತಿರುವ ದೃಶ್ಯ ಅಲ್ಲಿ ಮನೆಗಳು ಕಾಣಿಸುತ್ತಿರುವ ದೃಶ್ಯ ಬಸವಣ್ಣನ ಹಿಂದುಗಡೆ ಆಕರ್ಷಕವಾಗಿ ಕಾಣುವುದು ಒಬ್ಬನು ಹೊಡೆಯುತ್ತಿರುವುದು ಅವನ ಕೈಯಿಂದ ರಕ್ತ ಹರಿಯುತ್ತಿದ್ದು, ಅವನ ಕೈಯಲ್ಲಿ ಕೋಲು ಹಿಡಿದಿರುವುದು. ಅವರ ಹಾವ ಭಾವ ತುಂಬಾ ಭೀಕರವಾಗಿರುವ ಸನ್ನಿವೇಶ ಹಿಂದೆಗಡೆ ಶಾಂತವರಣ ಬಣ್ಣ ಬಳಸಲಾಗಿದೆ. ಮತ್ತು ಬಸವಣ್ಣನ ಬಣ್ಣ ಸ್ವಲ್ಪ ಕಪ್ಪು, ಬಣ್ಣ ಬಿಳಿ ಬಣ್ಣ, ಗುಲಾಬಿ ಬಣ್ಣ, ಕೆಂಪು ಬಣ್ಣ ಎಲ್ಲವೂ ಇಲ್ಲಿ ಪ್ರಮುಖವಾಗಿ ಕಾಣುತ್ತಿವೆ.

೫. ಈ ಕಲಾಕೃತಿಯಲ್ಲಿ ಋಷಿಮುನಿಗಳು ಗಿಡದ ಕೆಳಗೆ ಕಟ್ಟೆಯ ಮೇಲೆ ಕುಲಿತಿರುವ ದೃಶ್ಯ ಬಲಗಡೆಗೆ ಸಿದ್ಧನು ನಿಂತಿರುವುದು ಎದುರುಗಡೆ ಒಬ್ಬನು ನಿಂತಿರುವುದು, ಕೆಳಗೆ ಐದು ಆರು ಜನರು ಕುಳಿತಿದ್ದಾರೆ. ಒಬ್ಬಳು ಸ್ತ್ರೀಯರು ಕುಳಿತಿದ್ದು. ಹಿನ್ನೆಲೆಯಲ್ಲಿ ಜಿಂಕೆಹಳೆಯ ಮನೆ ಆಕಾಶ ಎಲ್ಲ ಸನ್ನಿವೇಶಗಳನ್ನು ಬಳಸಲಾಗಿದೆ. ಮತ್ತು ಎಡಗಡೆಗೆ ಋಷಿಮುನಿಗಳು ಬಂದಿರುವ ಸನ್ನಿವೇಶ ಮತ್ತು ಹಿನ್ನೆಲೆಯಲ್ಲಿ ಗಿಡ, ನೀರು, ಆಕಾಶವು ಎಲ್ಲವೂ ಪ್ರಮುಖವಾಗಿ ಕಾಣುತ್ತಿವೆ.

೬. ಈ ಕಲಾಕೃತಿಯಲ್ಲಿ ಸಿದ್ಧಾರೂಢನನ್ನು ಪೋಲಿಸರು ಹೊಡೆತ್ತಿರುವ ದೃಶ್ಯ ಮತ್ತೊಬ್ಬನು ಅವರನ್ನು ಬಿಡಿಸುತ್ತಿದ್ದಾನೆ. ಇಲ್ಲಿ ಹಾವ ಭಾವ ದುಃಖಮಯವಾದ ಸಂಗತಿ ಹಿನ್ನೆಲೆಯಲ್ಲಿ ಕಿಟಕಿ, ಗಿಡ, ಆಕಾಶ, ಆಕಡೆ ಕೋಣೆಗಳು ಕಾಣುತ್ತಿರುವ ಕಂದು, ಕೆಂಪು ಬಣ್ಣ, ಬಿಳುಪು ಬಣ್ಮ ಅವರ ಕೈಯಲ್ಲಿ ಕೋಲುಗಳು ಅದರ ಬಣ್ಣ ನೀಲಿ ಬಣ್ಣ ಇವೆಲ್ಲವೂ ಆಕರ್ಷಿಕವಾಗಿ ಕಾಣುತ್ತಿವೆ.

೭. ಈ ಕಲಾಕೃತಿಯಲ್ಲಿ ಸಿದ್ಧಾರೂಢ ಅವರಿಗೆ ಮನೆಯ ಒಳಗೆ ಕರೆದುಕೊಂಡು ಹೋಗುತ್ತಿರುವ ದೃಶ್ಯ ಸ್ತ್ರೀಯೊಬ್ಬಳು ಮನೆಯಿಂದ ಹೊರಗೆ ಅವರಿಗೆ ಸತ್ಕಾರ ಮಾಡಲು ಕೈಯಲ್ಲಿ ತಟ್ಟೆಯಲ್ಲಿ ಹೂ, ಕಾಯಿ, ಹಣ್ಣು ಕೈಯಲ್ಲಿ ಕೆಳಸ ತೆಗೆದುಕೊಂಡು ಬರುತ್ತಿರುವ ದೃಶ್ಯ ಹಿಂದಗಡೆ ಚಿಕ್ಕ ಚಿಕ್ಕ ಮಕ್ಕಳು ಆಟ ಆಡುತ್ತಿರುವ ದೃಶ್ಯ ಮತ್ತೆ ದೇವರ ಗುಡಿ ಮನೆ ದೇವಸ್ಥಾನ ಗಿಡ ಮರಗಳು ಬಾಗಿಲು ಕಿಟಕಿಗಳನ್ನು ಹಾವ ಭಾವ ತುಂಬಾ ಆನಂದದಿಂದ ಕೂಡಿದೆ. ಹಿನ್ನೆಲೆಯಲ್ಲಿ ಶಾಂತ ಬಣ್ಣಗಳನ್ನು ಬಳಸಲಾಗಿದೆ. ಬಿಳುಪು ಬಣ್ಣ ತೊಟ್ಟಿವಿರುವ ಮಕ್ಕಳು ಬಿಳುಪು ಬಣ್ಣ ಇಲ್ಲಿ ಪ್ರಮುಖವಾಗಿ ಕಾಣುತ್ತಿದೆ. ನೆಲಕ್ಕೆ ಸ್ವಲ್ಪ ಕಪ್ಪು ಬಣ್ಣ ಕೊನೆಯ ಕಡಗೆ ಹಸಿರು ಬಣ್ಣದಿಂದ ಗಿಡವನ್ನು ಬಳಸಲಾಗಿದೆ.

೮. ಈ ಕಲಾಕೃತಿಯಲ್ಲಿ ಒಬ್ಬ ಮಹಿಳೆ ಮಲಗಿರುವ ದೃಶ್ಯ ಮಗ್ಗಲಲ್ಲಿ ಮಗನು ನಿಂತಿರುವುದು ಎದುರುಗಡೆಗೆ ಸಿದ್ಧಾರೂಢ ಬಂದಿರುವ ಆಕೆಯ ಕೈಯನ್ನು ಹಿಡಿದಿರುವ ದೃಶ್ಯ ಅವರ ಜೊತೆಯಲ್ಲಿ ಇಬ್ಬರು ಶಿಷ್ಯರು ನಿಂತಿರುವರು ಬಾತುಕೋಳಿ ಬಳಸಿಕೊಂಡಿರುವುದು ಹಿನ್ನೆಲೆಯಲ್ಲಿ ನೀಲಿ ಬಣ್ಣ, ಕಪ್ಪು ಬಿಳಿ ಬಣ್ಣವನ್ನು ಬಳಸಿಕೊಂಡಿದ್ದಾರೆ. ಸ್ತ್ರೀಯರು ನೀಲಿ ಬಣ್ಣವನ್ನು ಧರಿಸಿದ್ದಾಳೆ. ಬಿಳಿ ಬಣ್ಣ, ಕಂದು ಮತ್ತು ಗುಲಾಬಿ ಬಣ್ಣ, ಕಾವ್ಕಿ ಬಣ್ಣ, ಹದಿ ಬಣ್ಣ, ಕೆಂಪು ಬಣ್ಣ, ಮಂಚಹಲವಾರು ವಸ್ತುಗಳು ತುಂಬಾ ಆಕರ್ಷಕವಾಗಿ ಕಾಣುತ್ತೇವೆ.

ಎಡಗಡೆ ಈ ಕಲಾಕೃತಿಯಲ್ಲಿ ಒಬ್ಬ ಮಹಿಳೆ ತುಂಬಾ ಗಾಬರಿಯಿಂದ ಸಿದ್ಧಾರೂಢರನ್ನು ನಿರೀಕ್ಷಿಸುತ್ತಿರುವ ದೃಶ್ಯ, ಹಿಂದೆಗಡೆ ಒಬ್ಬನು ಬಂದಿರುವ ಮುಂದೆ ಹುಲಿ ಕುಳಿತಿರುವ ದೃಶ್ಯ ಹಿನ್ನೆಲೆಯಲ್ಲಿ ಗಿಡ ಮರಗಳು ಆಕಾಶ ಸನ್ನಿವೇಶಕ್ಕೆ ತಕ್ಕಂತೆ ಬಣ್ಣಗಳು ಬಳಸಿದ್ದಾರೆ. ಸ್ತ್ರೀಯ ಮೇಲೆ ಹಸಿರು ಬಣ್ಣ, ಕೆಂಪು ಬಣ್ಣ, ಬಿಳಿ ಬಣ್ಣ ಶಾಂತವಾದ ಬಣ್ಣಗಳು ಹುಲಿಗೆ ಕಾವಿ ಕೆಂಪು ಬಣ್ಣ ಬಳಸಿದ್ದಾರೆ.

೯. ಈ ಕಲಾಕೃತಿಯಲ್ಲಿ ಸಿದ್ಧಾರೂಢರು ಬಂದು ಮಗುವಿಗೆ ಬದುಕಿಸುತ್ತಿರುವ ಸ್ನನಿವೇಶ ಆ ಮಗುವಿಗೆ ಮೇಲೆ ಹಾವು ಸುತ್ತಿಕೊಂಡಿತ್ತು, ಎಡಗಡೆ ಮಹಿಳೆ ಮತ್ತು ವಾರ ಜನರು ಬಂದು ನಿಂತಿರುವ ಸನ್ನಿವೇಶ

ತುಂಬಾ ಭಯಾನಕವಾದ ಸನ್ನಿವೇಶ ಕಂಡು ಬರುತ್ತಿರುವುದು ಹಿನ್ನೆಲೆಯಲ್ಲಿ ಗಿಡವು ಆಕಾಶ ನೆಲವು ಎಲ್ಲವು ಸನ್ನಿವೇಶಕ್ಕೆ ತಕ್ಕಂತೆ ಎಲ್ಲವೂ ಬಳಸಿದ್ದಾರೆ. ಪ್ರಮುಖವಾಗಿ ಹಾವು ಹೆಡೆ ಎತ್ತಿರುವ ಸನ್ನಿವೇಶ ತುಂಬಾ ಆಕರ್ಷಕವಾಗಿ ಕಾಣುತ್ತಿದೆ. ಹಸಿರು, ಕೆಂಪು, ಬಿಳಿ, ಕಂದು, ಕೆಂಪು ಸಾಂಪ್ರದಾಯಿಕವಾಗಿ ಹಣೆಯ ಮೇಲೆ ವಿಭೂತಿಯನ್ನು ಹಚ್ಚಿಕೊಂಡಿದ್ದಾರೆ. ಹುಡುಗನ ಮೈಯಿಂದ ರಕ್ತ ಚೆಲುತ್ತಿರುವ ಸನ್ನಿವೇಶ ಇವು ಪ್ರಮುಖವಾಗಿ ಕಾಣುತ್ತಿವೆ.

೧೦. ಈ ಕಲಾಕೃತಿಯಲ್ಲಿ ಸಿದ್ಧಾರೂಢರು ಬಂದು ಜನರಿಗೆ ರಕ್ಷಿಸುತ್ತಿರುವ ದೃಶ್ಯ ಒಬ್ಬ ಸಾಧು ಕೆಳಗೆ ಕುರ್ಚಿ ಮೇಲೆ ಕುಳಿತುಕೊಂಡಿದ್ದಾನೆ. ಇನ್ನೊಬ್ಬ ಪೂಜೆ ಮಾಡುತ್ತಿದ್ದಾನೆ. ಇನ್ನು ಹತ್ತಾರು ಜನರು ಸತ್ತು ಬಿದಿರುವ ದೃಶ್ಯವಾಗಿದೆ. ಅವರ ಮೇಲೆ ಪ್ರಾಣಿಪಕ್ಷಿಗಳು ಬಂದು ತಿನ್ನಿತ್ತಿರುವ ಸನ್ನಿವೇಶ ಹಿನ್ನೆಲೆಯಲ್ಲಿ ಪಕ್ಷಿಗಳು ಹಾರುತ್ತಿರುವ ಸನ್ನಿವೇಶ ಬಲಭಾಗದಲ್ಲಿದೆ.

ಎಡಗಡೆಯ ಭಾಗದಲ್ಲಿ ಸ್ತ್ರೀಯರು ಬರುತ್ತಿರುವ ದೃಶ್ಯಸಿದ್ಧಾರೂಢರು ಒಬ್ಬನ ಕಣ್ಣಿಗೆ ಬಟ್ಟೆ ಕಟ್ಟುತ್ತಿರುವುದು ಮಕ್ಕಳು ಹಿಂದುಗಡೆ ನಿಂತಿರುವುದು ಹಿನ್ನೆಲೆಯಲ್ಲಿ ತುಂಬಾ ಶಾಂತವರಣವನ್ನು ಬಣ್ಣದಿಂದ ಬಳಸಲಾಗಿದೆ.

ಬಣ್ಣಗಳು ಬಿಳಿ ನೀಲಿ ಲಿಂಗದ ಮೇಲೆ ಹೂ ಗೂಲಾಬಿ ಬಣ್ಣ ಕೆಂಪು, ಹಸಿರು, ನೇರಳೆ ಬಣ್ಣ, ಬಿಳುಪು ಬಣ್ಣ ಇಲ್ಲಿ ಪ್ರಮುಖವಾಗಿ ಕಾಣುತ್ತಿವೆ.

೧೧. ಈ ಕಲಾಕೃತಿಯಲ್ಲಿ ಸಿದ್ಧಾರೂಢರು ತನ್ನ ಶಿಷ್ಯನಿಗೆ ರಕ್ಷಿಸುತ್ತಿರುವ ಸನ್ನಿವೇಶ ಅವನ ಮೈಯಿ ತುಂಬಾ ಬಿಸಿ ನೀರು ಚೆಲ್ಲಿದ್ದು, ಅವನ ಹೆಂಡತಿ ಅಳುತ್ತಿರುವುದು ಮಗು ಅಳುತ್ತಿರುವುದು ಹಿಂದೆಗಡೆ ಅಡುಗೆ ಮಾಡುತ್ತಿರುವ ಮಹಿಳೆಯರು ಚೀರಾಡುತ್ತಿರುವ ದೃಶ್ಯ ಇನ್ನೊಬ್ಬ ಮಹಿಳೆ ಒಲೆ ಮುಂದೆ ಕುಳಿತಿಕೊಂಡಿರುವುದು ಪಾತ್ರೆಗಳು ಎಲ್ಲವು ಅಲ್ಲೋಲ ಕಲ್ಲೋಲವಾಗಿ ಬಿದ್ದಿರುವುದು ಸಿದ್ಧಾರೂಢ ಕಾಲ ಹತಿರ ಒಲೆ ಉರಿಯುತ್ತಿರುವ ಸನ್ನಿವೇಶ ತುಂಬಾ ಭಯಾನಕವಾದ ಸಂದರ್ಭವನ್ನು ನಾವು ಇಲ್ಲಿ ಕಾಣುತ್ತೀವೆ. ಹಿನ್ನೆಲೆಯಲ್ಲಿ ಬಾಗಿಲು ಬಳಸಿಕೊಂಡಿದ್ದಾರೆ. ಬಣ್ಣಗಳ ಬಳಕೆ ಸ್ತ್ರೀಯರು ನೇರಳೆ ಬಣ್ಣ, ಮಗು ಬಿಳಿ ಬಣ್ಣ ಬಟ್ಟೆ ಹಾಕಿರುವುದು ಆತನು ಶಿಷ್ಯನು ಸ್ವಲ್ಪ ಮೆಹಂದಿ ಬಣ್ಣ ಉರಿತ್ತಿರುವ ಕೇಸರಿ, ಹಳದಿ, ಕಪ್ಪು, ಸೌದೆ, ನೆಲಕ್ಕೆ ಸ್ವಲ್ಪ ನೀಲಿ, ಹಸಿರು ಮಿಶ್ರಬಣ್ಣದಿಂದ ಬಳಸಲಾಗಿದೆ. ಇವು ಪ್ರಮುಖವಾಗಿ ಕಾಣುತ್ತಿವೆ.

೧೨. ಈ ಕಲಾಕೃತಿಯಲ್ಲಿ ಸಿದ್ಧಾರೂಢರ ಮಂಟಪದಲ್ಲಿ ಕೂಡಿಸಿ ಪೂಜೆ ಮಾಡುತ್ತಿರುವುದು ಮುಂದೆ ಆತನ ಶಿಷ್ಯ ನಿಂತಿದ್ದಾ ಪೂಜಾ ಮಾಡಿತ್ತಿರುವ ಒಂದು ಕೈಯಲ್ಲಿ ಗಂಟೆ ಮತ್ತೊಂದು ಕೈಯಿಂದ ಮೇಲೆ ಏನೋ ಮಾಡುತ್ತಿರುವ ಎಡಕ್ಕೆ ಹತ್ತಾರು ಜನರು ಭಕ್ತರು ಕೈ ಮುಗಿದು ನಿಂತಿರುವುದು ಬಲಕ್ಕೆ ಹತ್ತಾರು ಜನರು ಭಕ್ತಿಯಿಂದ ನಿಂತಿರುವುದು ಮುಂದೆಗಡೆ ಹೂ, ಕಾಯಿ, ಹಣ್ಣು, ಹಂಪಲು, ಕಳಸ, ತಂಬಿಗೆ ಇರುವುದು ಮುಂದೆ ಎರಡು ಚಿಕ್ಕ ಮಕ್ಕಳು ಭಕ್ತಿಯಿಂದ ವಿನಯದಿಂದ ನಿಂತುಕೊಂಡಿರುವುದು ಹಿನ್ನೆಲೆಯಲ್ಲಿ ಮಂಟಪವನ್ನು ಕಾಣುತ್ತಿದೆ. ಕೆಂಪು, ಹಳದಿ, ಬಿಳುಪು, ಸ್ವಲ್ಪ ಹಸಿರು ಬಣ್ಣ ನೀಲಿ ಬಣ್ಣ, ಕೇಸರಿ ಬಣ್ಣ,

ಕಂದು ಮತ್ತು ಕಂಪು ಬಣ್ಣ ಮತ್ತು ಕೆಳಗಡೆ ಮಿಶ್ರಿತ ಬಣ್ಣದಿಂದ ಮಾಡಲಾಗಿದೆ. ಇಲ್ಲಿ ಸಿದ್ಧಾರೂಢ ಕುಳಿತುಕೊಂಡಿದ್ದು ಮತ್ತು ಶಿಷ್ಯನು ಪೂಜಾ ಮಾಡುತ್ತಿರುವ ಸನ್ನಿವೇಶ ಪ್ರಮುಖವಾಗಿ ಕಾಣುತ್ತಿದೆ.

೧೩.ಈ ಕಲಾಕೃತಿಯಲ್ಲಿ ನೂರಾರು ಜನರು ಊಟಕ್ಕೆ ಕುಳಿತುಕೊಂಡಿದ್ದಾರೆ. ಅವರ ಮಧ್ಯದಲ್ಲಿ ಸಿದ್ಧಾರೂಢರು ಕುಳಿತುಕೊಂಡಿದ್ದಾರೆ. ಒಬ್ಬರು ಬಲಗಡೆ ನೀರಿನ ಬಿಂದಿಗೆಯನ್ನು ಹಿಡಿದು ನಿಂತುಕೊಂಡಿದ್ದಾರೆ. ಮತ್ತು ಅವರ ಹಿಂದೆಗಡೆ ಹಂದರದೊಳಗೆ ಅನೇಕ ಜನರು ಊಟ ಮಾಡುತ್ತಿದ್ದಾರೆ. ಅವರಿಗೆ ಊಟ ಬಡಿಸುತ್ತಿದ್ದಾರೆ. ಒಬ್ಬರು ಬಾಳೆ ಎಲೆಗಳನ್ನು ಹಚ್ಚುತ್ತಿದ್ದಾರೆ. ಇನ್ನೊಬ್ಬರು ನೀರು ಹಾಕುತ್ತಿದ್ದಾರೆ. ಮತ್ತೊತಬ್ಬರು ಮಾತು ಆಡುತ್ತಿದ್ದಾರೆ. ಅದರಲ್ಲಿ ಕೆಲವರು ಒಬ್ಬರು ಕೈಯಲ್ಲಿ ಅನ್ನವನ್ನು ಹಿಡಿದುಕೊಂಡಿದ್ದಾರೆ. ಇನ್ನು ಕೆಲವರು ಮಾತು ಆಡುತ್ತಾ ಕುಳಿತ್ತಿದ್ದಾರೆ. ಈ ಸನ್ನಿವೇಶ ಕಂಡು ಬರುತ್ತದೆ. ಈ ಚಿತ್ರದಲ್ಲಿ ತುಂಬಾ ಶಾಂತವಾದ ವಾತವರಣ ಕಾಣುತ್ತದೆ. ಎಲ್ಲರೂ ಊಟ ಮಾಡುತ್ತಿದ್ದಾರೆ. ಬಣ್ಣದ ಬಳಕೆಯಲ್ಲಿ ಹೆಚ್ಚು ಕಾಣುವುದು. ಅಂದರೆ ಎಲ್ಲ ಹಣೆಯ ಮೇಲೆ ವಿಭೂತಿ ಮತ್ತು ನಾಮವಿದೆ. ಇದು ಸಾಂಪ್ರದಾಯಕವಾಗಿ ಕಾಣುತ್ತದೆ. ಕೆಲವರ ಕೊರಳಲ್ಲಿ ರುದ್ರಾಕ್ಷಿ ಮಾವಿನ ಕಾಯಿ ಇದೆ. ಎಲ್ಲರೂ ಪಂಚ ಧರಿಸಿದ್ದಾರೆ. ಅದನ್ನು ಮೈ ಮೇಲೆ ಹಾಕಿಕೊಂಡಿದ್ದಾರೆ. ಎಲ್ಲರ ಮುಂದೆ ಬಾಳೆ ಎಲೆಯ ಮೇಲೆ ಊಟ ಬಡಿಸಿದೆ. ಇಲ್ಲಿ ಬಣ್ಣ ಬಳಕೆ ಹೆಚ್ಚು ಬಿಳಿಬಣ್ಣ ಕೆಂಪು, ಹಸಿರು,ಕಂದು ಕೆಂಪು, ಇಷ್ಟೆಲ್ಲ ಬಣ್ಣ ಹಿನ್ನೆಲೆಯಲ್ಲಿ ಶಾಂತವಾದ ಬಣ್ಣಗಳು ಕಾಣಿಸುತ್ತವೆ.

೧೩. ಈ ಕಲಾಕೃತಿಯಲ್ಲಿ ಒಬ್ಬ ಸ್ತ್ರೀಯು ಬಾವಿಯಲ್ಲಿ ಬೀಳುತ್ತಿರುವ ಒಂದು ದೃಶ್ಯ ಆ ಸಂದರ್ಭದಲ್ಲಿ ಸಿದ್ಧಾರೂಢ ಬಂದು ಅವಳ ಕೈ ಹಿಡಿದಿರುವ ದೃಶ್ಯ ಮತ್ತು ಹಿಂದುಗಡೆ ಆಕೆಯ ಪತಿ ಮಕ್ಕಳು ಬರುತ್ತಿರುವ ದೃಶ್ಯ ತುಂಬಾ ಗಾಬರಿಯಿಂದ ಬರುತ್ತಿದ್ದಾರೆ. ಹಿಂದಗಡೆ ಮನೆಗಳು ಕಾಣಿಸುತ್ತಿವೆ. ಗಿಡ ಆಕಾಶವು ಕಾಣುತ್ತಿದೆ. ಈ ಸನ್ನಿವೇಶ ಊರ ಹೊರಗಡೆ ಇರುವುದು ಇಲ್ಲಿ ಪ್ರಮುಖವಾಗಿ ಅಂದರೆ ಬಾವಿ ಮೇಲೆ ನಿಂತಿರುವ ಮಹಿಳೆ ಮತ್ತು ಸಿದ್ಧಾರೂಢರನ್ನು ಕಾಣಿಸುತ್ತಾರೆ. ಹಿನ್ನೆಲೆಯಲ್ಲಿ ಎರಡು ಮಕ್ಕಳು ಮತ್ತು ಅವನ ತಂದೆ ಬರುತ್ತಿರುವುದು ಗಿಡ ಮರಗಳು ಮನೆಗಳು ಎಲ್ಲವೂ ಆಕರ್ಷಕವಾಗಿ ಕಾಣುತ್ತೇವೆ.

ಬಣ್ಣ ಬಳಕೆ ಹಸಿರು, ಪಾಚೀ ಹಸಿರು, ಕೆಂಪು, ಕಂದು ಕೆಂಪು, ಬಿಳಿ ಪಂಜೆ ಮಕ್ಕಳಿಗೂ ಪಂಜೆ ಹಾಕಿಕೊಂಡಿದ್ದಾರೆ.

೧೪. ಈ ಕಲಾಕೃತಿಯಲ್ಲಿ ಸಿದ್ಧಾರೂಢರು ರಥದಲ್ಲಿ ಉತ್ತಮ ಮಾಡುತ್ತಿರುವುದು ರಥಕ್ಕೆ ಜನರು ಹಿಡಿದು ಜಗಿ ಎಳೆಯುತ್ತಿರುವುದು, ಬಲಗಡೆ ಮತ್ತು ಎಡಗಡೆ ರಥಕ್ಕೆ ತುಂಬಾ ಸುಂದರವಾಗಿ ಕಾಣುವಂತೆ ಬಾಳೆ ಎಲೆಗಳಿಂದ ಅಲಂಕಾರ ಮಾಡಲಾಗಿದೆ. ಜನರು ಕೈಯಲ್ಲಿ ವಾಲಗ ಮಜಲುಗಳನ್ನು ಬಾರಿಸುತ್ತಿದ್ದಾರೆ. ಹಿನ್ನೆಲೆಯ ದೂರದಲ್ಲಿ ದೇವಸ್ಥಾನವಿದೆ. ಗೀಡ ಮರ ಗುಡ್ಡಗಾಡು ಪ್ರದೇಶ ಸೂರ್ಯ ಮುಳುಗುತ್ತಿರುವ ಒಂದು ಸನ್ನಿವೇಶ ಮತ್ತು ಎಲ್ಲರೂ ಸಾಂಪ್ರದಾಯಿಕವಾಗಿ ವಿಭೂತಿಧಾರಣೆ ಮಾಡಿದ್ದಾರೆ.

ಇಲ್ಲಿ ಪ್ರಮುಖವಾಗಿ ರಥ ಎದ್ದು ಕಾಣುತ್ತದೆ. ಅತ್ಯಂತ ಅದ್ದೂರಿಯಿಂದ ಮೆರವಣಿಗೆ ಬರುವುದು ನಾವು ಕಾಣಬಹುದು. ಬಣ್ಣಗಳ ಬಳಕೆ ನೇರಳೆ ಬಣ್ಣ, ಹಸಿರು, ಕಂದು ಕೆಂಪು, ನೀಲಿ ಬಣ್ಣ, ಕೇಸರಿ ಬಣ್ಣ, ಹಳದಿ ಬಣ್ಣ ತುಂಬಾ ಆಕರ್ಷಕವಾಗಿ ಕಾಣುತ್ತೇವೆ.

೧೫. ಈ ಕಲಾಕೃತಿಯಲ್ಲಿ ಸಿದ್ಧಾರೂಢರು ಬರಡಾದ ನೀರಿನ ಹೊಂಡದ ಒಳಗೆ ಹೋಗಿ ಕುಳಿತುಕೊಂಡಿದ್ದಾರೆ. ಮತ್ತು ಅವರ ಕೈಯಲ್ಲಿ ಒಂದು ತಟ್ಟೆ ಇನ್ನೊಂದು ಕೈಯಲ್ಲಿ ಬಿಂದಿಗೆ ಮೇಲೆ ಇಟ್ಟಿಕೊಂಡು ಕುಳಿತ್ತಿದ್ದಾರೆ. ಅವರ ಹಿಂದೆಗಡೆ ಅವರ ಶಿಷ್ಯರು ನಿಂತುಕೊಂಡು ಧ್ಯಾನ್ಯ ಮಾಡುತ್ತಿರುವ ಕಟ್ಟೆಯ ಮೇಲಿನ ಭಾಗದಲ್ಲಿ ಸ್ತ್ರೀಯರು ಮತ್ತು ಪುರುಷರು ಬಂದು ನಿಂತುಕೊಂಡಿದ್ದಾರೆ. ಅದರಲ್ಲಿ ಒಬ್ಬನ್ನು ಯಾರಿಗೆ ಏನೋ ಹೇಳುತ್ತಿರುವುದು ಕೈ ಮಾಡಿ ತೋರಿಸುತ್ತಿದ್ದಾನೆ. ಅವರು ಎಲ್ಲರೂ ಸಾಂಪ್ರದಾಯಿಕವಾಗಿ ಹಣೆಯ ಮೇಲೆ ವಿಭೂತಿ ಹಚ್ಚಿದ್ದಾರೆ. ಹಿನ್ನೆಲೆಯಲ್ಲಿ ಮನೆಗಳು ಗಿಡಗಳು, ಆಕಾಶ ಎಲ್ಲವೂ ತುಂಬಾ ಚೆನ್ನಾಗಿ ಬಳಸಿಕೊಂಡಿದ್ದಾರೆ. ಬಣ್ಣಗಳ ಬಳಕೆಯು ತುಂಬಾ ಶಾಂತಮಯವಾದ ಬಣ್ಣಗಳು ನಮಗೆ ಕಾಣುತ್ತವೆ.

## ೪. ಹುಮಾನಾಬಾದಿನ ಬಾಲಾಜಿ ದೇವಾಲಯದ ಗಾಜಿನ ಚಿತ್ರ ಕಲಾಕೃತಿಗಳು

ಸಾವಿರಾರು ವರ್ಷಗಳ ಹಿಂದೆಯೇ ಮಾನವ ಕಲೋಪಾಸಕನಾಗಿ ಆಯಾ ಪರಿಸರ, ಪ್ರದೇಶಗಳಿಗೆ ವಿಶಿಷ್ಟವಾದ ಸಂಸ್ಕೃತಿ ರೂಪಿಸಿಕೊಂಡು ಬಾಳುತ್ತಾ ಬಂದಿದ್ದಾನೆ. ಇಂಥದನ್ನು ತಿಳಿಯಲು ಚಿತ್ರಕಲೆಯೂ ಒಂದು ಸಾಧನವಾಗಿದೆ. ಚಿತ್ರಕಲೆ ಮಾನವನ ಬದುಕಿನ ಅಭಿವ್ಯಕ್ತಿಯಾಗಿದ್ದು ಅಂಥ ಅಭಿವ್ಯಕ್ತಿಗಾಗಿ ಹಲವಾರು ಮಾಧ್ಯಮಗಳನ್ನು ಬಳಸಿಕೊಂಡಿದೆ. ಅಂಥವುಗಳಲ್ಲಿ ಗಾಜು ಉಪಯುಕ್ತಕಲೆಗೆ ಸಾಮಗ್ರಿಯಗಿರುವಂತೆ ಅಲಂಕರಣ ಅಭಿರುಚಿಯ ವಸ್ತುವಾಗಿಯೂ ಮಹತ್ವದ ಮಾಧ್ಯಮವಾಗಿ ಮೆರೆದಿದೆ. ಭೌತಿಕ ವಸ್ತುಗಳ ಮಿಶ್ರಣದಿಂದ ನಿರ್ಮಿತಗೊಳ್ಳುವ ಹೊಳಪುಳ್ಳ ಪಾರದರ್ಶಕ ಗಟ್ಟಿವಸ್ತು ಗಾಜು ಚಿತ್ರಕಲಾವಿದ ತನ್ನ ಗಾಜನ್ನೆ ಮುಖ್ಯವಾದ ವಸ್ತುವನ್ನಾಗಿಸಿಕೊಂಡು ಹೊಸಲೋಕವನ್ನೇ ಸೃಷ್ಟಿಸಿದ ಅಮೂಲ್ಯವಾದ ಗಾಜಿನ ಮೇಲಿನ ಚಿತ್ರಕಲಾಕೃತಿಗಳ ರಚನೆಗಾಗಿ ಗಾಜಿನ ಫಲಕ ತೈಲ ಹಾಗೂ ಜಲ ವರ್ಣಗಳನ್ನು ಬಂಗಾರದ ಬರಗ ಹಾಗೂ ಸಾಗವಾನಿ ಕಟ್ಟಿಗೆಯ ಫ್ರೆಮ್ ಅದರ ಹಿಂದೆ ಸುರಕ್ಷತೆಗಾಗಿ ಬಳಸುವ ಧಾತು ತಗಡಿನ ಹಾಳೆ, ರಟ್ಟು ಮುಂತಾದ ಕಚ್ಚಾವಸ್ತುಗಳಿಂದ ರಚಿಸಲ್ಪಟ್ಟಿರುವ ಹಲವಾರು ಕಡೆಗೆ ಕಲಾಕೃತಿಗಳು ಸಂಗ್ರಗಳಿವೆ.

ಯುರೋಪಿನ ಚರ್ಚ್ ಅರಮನೆಗಳಲ್ಲದೆ. ಖಾಸಗಿ ಮನೆಗಳ ಕಿಟಕಿ ಬಾಗಿಲುಗಳು ಈ ರೀತಿ ಅಲಂಕೃತಗೊಂಡಿದ್ದವು ಈ ಕಲೆ ೧೭.೧೮ನೇ ಶತಮಾನದಲ್ಲಿ ಯೂರೋಪಿನ ಧರ್ಮಪ್ರಚಾರಕರ ಮೂಲಕ ಭಾರತಕ್ಕೆ ಬಂದಿತ್ತು. ಪಶ್ಚಿಮ ಕರಾವಳಿಯಲ್ಲಿಹೆಚ್ಚಿನ ಸಂಖ್ಯೆಯಲ್ಲಿ ವಿದೇಶಿಯರು ಇದ್ದುದರಿಂದ ಅವರ ಮೂಲಕ ಇಲ್ಲಿಯ ಚರ್ಚುಗಳಲ್ಲಿಯು ಈ ಬಗೆಯ ಗಾಜಿನ ಚಿತ್ರಗಳು ಒಂದು ಇಂದಿಗೂ ಅವು ಉಳಿದುಕೊಂಡಿರುವುದನ್ನು ಕಾಣಬಹುದು.

ಕಲೆಯಲ್ಲಿ ನಿಜಕ್ಕೂ ಕರ್ನಾಟಕದ್ದೇ ಆದದೊಂದು ಪಂಥಿದೆ. ಮೈಸೂರು ಸಂಪ್ರದಾಯದ ಚಿತ್ರಕಲೆ ಅತ್ಯಂತ ಪ್ರಾಚೀನವಾದುದು. ತಂಜಾವುರಿನ ಕಲೆಯಂತೆ ಇದಕ್ಕೂ ರಾಜರ ಕಾಲದಲ್ಲಿ ಹೆಚ್ಚಿನ ಪ್ರೋತ್ಸಾಹ ದೊರಕಿತು. ಗಾಜಿನ ಎಲ್ಲಾ ಚಿತ್ರಗಳನ್ನು ವಿಷಯವನ್ನಾಧರಿಸಿ ಮುಖ್ಯವಾಗಿ ಧಾರ್ಮಿಕ ಚಿತ್ರಗಳು, ಭಾವಚಿತ್ರಗಳು ಸರಸ ಸಲ್ಲಾಪ ಚಿತ್ರಗಳು, ಸಂಗೀತ ಮತ್ತು ಸಂಯೋಜನಾತ್ಮಕ ಚಿತ್ರಗಳೆಂದು ವರ್ಗೀಕರಿಸಬಹುದು.

ಗಾಜಿನ ಚಿತ್ರಗಳು ನಾಡಿನ ವಿವಿಧ ಭಾಗಗಳಲ್ಲಿ ನೆರೆ ನಾಡುಗಳಲ್ಲಿ ಸಿಕ್ಕಬಹುದಾದರೂ ಗುಳೇದಗುಡ್ಡದ ಶ್ರೀಮಂತ ಮನೆತನಗಳಲ್ಲಿ ಅವನ್ನು ತಲೆಮಾರುಗಳಿಂದ ಉಳಿಸಿಕೊಂಡು ಬಂದಿರುವದೊಂದು ವೈಶಿಷ್ಟ್ಯವೆನಿಸಿದೆ. ಇದೇ ರೀತಿ ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನಲ್ಲಿಯು ಸಹ ಗಾಜಿನ ಚಿತ್ರಗಳು ಕಾಣಬಹುದು. ಹುಮನಾಬಾದಿನ ಬಾಲಾಜಿ ದೇವಾಲಯದಲ್ಲಿನ ಚಿತ್ರಗಳು ಮೈಸೂರು ಸಾಂಪ್ರದಾಯಿಕ ಶೈಲಿಗೆ ಹೋಲುತ್ತವೆ.

* * *

ಹುಮನಾಬಾದಿನ ಗಾಜಿನ ಮೇಲಿನ ಚಿತ್ರಕಲೆ







ಅಧ್ಯಾಯ - ಏಳು

# ಬೀದರ್ ಜಿಲ್ಲೆಯ ಸಮಕಾಲೀನ ಕಲೆ ಕಲಾವಿದರ ಸ್ಥಿತಿಗತಿಗಳು

ಪ್ರಾಚೀನ ಕಾಲದಿಂದಲೂ ಚಿತ್ರ ಮತ್ತು ಶಿಲ್ಪಕ್ಕೆ ರಾಜಮನೆತನಗಳು ವಿಶಿಷ್ಟ ಸ್ಥಾನಮಾನವನ್ನು ನೀಡುತ್ತಾ ಬಂದಿರುವುದನ್ನು ಕಾಣಬಹುದು ರಾಜರ ಆಳ್ವಿಕೆಯ ಕಾಲದಲ್ಲಿ ಕಲಾವಿದರುಗಳು ವಂಶದವರಾಗಿ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡುತ್ತಿದ್ದರು. ಆದರೆ ಇನ್ನುಳಿದ ಕಲಾವಿದಿಗೆ ಅಷ್ಟೇನು ಪ್ರೋತ್ಸಾಹ ನೀಡುತ್ತಿರಲಿಲ್ಲ. ಕಾಲಕಳೆದಂತೆಲ್ಲಾ ಎಲ್ಲಾ ಕಲಾವಿದರುಗಳಿಗೆ ಪ್ರೋತ್ಸಾಹ ನೀಡಿದಂತಾಯಿತು. ಹೇಗೆಂದರೆ ಕಲಾಶಾಲೆಗಳು ಹುಟ್ಟಿಕೊಂಡಿರುವದರಿಂದ ಅನೇಕ ವಿದ್ಯಾರ್ಥಿಗಳು ಕಲಾ ಶಾಲೆಗಳಲ್ಲಿ ಚಿತ್ರ ಮತ್ತು ಶಿಲ್ಪಗಳನ್ನು ಕಲಿತು. ತನ್ನ ಕಾಲಿನ ಮೇಲೆ ನಿಂತುಕೊಂಡರು ಅದೇ ರೀತಿಯಾಗಿ ಆಧುನಿಕ ಕಾಲದಲ್ಲಿ ಸಮಕಾಲಿನ ಯುಗದಲ್ಲಿ ಕಲಾವಿದರುಗಳು ಬೆಳೆಯಲು ಅನೇಕ ಮಾರ್ಗಗಳನ್ನು ಹುಡುಕಿಕೊಂಡರು ಸಾಮಾನ್ಯವಾಗಿ ಮಾಡುತ್ತಿದ ಕಲಾವಿದರುಗಳು ಸೃಜನಾತ್ಮಕವಾಗಿ ಕಲಾಕೃತಿಗಳನ್ನು ರಚಿಸಿ ಗ್ಯಾಲರಿಗಳಲ್ಲಿ ಪ್ರದರ್ಶನ ಮಾಡತೊಡಗಿದರು ಇದರಿಂದಾಗಿ ಸಮಾಜದಲ್ಲಿ ಗುರುತಿಸಿಕೊಂಡರು ನಂತರದಲ್ಲಿ ಸಮಾಜದಲ್ಲಿನ ಜನರು ಚಿತ್ರ ಶಿಲ್ಪಗಳನ್ನು ಮೆಚ್ಚಿಕೊಂಡು ಕೆಲವು ಶ್ರೀಮಂತ ವರ್ಗದವರು ಇಂತಹ ಕಲಾಕೃತಿಗಳನ್ನು ಖರೀದಿಸುತ್ತಿದ್ದರು.

ಕಾಲಕಳೆದಂತೆಲ್ಲಾ ಸಾಮಾನ್ಯ ಜನರಲ್ಲೂ ಚಿತ್ರ ಮತ್ತು ಶಿಲ್ಪಗಳ ಮೇಲೆ ಒಲವು ಬಿದ್ದು ದೇವಾನು ದೇವತೆಗಳ ಚಿತ್ರಶಿಲ್ಪಗಳನ್ನು ರಚಿಸಿಕೊಂಡು ತಮ್ಮ ಮನೆಗಳಲ್ಲಿ ಪೂಜಿಸುತ್ತಿದ್ದರು. ಇದರಿಂದ ಕಲಾವಿದರಿಗೆ ಕೂಡಾ ಬೇಡಿಕೆ ಹೆಚ್ಚಾಯಿತು.

ಸಮಕಾಲೀನ ಯುಗದಲ್ಲಿ ಚಿತ್ರ ಶಿಲ್ಪಗಳನ್ನು ಕೊಂಡುಕೊಳ್ಳುವವರು ಕಡಿಮೆಯಾಗುತ್ತಿದ್ದಂತೆ ಭಿತ್ತಿಚಿತ್ರ ಮತ್ತು ಭಿತ್ತಿ ಶಿಲ್ಪಗಳನ್ನು ರಚಿಸಲು ಮುಂದಾದ ಕಲಾವಿದರು ವಿಭಿನ್ನ ಶೈಲಿಯಲ್ಲಿ ರಚನೆ ಮಾಡುತ್ತಾ

ಬಂದಿದ್ದು. ಭಿತ್ತಿಚಿತ್ರ ಶಿಲ್ಪಗಳು ಮನೆಯ ಸೌಂದರ್ಯವನ್ನು ಹೆಚ್ಚಿಸುವಂತದರಲ್ಲಿ ಮುಖ್ಯ ಪಾತ್ರವಹಿಸಿದವು ಇದರಿಂದಾಗಿ ಸಾಮಾನ್ಯ ಜನರು ಸಹ ತಮ್ಮ ಮನೆಯು ಸೌಂದರ್ಯಯುತವಾಗಿ ಕಾಣುತ್ತಿದ್ದು ಭಿತ್ತಿಚಿತ್ರ ಶಿಲ್ಪಗಳನ್ನು ರಚಿಸಿಕೊಳ್ಳುತ್ತಿರುವುದರಿಂದಾಗಿ ಸಮಕಾಲೀನ ಕಲಾವಿದರಿಗೆ ಆರ್ಥಿಕವಾಗಿ ಬೆಳೆಯಲು ಮತ್ತು ಸಮಾಜದಲ್ಲಿ ಗುರುತಿಸಿಕೊಳ್ಳುವುದಕ್ಕೆ ಒಂದು ಮಾರ್ಗವಾಯಿತೆಂದು ಹೇಳಬಹುದು.

ಚಿತ್ರಕಲೆಯು ಸಮಕಾಲಿನ ಯುಗದಲ್ಲಿ ಅತಿವೇಗವಾಗಿ ಮುಂದುವರೆಯುತ್ತಿರುವುದರಿಂದಾಗಿ ಸಮಕಾಲಿನ ಕಲಾವಿದರ ಕಲಾಕೃತಿಗಳು ಪ್ರದರ್ಶನ ಮಾಡುವುದರ ಮೂಲಕ ಸಮಾಜಕ್ಕೆ ಪರಿಚಯವಾಗಿ ಅದರಲ್ಲಿ ಕೆಲವರಿಗೆ ಇಷ್ಟವಾದ ಕಲಾಕೃತಿಗಳು ಮಾರಾಟವಾಗುತ್ತದೆ. ಇದರಿಂದ ಒಬ್ಬ ಕಲಾವಿದ ಮತ್ತೊಬ್ಬ ಕಲಾವಿದನಿಗಿಂತ ಭಿನ್ನವಿಭಿನ್ನವಾಗಿ ಸೃಜನಾತ್ಮಕವಾಗಿ ಕಲಾಕೃತಿಗಳನ್ನು ರಚಿಸಿ ಮಾರಾಟ ಮಾಡುವುದನ್ನು ಕಾಣುತ್ತೇವೆ. ಇದರಿಂದಾಗಿ ಸಮಕಾಲೀನ ಕಲಾವಿದರುಗಳು ತಮ್ಮ ಜೀವನವನ್ನು ಸುಖಮಯವಾಗಿ ನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

೧. ಕಲಾವಿದ ಬಸವರಾಜ ಮುಗಳಿ

ಬಸವರಾಜ ಮುಗಳಿಯವರು ಸಿದ್ಧಾರೂಢ ಸ್ವಾಮಿಗಳ ಕುರಿತು ಕಲಾಕೃತಿಗಳು ರಚಿಸಿದ್ದಾರೆ. ಬಸವರಾಜ ಮುಗಳಿಯವರು ೧೨.೬.೧೯೪೫ರಂದು ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಹುಡುಗಿ ಎಂಬ ಗ್ರಾಮದಲ್ಲಿ ಜನಿಸಿದರು. ಅವರ ತಂದೆ ಶರಣಪ್ಪ, ತಾಯಿ ಗಂಗಮ್ಮ, ಮನೆತನ ಇವರ ಮನೆತವು ಕಲೆಯ ಪಾರಂಪರಿಕವಾಗಿ ಬೆಳೆದುಕೊಂಡು ಬಂದ ಮನೆತನ ಹೀಗಾಗಿ ಮುಗಳಿಯವರಲ್ಲಿ ಕಲೆಯು ಅನುವಂಶೀಯವಾಗಿ ಕಾಣಿಕೆಯಾಗಿ ಬಂದಿದೆ.

ಶರಣಪ್ಪ ಮುಗಳಿಯವರು ಸೋಲಾಪುರದ ಇಂಡಪಮಠದ ಕಲಾವಿದರ ಮನೆತನದೊಡನೆ ಸಂಪರ್ಕ ಹೊಂದಿದ್ದರು. ಚಿತ್ರಕಲೆಯನ್ನು ಹಾಗೂ ಮೂರ್ತಿಕಲೆಯನ್ನು ಸಾಧಿಸಲು ಆಂಧ್ರದ ಹೈದರಾಬಾದಿಗಾಗಿ ಹೋಗಿ ಚಿತ್ರಕಲೆಯ ಹಾಗೂ ಮೂರ್ತಿ ಕಲೆಯ ತರಬೇತಿಯನ್ನು ಹೈದರಾಬಾದಿನಲ್ಲಿ ಹೊಂದಿದರು. ಬಸವರಾಜ ಮುಗಳಿ ಶಾಲಾಭ್ಯಾಸವನ್ನು ಸೇರಿಕೊಳ್ಳಲಾಗಲಿಲ್ಲ. ಇದು ಒಂದು ರೀತಿಯಿಂದ ಅವರಿಗೆ ಒಳ್ಳೆಯದನ್ನು ಮಾಡಿದೆ. ನೌಕರಿಯ ಝುಂಜಾಟ ತಪ್ಪಿಸಿ ಕಲಾವಿದರಾಗುವಂತೆ ಪ್ರೋತ್ಸಾಹಿಸಿದೆ.

ಬಸವರಾಜ್ ಮುಗಳಿಯವರು ಪ್ರಾಥಮಿಕ ಮತ್ತು ಶಿಕ್ಷಣವನ್ನು ಪೂರ್ಣಗೊಳಿಸಿಲ್ಲ ೯ನೇ ತರಗತಿ ಅನುತ್ತೀರ್ಣ ಆದರು ಅವರಿಗೆ ಓದಲು ಆಸಕ್ತಿ ಇರಲಿಲ್ಲ ಬರಿ ಚಿತ್ರಕಲೆಯಲ್ಲಿ ತುಂಬಾ ಆಸಕ್ತಿ ಉಳ್ಳವರಾಗಿದ್ದರು, ಕಲಾವಿದ ಗುಉನಾಥ ಕಂಬಾರರಲ್ಲಿಸರಳ ಚಿತ್ರಗಾರಿಕೆಯನ್ನು ಕಲಿತರು. ಕಲ್ಬುರ್ಗಿಯ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಲ್ಲಿ ಚಿತ್ರಕಲೆಯ ಅಧ್ಯಯನ ಮಾಡಿದರು ಚಿತ್ರಕಲೆಯ ಶಾಸ್ತ್ರಬದ್ಧ ತಿಳುವಳಿಕೆಯನ್ನು ಪ್ರಸಿದ್ಧ ಚಿತ್ರಕಲಾವಿದ ಜೆ.ಎಸ್.ಖಂಡೇರಾವ್ ಅವರಿಂದ ಪಡೆದರು. ಇದೇ ಸಮಯದಲ್ಲಿ ಚಲನ ಚಿತ್ರ ನಿರ್ದೇಶಕ ಮೋಹನ ಢಮೆಯವರ ಪರಿಚಯದಿಂದ ಪ್ರೋತ್ಸಾಹವನ್ನು ಪಡೆದರು. ಆದರೆ

ಎಸ್.ಎಸ್.ಎಲ್.ಸಿ.ಪಾಸಾಗದ ಕಾರಣ ಚಿತ್ರಕಲಾ ಡಿಪ್ಲೋಮಾ ಮಾಡುವ ಅವರ ಕನಸು ನನಸಾಗಿಯೇ ಉಳಿಯಿತು. ಮುಗಳಿಯವರ ಚಿತ್ರಕಲಾ ಆಸಕ್ತಿಯನ್ನು ಅವರ ಬಂಧು ಬಳಗದವರೆಲ್ಲ ಪ್ರೋತ್ಸಾಹಿಸಿದರು.

ಐಡಿಯಲ್ ಫೈನ್ ಆರ್ಟ್‌ನಲ್ಲಿ ಮುಗಳಿಯವರು ಚಿತ್ರಕಲಾ ಸಹಪಾಠಿಗಳೆಂದರೆ ಕಲ್ಮರ ಚಿತ್ರಕಲಾ ಶಿಕ್ಷಕರು ಮಾಣಿಕನಗರ ಚಂದ್ರಶೇಖರ ಬಿ.ವಿ.ಬಿ.ಕಾಲೇಜು ಬೀದರ ಹಾಗೂ ರಣಜಿಯ ಎಂ.ಬಿ.ಲೋಹದ ಮೊದಲಾದವರು.

ಹೆಚ್ಚಾಗಿ ಬಸವರಾಜ ಮುಗಳಿಯವರಿಗೆ ಚಿತ್ರಕಲೆಯಲ್ಲಿ ಅತ್ಯಂತ ಹವ್ಯಾಸವಾಗಿದ್ದು, ಜೊತೆಗೆ ಆಟ ಆಡುವುದು ಎಂದರೆ ಬಲು ಪ್ರೀತಿ ಅಂತೆಯೇ ಅಂದಿನ ದಿನಗಳಲ್ಲಿ ಎಲ್ಲ ಆಟಗಳನ್ನು ಆಡುತ್ತಿದ್ದರು.

ಬಾಲ್ಯದಲ್ಲಿರುವಾಗ ಶರಣರ ಸಾಹಿತ್ಯ ವಚನ, ಸಂಗೀತ ಪೂಜೆ ನಮಸ್ಕಾರ ಪ್ರವಚನ ಕೇಳುವುದು ಹೀಗೆ ಮುಗಳಿಯವರಿಗೆ ಅಧ್ಯಾತ್ಮಿಕವಾಗಿ ಎಲ್ಲದರಲ್ಲೂ ಆಸಕ್ತಿ ತೋರುವ ಗುಣ ಇದಾಗಿತ್ತು.

ಬಸವರಾಜ ಮುಗಳಿಯವರು ಬಾಲ್ಯದಲ್ಲಿ ಹಲವಾರು ಚಿತ್ರಗಳನ್ನು ರಚಿಸಿದ್ದಾರೆ. ಅವಳಿಗೆ ಒಬ್ಬ ಒಳ್ಳೆಯ ಕಲಾವಿದ ನಾಗಬೇಕೆಂಬ ಆಸೆಯಾಯಿತು. ಅದರಂತೆ ಅದರು ಒಳ್ಳೆಯ ಕಲಾವಿದರು ಆದರು.

ಇವರ ಕಲಾಶಾಲೆಯಲ್ಲಿ ಅನಾಟಮಿ ಸಂಯೋಜನಾ ರೂಪದರ್ಶಿಯ ಚಿತ್ರಣ, ರೇಖಾ ಚಿತ್ರಣ, ಸ್ಟಿಲ್ ಲೈಫ್ ಈ ರೀತಿಯಾಗಿ ಮೊದಲನೆ ಹಂತದಲ್ಲಿ ಹೇಳಿ ಕೊಡುತ್ತಿದ್ದರೂ, ನಮ್ಮ ಭಾರತೀಯ ಕಲಾ ಶಾಲೆಯಲ್ಲಿ ಇಂದಿಗೂ ಬ್ರಿಟಿಷರು ಹಾಕಿಕೊಟ್ಟ ಹಾದಿಯಲ್ಲಿ ಅಂದರೆ ಅವರ ಶಿಕ್ಷಣ ಪ್ರಕಾರ ಅನಾಟಮಿ ಅಭ್ಯಾಸ ಮಾಡುವುದು ಹೊರಗೆ ಭೂ ದೃಶ್ಯಗಳ ಚಿತ್ರಣಗಳನ್ನು ಬಿಡಿಸುವುದು ಹೇಗೆ ಅದರ ಮಾದರಿಯಲ್ಲಿ ಶಿಕ್ಷಣ ನಡೆದುಕೊಂಡು ಬಂದಿದೆ. ಈ ಕಲಾಶಾಲೆಯಲ್ಲಿ ಅನಾಟಮಿ ಬಗ್ಗೆಸಂಪೂರ್ಣ ಮಾಹಿತಿಯನ್ನು ಕೊಡುತ್ತಿದ್ದರು. ಇದರಿಂದ ಮನುಷ್ಯನ ಯಾವುದೇ ಭಾಗಗಳನ್ನು ಸರಳವಾಗಿ ಸರಿಯಾಗಿ ಬಿಡಿಸಲು ಸುಲಭವಾಗಿತ್ತು.

ಬಸವರಾಜ ಮುಗಳಿಯವರು ಬೀದರ್‌ನ ಸಿದ್ಧಾರೂಢ ಮಠ, ಬಸವಕಲ್ಯಾಣದ ಬಸವೇಶ್ವರ ದೇವಾಲಯ ಹಾಗೂ ಅನುಭವ ಮಂಟಪದಲ್ಲಿ ಇವರ ಕಲಾಕೃತಿಗಳು ನೋಡಬಹುದು.

ಬಸವರಾಜ ಮುಗಳಿಯವರ ಕಲಾಕೃತಿಗಳ ವಸ್ತು ವಿಷಯ ಬಸವಣ್ಣನ ಜೀವನ ಚರಿತ್ರೆಗೆ ಸಂಬಂಧಪಟ್ಟ ವಿಷಯದ ಮೇಲೆ ಹಾಗೂ ಅಂಬಿಗರ ಚೌಡಯ್ಯ, ಹರಳಯ್ಯ, ಅಕ್ಕ ಮಹಾದೇವಿ, ಡೋಲರ ಕಕ್ಕಯ್ಯ, ಸಿದ್ಧಾರೂಡ.

ಸ್ವಾಮಿಯ ಜೀವನ ಚರಿತ್ರೆ ಹೀಗೆ ಹತ್ತು ಹಲವು ವಿಷಯಗಳ ಮೇಲೆ ಬೀದರ, ಬಸವಕಲ್ಯಾಣ ಹಾಗೂ ಭಾಲ್ಕಿ ಹೀಗೆ ಇವರ ಕಲಾಕೃತಿಗಳು ಎಲ್ಲಾ ಕಡೆಗೆ ನೋಡಬಹುದು. ಬೀದರ ಹೊರತು ಸೋಲಾಪುರ, ಆಂಧ್ರಪ್ರದೇಶ ಬೆಂಗಳೂರು ಗುಲಬರ್ಗಾಗಳಲ್ಲಿಯೂ ಕಲಾಕೃತಿಗಳು ಸಂಗ್ರಹವಾಗಿವೆ.

ಮಹಾನ್ ದೈವಿ ಪುರುಷರು ಹಾಗೂ ಯೋಗಿಗಳು ಆದ ಶ್ರೀ ಸಿದ್ಧಾರೂಢರ ಬಾಲ್ಯಲೀಲೆಗಳಿಗೆ ಸಂಬಂಧಿಸಿದಂತೆ ಭಕ್ತರಿಗೆ ಅನೇಕ ಪವಾಡಗಳನ್ನು ತೋರಿಸಿದ ಅವರ ಆಧ್ಯಾತ್ಮ ಕಥೆಯನ್ನು ನಿರೂಪಿಸುವ

ಹಾಗೂ ಅವರ ದೈವತ್ವದ ಕುರಿತಾದ ಅನೇಕ ತೈಲವರ್ಣದ ಚಿತ್ರಗಳನ್ನು ಕಲಾವಿದ ಬಸವರಾಜ ಮುಗಳಿಯವರು ಶ್ರೀಯವರ ಮಠದಲ್ಲಿ ರಚಿಸಿದ್ದಾರೆ.

೨. ಕಲಾವಿದ ಚನ್ನವೀರ ಸ್ವಾಮಿ ಮಠದ

ಈ ಕಲಾವಿದರು ಸಹ ಬೀದರ ಜಿಲ್ಲೆಗೆ ಸೇರಿದವರಾಗಿದ್ದಾರೆ. ಇವರು ಮೂಲತಹ ಹಾವೇರಿ ಜಿಲ್ಲೆಯ ಚಿನ್ನೂರು ತಾಲೂಕಿನವರಾಗಿದ್ದು ೧೯೪೫ರಲ್ಲಿ ಜನಿಸಿದರು. ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣದ ನಂತರ ಧಾರವಾಡದಲ್ಲಿ ಡಿಪ್ಲೋಮಾ ಕೋರ್ಸ್‌ನ್ನು ೧೯೬೬ರಲ್ಲಿ ಪೂರ್ಣಗೊಳಿಸಿದರು. ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನಿಂದ ಜಿ.ಡಿ. ಆರ್ಟನ ಪದವಿಯನ್ನು ೧೯೭೧ರಲ್ಲಿ ಪಡೆದರು. ಎ.ಎಂ.ಸಿ.ಕಲಾ ಶಿಕ್ಷಣ ೧೯೭೩ರಲ್ಲಿ ಪಡೆದರು ನಂತರ ಧಾರವಾಡದಲ್ಲಿ ಭಾರತೀಯ ಕಲಾಕೇಂದ್ರದ ಸಂಸ್ಥಾಪಕರು ಹಾಗೂ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಕೆಲವು ದಿನಗಳ ನಂತರ ಗುಲಬರ್ಗಾ ಶರಣಪ್ಪಾ ಅಪ್ಪಾನವರ ಕಾಲೇಜಿನಲ್ಲಿಯೂ ಸಹ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ.

೧೯೮೨ರಲ್ಲಿ ಬೀದರನಲ್ಲಿ ಯೋಗೀಶ ಚಿತ್ರಕಲಾ ಮಹಾವಿದ್ಯಾಲಯವು ಸ್ಥಾಪಿಸಿ, ಈ ಕಲಾ ಶಾಲೆಯ ಸಂಸ್ಥಾಪಕ ಹಾಗೂ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ್ದಾರೆ.

ಈ ಕಲಾವಿದರು ಹಳ್ಳಿಯ ವಾತಾವರಣ ಜೀವನ ಶೈಲಿಯು, ತನ್ನ ಕಲಾಕೃತಿಯಲ್ಲಿ ಪ್ರಭಾವ ಬೀರಿರುವುದು ಕಂಡುಬರುತ್ತದೆ.

ಈ ಕಲಾವಿದ ಕಲಾತ್ಮಕಗಳು ಗಾಢ ವರ್ಣಗಳಾದ ಗಾಢ ನೀಲಿ, ಗಾಢ ಹಸಿರು, ಹಳದಿ ಬಣ್ಣಗಳು ತೀವ್ರವಾಗಿ ಕಾಣುತ್ತಿದ್ದು.

ಈ ಕಲಾಕೃತಿಯಲ್ಲಿ ಮೂವರು ಹೆಣ್ಣುಮಕ್ಕಳು ತನ್ನ ಮನೆಯ ಮುಂದೆ ದವಸಧಾನ್ಯಗಳನ್ನು ಸ್ವಚ್ಛಗೊಳಿಸುತ್ತಾ ಸಂಭಾಷಣೆಯಲ್ಲಿ ಕಾರ್ಯನಿರತರಾಗಿದ್ದಾರೆ. ಈ ಹೆಣ್ಣು ಮಕ್ಕಳ ನಡುವಿನ ಬುಟ್ಟಿಯಲ್ಲಿ ದವಸಧಾನ್ಯಗಳಿದ್ದು ಅವುಗಳ ಪಕ್ಕದಲ್ಲಿಯ ಇನ್ನೊಂದು ಬುಟ್ಟಿ ಹಾಗೂ ಬಲಗಡೆ ಮರವನ್ನು ಕಾಣುತ್ತದೆ ಇದಲ್ಲದೆ. ಈ ಹೆಣ್ಣು ಮಕ್ಕಳು ರವಿಕೆ ಹಾಗೂ ಸೀರೆಯನ್ನು ಧರಿಸಿದು ಸಾಮಾನ್ಯ ಜನರು ಎಂಬುದು ಸ್ಪಷ್ಟವಾಗುತ್ತದೆ. ನಿಸರ್ಗದ ಅಂಚಿನಲ್ಲಿ ಕುಳಿತು ತನ್ನ ಮನೆಯ ಮುಂದೆ ಕೆಲಸ ಮಾಡುತ್ತಿರುವುದು ಕಂಡು ಬರುತ್ತದೆ. ಇವರ ಚಿತ್ರಕಲಾ ಪ್ರದರ್ಶನಗಳು ಧಾರವಾಡ, ಗುಲಬರ್ಗಾ, ಬೀದರ, ಪುನಂ, ಹುಬ್ಬಳಿ, ಹೀಗೆ ಹಲವಾರು ಕಡೆಗೆ ಚಿತ್ರಕಲಾ ಪ್ರದರ್ಶನ ಕೈಗೊಂಡಿದ್ದಾರೆ.

೩. ಕಲಾವಿದ ಎಂ.ಬಿ.ಲೋಹಾರ

ದಕ್ಷಿಣ ಭಾರತದಲ್ಲಿ ಎಂ.ಟಿ.ವಿ.ಆಚಾರ್ಯ ಮಧುಗಿರಿ ಹಾಗೂ ಎಸ್.ಎಂ.ಪಂಡಿತರು ನೈಜ ಕಲೆಗೆ ಹೆಚ್ಚು ಒತ್ತಡ ತಂದು ಪ್ರಚಾರ ನೀಡುವ ಸಮಯದಲ್ಲಿ ನಾವು ಸಹ ಆಧುನಿಕವಾಗಿ ಏಕೆ ಯೋಚನೆ ಮಾಡಬಾರದು ಎಂದು ಸಾಹಸಕ್ಕೆ ಕೈ ಹಾಕಿದ್ದಾರೆ.

ದಕ್ಷಿಣ ಕರ್ನಾಟಕದಲ್ಲಿ ಆರ್.ಎಂ.ಹಡಪದರ ಮೂಲಕ ಸಮಕಾಲೀನ ಕಲೆಯನ್ನು ಕರ್ನಾಟಕದಲ್ಲಿ ಪ್ರಾರಂಭವಾಗಿಯಿತು. ಇದೆ ತರಹ ಬೀದರ ಜಿಲ್ಲೆಯಲ್ಲಿಯೂ ಸಹ ಎಂ.ಬಿ.ಲೋಹಾರ ಅವರ ಕಲಾಕೃತಿಗಳಲ್ಲಿ ನೋಡಬಹುದು. ದೃಶ್ಯಕಲೆಯ ಮೂಲಕ ಪ್ರತಿನಿಧಿಯಂತೆ ಜೀವಂತವಾಗಿರುವುದು ಕಲೆಯ ಬೆಲೆಯನ್ನು ತೋರಿಸುತ್ತದೆ. ಇಂತಹ ಕಲೆಯ ಸತ್ವ ಸೌಂದರ್ಯಗಳನ್ನು ಗ್ರಹಿಸಿ ಕಲೆಯನ್ನು ಉಸಿರಾಡುವ ಭಾವನಾ ಜೀವಿಗಳಲೊಬ್ಬರು ಶ್ರೀ.ಎಂ.ಬಿ.ಲೋಹಾರ.

ನಗರದ ಹಿರಿಯ ಕಲಾವಿದರ ಪಟ್ಟಿಗೆ ಸೇರುವ ಎಂ.ಬಿ.ಲೋಹಾರ ಅವರು ೧೯೪೯ರಲ್ಲಿ ಬೀದರ್ ಜಿಲ್ಲೆಯ ಕಣಜ, ಗ್ರಾಮದಲ್ಲಿ ಜನಿಸಿದರು. ಮನೆತನದ ವೃತ್ತಿ ಕಮಾರಿಕೆ, ಮನೆತನದ ವೃತ್ತಿಯ ಜೊತೆಗೆ ಗ್ರಾಮ ಪರಿಸರದ ಪ್ರಭಾವದಿಂದಾಗಿ ಗೊಂಬೆಗಳ ತಯಾರಿಕೆ ಮತ್ತು ಗೋಡೆಗಳ ಮೇಲೆ ಚಿತ್ರಿಸುತ್ತಾ ಬಂದರು. ಇವರಿಗೆ ಹತ್ತು ಹಲವಾರು ಜನರ ಪ್ರೋತ್ಸಾಹ ಸಿಕ್ಕಿತು.

ಈ ಭಾಗದ ಕಲಾ ಕೇಂದ್ರವಾದ ದಿ ಐಡಿಯಲ್ ಫೈನ್ ಆರ್ಟ್ ಇನ್ಸ್‌ಟಿಟ್ಯೂಟ್‌ನಲ್ಲಿ ಚಿತ್ರ ಕಲೆಯಲ್ಲಿ ಡಿಪ್ಲೋಮಾ ಪದವಿ ಪೂರೈಸಿ ಅದೇ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ್ದರು.

ಎಂ.ಬಿ.ಲೋಹಾರ ಅವರ ಮೂಲ ಕಲಾಕೃತಿಗಳಲ್ಲಿ ನಿರ್ದಿಷ್ಟ ಒಲವು ಮತ್ತು ವ್ಯಕ್ತಿಗಳ ನಿಲುವುಗಳ ಸ್ಪಷ್ಟತೆಯನ್ನು ಕಾಣಬಹುದು. ಕಲಾ ವಿಷಯಗಳೆಂದರೆ, ಬಡತನ, ಅಸಮಾನತೆ, ಫ್ಯಾಂಟಸಿ ಈ ಕೃತಿಗಳಲ್ಲಿ ದುಡಿಸಿಕೊಂಡಿರುವ ಕೆಲವು ಮುಖ್ಯ ದೃಶ್ಯ ಪರಿಕರ ತಮ್ಮದೇ ಆದ ಸ್ವತಂತ್ರ ಶೈಲಿ ಮತ್ತು ಅಸಹಜವಾಸ್ತವ ಪ್ರಾಣಿ, ಗಿಡಗಳ ರೂಪಗಳ ಮಹತ್ವವಿದೆ. ಭಾವನೆಗಳ ಮೇಲೆ ಕಂಡಂತಹ ಅಪರಿಚಿತ ಭಾವನೆಗಳಿಂದ ವ್ಯಕ್ತಿಗಳ ನಗ್ನತೆ ಶಾರೀರಿಕ ನೋಟ ಅಪರಿಚಿತತೆ ಅನುಭವವಾಗುತ್ತಿದೆ. ವ್ಯಕ್ತಿಗಳ ವಿವಸ್ತ್ರ ಪ್ರಸ್ತುತ ವೈಚಿತ್ರ್ಯವು ಅನುಭವಗಮ್ಯವಾದ ನಿರ್ದಿಷ್ಟತೆ ನಿಗೂಢ ಪರಿಸರವೊಂದರಲ್ಲಿ ಭಾಗವಹಿಸಲು ಸಾಧಕವಾಗಿ ಪ್ರಯತ್ನಿಸಲಾಗಿದೆ. ಬಡತನ ಶೋಷಣೆಗಳು ಲೋಹಾರರ ಕಲಾತ್ಮಕತೆಯನ್ನು ಪ್ರದರ್ಶಿಸುವ ಪ್ರಮುಖ ವಸ್ತುಗಳಾಗಿ ಹಲವಾರು ವೈವಿಧ್ಯಮಯ ಚಿತ್ರಗಳಿಗೆ ತಳಹದಿಯಾಗಿದೆ. ಶೋಷಣಾಮಯ ಬದುಕು ಅದಕ್ಕೆ ಶೋಷಣೆಯ ಕಲಾತ್ಮಕ ಭಾವನಾತ್ಮಕತೆಯನ್ನು ತಮ್ಮ ಕುಂಚದಿಂದ ಪ್ರತಿಬಿಂಬಿಸಿದ್ದಾರೆ. ಬದುಕು ಅದಕ್ಕೆ ಶೋಷಣೆಯ ಕಲಾತ್ಮಕ, ಎಲ್ಲಾ ಕೃತಿಗಳಲ್ಲಿ ಒಂದೊಂದು ಅನುಭವ ತುಂಬಿರುತ್ತದೆ. ವಾಣಿಜ್ಯರೇಖಾಚಿತ್ರ ಹಾಗೂ ಪೇಂಟಿಂಗ್‌ಗಳಲ್ಲಿ ತಮ್ಮ ಕಲಾತ್ಮಕತೆಯನ್ನು ಅನಾವರಣಗೊಳಿಸಿದ್ದಾರೆ. ತೈಲ ವರ್ಣಕೃತಿಯಲ್ಲಿ ಸ್ತ್ರೀ ಮತ್ತು ಮರ, ತಲೆ, ಬಾಯಿ, ಎಲೆ, ತೋಳು ಶರೀರ ಎಲ್ಲಾ ಬಟ್ಟೆಯಿಂದ ಸುತ್ತಿದಂತೆ ಪದರ ಪದರ ಸುತ್ತುವುದು, ಹೂ ಹಣ್ಣು ಕೀಳುತ್ತಿರುವ ಸ್ತ್ರೀ ಹಿಂಬದಿ ವಿಲಕ್ಷಣವಾದ ಮತ ಅವಾಸ್ತವ ಪ್ರಪಂಚ ಬಂದರೆ ಭಾಗದಲ್ಲಿ ರಚಿಸಿದಂತೆ ಕಾಣುತ್ತದೆ. ವಿಚಿತ್ರ ನಿಗೂಢ ಆಕೃತಿಗಳಿಂದ ಪ್ರೇರಣೆಗೊಂಡ ರೂಪಗಳು ಶೈಲೀಕರಣ ಇವರ ಕೃತಿಯಲ್ಲಿ ಹೆಚ್ಚಾಗಿ ಕಾಣಬಹುದು. ಶೈಲೀಕರಣವು ಕೇವಲ ಅಭ್ಯಾಸ ಬಲವಾಗಿ ಅಲಂಕಾರವಾಗಿ ಸ್ವಂತಿಕೆಗಾಗಿ ಬಳಸಲಾಗಿದೆ.

ಇವರ ಕಲಾಕೃತಿಗಳು ಪ್ರಸಿದ್ಧ ಗ್ಯಾಲರಿಗಳಲ್ಲಿ ಪ್ರದರ್ಶನಗೊಂಡು ಜನ ಮೆಚ್ಚುಗೆ ಪಡೆದಿದೆ. ಹೈದ್ರಾಬಾದ ಆರ್ಟ್ ಸೊಸೈಟಿಯ ಅಖಿಲ ಭಾರತದ ಪ್ರದರ್ಶನ ಮೈಸೂರು ದಸರಾ ಅಲ್ಲದೆ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಿಂದ ನಡೆದ ನಾಲ್ಕು ಪ್ರದರ್ಶನಗಳಲ್ಲಿ ಪ್ರದರ್ಶನಗೊಂಡಿವೆ.

೧೯೮೮ರಲ್ಲಿ ಕಲಬುರ್ಗಿಯಲ್ಲಿ ಪ್ರಕೃತಿ ಚಿತ್ರ ಪ್ರದರ್ಶನ, ೧೯೮೩ರಲ್ಲಿ ಒಟ್ಟು ನಾಲ್ಕು ಪ್ರಶಸ್ತಿಗಳನ್ನು ಪಡೆದರು, ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಆಯ್ಕೆಗೊಂಡರು ನಾಗಪುರ ಕಲಾ ಕುಂಭ, ಅಂತರಾಷ್ಟ್ರೀಯ ಲಲಿತಕಲಾ ಪ್ರದರ್ಶನ, ಐಫೆಕ್ಸ್‌ನೂ ದೆಹಲಿ ಲಲಿತಕಲಾ ಅಕಾಡೆಮಿ ಪ್ರದರ್ಶನ ಜೈಪುರ ಬಾಂಬೆ ಆರ್ಟ್ ಸೊಸೈಟಿ. ದೆಹಲಿ, ಬಾಂಬೆ, ಬೆಂಗಳೂರು, ಚನ್ನೈಗಲ್ಲಿ ಏಕವ್ಯಕ್ತಿ ಹಾಗೂ ಗುಂಪು ಪ್ರದರ್ಶನ ನೆರವೇರಿಸಿ, ಅನೇಕ ಕಲಾ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಇಂಟರ್ ನ್ಯಾಷನಲ್ ಸ್ಕಲ್ಪಚರ್ ಆಂಡ್ ಪೆಂಟರ್ಸ್ ಸಿಂಪೋಜಿಯಂನಲ್ಲಿ ಭಾಗವಹಿಸಿದ್ದಾರೆ. ಗುಲಬರ್ಗಾ ವಿಶ್ವವಿದ್ಯಾಲಯ ಪ್ರಶಸ್ತಿ ಲಭ್ಯವಾಗಿದೆ. ಬಿನಾಲೆ ಭೋಪಾಲನಂತಹ ಅನೇಕ ಕಡೆ ಕಲಾ ಪ್ರದರ್ಶನಗೊಂಡಿವೆ.

ರಾಷ್ಟ್ರಪಿತ ಮಹಾತ್ಮಗಾಂಧಿ ಹಾಗೂ ಅವರ ವ್ಯಕ್ತಿತ್ವ ಎಂಬ ವಿಷಯದ ಮೇಲೆ ರಚಿಸಿದ ಕಲಾಕೃತಿ ಲಖನೌ ಅಕಾಡೆಮಿಯ ನಗದು ಬಹುಮಾನ ಹಾಗೂ ಪ್ರಶಸ್ತಿ ಪತ್ರವನ್ನು ನೀಡಿ ಗೌರವಿಸಿದೆ.

ಅರೆ ಅಮೂರ್ತ ಚಿತ್ರಗಳು ತೈಲವರ್ಣದಲ್ಲಿ ಹಿಡಿತ ಸಾಧಿಸಿದರು ರಭಸದಿಂದ ಕೂಡಿರುವ ಕುಂಚದ ಸುಳಿವನ್ನು ಭಿನ್ನವಾಗಿ ಪ್ರಯೋಗವನ್ನು ಕಂಡುಬರುತ್ತದೆ. ತೆಳುನೀಳ ಮಾನವಾಕೃತಿಗಳಿದ್ದರು, ಹಿನ್ನೆಲೆ ಮುನ್ನೆಲೆಗಳಲ್ಲಿ ಅಮೂರ್ತತೆಯಿಂದ ಕೂಡಿದ ವರ್ಣವಿಭಜನೆಗಳು ಕಲಾಕೃತಿಯನ್ನು ಬೇರೆಯಾಗಿಯೇ ನೋಡುಗನಲ್ಲಿ ತಂದು ನಿಲ್ಲಿಸುತ್ತದೆ. ಪ್ರಖರ ಹಾಗೂ ತಂಪುವರ್ಣಗಳನ್ನು ಬಳಸಿದ ರೀತಿ ಕಂಡುಬರುತ್ತದೆ. ಅವಕಾಶವನ್ನು ವಿಭಾಗಿಸಿಕೊಂಡ ರೀತಿ ಒಂದು ಕೃತಿಯಲ್ಲೇ ಅನೇಕ ಅಂಶಗಳನ್ನು ವಿಷಯಗಳನ್ನು ನೋಡುಗನಿಗೆ ತಿಳಿಸಿಕೊಡುವಲ್ಲಿ ಯಶಸ್ವಿಯಾಗಿದೆ.

ಇವರ ಚಿತ್ರದಲ್ಲಿ ಆಕೃತಿಗಳು ಚಿತ್ರದ ಹಿನ್ನೆಲೆಯೊಂದಿಗೆ ಬೆರೆತುಕೊಂಡಿರುವದು ಕಾಣುತ್ತದೆ. ವಿವಿಧ ಮೈವಳಿಕೆಗಳಿಂದ ಆಕೃತಿಯಲ್ಲಿ ಹೊಸತನತರುವಲ್ಲಿ ಹಾಗೂ ಚಿತ್ರದ ವಸ್ತುವಿನ ಮೌಲ್ಯಹೆಚ್ಚಿಸುವಲ್ಲಿ ಬಣ್ಣಗಾರಿಕೆ ತಂತ್ರಗಾರಿಕೆ ಮುಖ್ಯಪಾತ್ರವಹಿಸಿದೆ. ವ್ಯಾನ್‌ಗೋ ನಂತಹ ಕುಂಚದ ಹೊಡೆತಗಳು ನೆನಪಿಗೆ ಬಂದು ಮರೆಯಾಗುತ್ತವೆ. ಒಂದು ವರ್ಣ ಪ್ರಧಾನವಾಗಿ ವಿಶೇಷವಾಗಿರುವುದು ಬೀದರ ಕಲಾ ವಿಧಾನವಾಗಿ ಬರೀ ರಾಜ್ಯ ಅಷ್ಟೇ ಅಲ್ಲಾ ರಾಷ್ಟ್ರಮಟ್ಟದಲ್ಲಿ ಹೆಸರಾಗಿರುವ ಕಲಾವಿದರಾಗಿದ್ದಾರೆ.

### ೪. ಕಲಾವಿದ ಅನಿರುದ್ಧ ಕೆ.ಜೋಷಿ

ಬೀದರ ಜಿಲ್ಲೆಯ ಮತ್ತೊಬ್ಬ ಕಲಾವಿದರಾದ ಅನಿರುದ್ಧ ಜೋಷಿಯವರು ಹುಮನಾಬಾದಿನಲ್ಲಿ ೧೯೬೧ರಲ್ಲಿ ಜನಿಸಿರುವ ಇವರು ಚಿತ್ರಕಲೆಯಲ್ಲಿ ಡಿಪ್ಲೋಮಾ ಕೋರ್ಸನ್ನು "ದಿ ಐಡಿಯಲ್ ಫೈನ್ ಆರ್ಟ್ ಇನ್‌ಸ್ಟಿಟ್ಯೂಟ್‌ನಿಂದ ೧೯೮೨ರಲ್ಲಿ ಪೂರ್ಣಗೊಳಿಸಿದರು. ನಂತರ ಗುಲಬರ್ಗಾದ ಎಂ.ಎಂ.ಕೆ.ಕಾಲೇಜ್

ಆಫ್ ವಿಜುವಲ್ ಆರ್ಟ್"ದಿಂದ ಬಿ.ಎಫ್.ಎ ಪದವಿಯನ್ನು ೧೯೮೮ರಲ್ಲಿ ಪಡೆದರು. ಸಮೂಹ ಹಾಗೂ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳನ್ನು ಮಾಡಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಆಯೋಜಿಸಲ್ಪಟ್ಟ ಕಲಾ ಶಿಬಿರಿಗಳಲ್ಲಿ ಭಾಗವಹಿಸಿದ್ದಾರೆ. ರಾಜ್ಯ ಮತ್ತು ರಾಷ್ಟ್ರ ಸ್ಪರ್ಧೆಗಳಲ್ಲಿ ಇವರ ಕಲಾಕೃತಿಗಳು ಆಯ್ಕೆಯಾಗಿ ಪ್ರದರ್ಶಿಸಲ್ಪಟ್ಟಿವೆ. ೧೯೮೩ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಯ ಇವರಿಗೆ ಲಭಿಸಿದೆ. ಗುಲಬರ್ಗಾ ವಿಶ್ವವಿದ್ಯಾಲಯದ ೧೯೮೫ರ ರಾಜ್ಯೋತ್ಸವ ಪ್ರಶಸ್ತಿಯು ಇವರಿಗೆ ಲಭಿಸಿದೆ. ಲಲಿತಕಲಾ ಅಕಾಡೆಮಿಯ ಸದಸ್ಯರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ತೈಲವರ್ಣ ಹಾಗೂ ಜಲವರ್ಣಗಳಲ್ಲಿ ಇವರು ಕಲಾಕೃತಿಗಳನ್ನು ರಚಿಸುತ್ತಾರೆ. ಪ್ರಸ್ತುತ ಬೀದರಿನಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಈ ಕಲಾಕೃತಿ ನಿಸರ್ಗ ಚಿತ್ರವನ್ನು ಎಂದರೆ ಉತ್ತರ ಕರ್ನಾಟಕ, ಬೀದರ, ಹುಮನಾಬಾದಿನ ಕಲ್ಲು ಬಂಡೆಗಳನ್ನು ತಮ್ಮ ದೊಡ್ಡ ಕುಂಚದ ಹೊಡೆತಗಳಲ್ಲಿ ಮತ್ತು ಬಣ್ಣವನ್ನು ಕ್ಯಾನ್‌ವಾಸ್ ಮೇಲೆ ವರೆಸುವಿಕೆಯೊಂದಿಗೆ ವಿಭಿನ್ನವಾಗಿ ತೋರಿಸಿದ್ದಾರೆ. ಇಲ್ಲಿನ ಬಂಡೆಗಳು ಬಿಸಿಲಿನ ಛಳ ಮುಂತಾದವನ್ನು ಸುಂದರ ಕಲಾಕೃತಿಯನ್ನಾಗಿ ಮಾರ್ಪಡಿಸಿದ್ದಾರೆ.

ಈ ನಾಡಿನ ತೆಳು ದೇಹದ ಬಡಕಲು ಮಾನವಾಕೃತಿಗಳನ್ನಾಗಲಿ ಬಿಸಿಲಿನ ಛಳ ಎಲ್ಲವನ್ನು ದಪ್ಪವರ್ಣಗಳನ್ನು ಇಂಪ್ಯಾಸ್ಟ್ ಸೂಪರ ಇಂಪ್ಯಾಸ್ಟ್ ತಂತ್ರಗಾರಿಕೆಯಲ್ಲಿ ಇವರ ಚಿತ್ರದ ವಿಶೇಷತೆಯಾಗಿದೆ.

ಉತ್ತರ ಕರ್ನಾಟಕದ ಗಂಡು ನೆಲವನ್ನು ಅಷ್ಟೇ ಆಕರ್ಷಕವಾಗಿ ಆದರೆ ನೈಜತೆಗಿಂತ ವಾಸ್ತವತೆಗಿಂತ ಬಹುದೂರ ಎನ್ನಬಹುದಾದ ಎನ್ನುವ ಶೈಲಿಯಲ್ಲಿ ನಿರೂಪಿಸಿದ್ದಾರೆ. ಇವರ ಚಿತ್ರಗಳನ್ನು ಅಮೂರ್ತ ಅರೆ ಅಮೂರ್ತ ಚಿತ್ರಗಳಾಗಿ ಗುರುತಿಸಬಹುದು. ತನ್ನ ಸುತ್ತಮುತ್ತಲಿನ ಸಮಾಜವನ್ನು ಹೆಚ್ಚು ಶಕ್ತಿಯುತವಾಗಿ ಅಷ್ಟೇ ಆಕರ್ಷಕವಾಗಿ ಕ್ಯಾನ್‌ವಾಸ್‌ನಲ್ಲಿ ನಿರೂಪಿಸಿರುವುದು, ಅವರ ಪ್ರತಿಭೆಗೆ ನೀಡಿದ ಕನ್ನಡಿಯಾಗಿದೆ. ಅನೇಕ ಕಲಾಕೃತಿಗಳು ರಚಿಸಿದಲ್ಲಿ ನನಗೆ ದೊರೆತಿರುವುದು ಇದೊಂದಾಗಿದೆ.

೫. ಚಿತ್ರಕಲಾವಿದ ಅಶೋಕಕುಮಾರ ಹಿರೇಮಠ

ಬೀದರ ಜಿಲ್ಲೆಗೆ ಸೇರಿದ ಇನ್ನೊಬ್ಬ ಕಲಾವಿದ ಅಶೋಕ ಹಿರೇಮಠರು ೧೯೬೮ರಲ್ಲಿ ಖೈರಾಟ ಎಂಬ ಹಳ್ಳಿಯಾದ ಸೋಲಾಪುರ ತಾಲೂಕಿನಲ್ಲಿ ಜನಿಸಿದರು, ಪ್ರಾಥಮಿಕ ಶಿಕ್ಷಣದ ನಂತರ ದಿ.ಐಡಿಯಲ್ ಫೈನ್ ಆರ್ಟ್‌ನಲ್ಲಿ ಡಿಪ್ಲೋಮಾ ಪದವಿಯನ್ನು ೧೯೮೮ರಲ್ಲಿ ಪಡೆದು ಸಾಧ್ಯದಲ್ಲಿ ಹುಮನಾಬಾದಿನ ಹುಡುಗಿ ಎಂಬ ಊರಿಲ್ಲಿ ಚಿತ್ರಕಲಾ ಶಿಕ್ಷಕರಾಗಿ ವೃತ್ತಿ ನಿರ್ವಹಿಸುತ್ತಿದ್ದಾರೆ. ಹಾಗೂ ೨೦೦೭ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರಾಗಿದ್ದರು ಇವರ ಕಲಾಕೃತಿಗಳಲ್ಲಿ ನಿಸರ್ಗ ಚಿತ್ರಗಳನ್ನು ಹೆಚ್ಚಾಗಿ ರಚಿಸಿರುವುದು ಕಂಡುಬರುತ್ತದೆ.

ಇವರ ಕಲಾಕೃತಿಗಳಲ್ಲಿ ತೈಲವರ್ಣಗಳ ಬಳಕೆ ಹೆಚ್ಚಾಗಿ ಕಂಡು ಬರುತ್ತದೆ. ಅಲ್ಲದೆ Water Colour A crylick colourಗಳಲ್ಲಿಯು ಸಹ Expriment ಮಾಡಿದ್ದಾರೆ. ಇವರ ಚಿತ್ರಕಲಾ ಪ್ರದರ್ಶನಗಳು ಬಾಂಬೆ, ಬೆಂಗಳೂರು, ಸಿಂಗಾಪುರ, ದುಬೈ, ಉದಯಪುರ, ಹಾಸನ, ಗುಲಬರ್ಗಾ, ಧಾರವಾಡ, ಬೀದರ, ಗೋವಾ ಹೀಗೆ ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರದರ್ಶನ ಮಾಡಿದ್ದಾರೆ.

ಇವರ ಕಲಾಕೃತಿಗಳು, ಹುಮನಾಬಾದ, ಭಾಲ್ಕಿ, ಬೀದರ ಬಸವಕಲ್ಯಾಣ ಹಾಗೂ ರಾಜಸ್ಥಾನ ಬೆಂಗಳೂರು ಇನ್ನಿತರ ಕಡೆಗೆ ಸಂಗ್ರಹವಾಗಿವೆ.

ಕಲಾಶಿಬಿರಗಳಲ್ಲಿ ಭಾಗವಹಿಸಿದರಲ್ಲದೆ ಶಾಲಾ ಕಾಲೇಜುಗಳಲ್ಲಿ ಪ್ರಾತ್ಯಕ್ಷಿತೆ ನೀಡಿದ್ದಾರೆ. ಇವರು ಸತತವಾಗಿ, ಕಲಾಕೃತಿಗಳನ್ನು ಪ್ರದರ್ಶನ ಮಾಡುವದಲ್ಲದೆ, ಹತ್ತು ಕಲಾ ಹಲವು ಚಟುವಟಿಕೆಗಳನ್ನು ನಿರ್ವಹಿಸುತ್ತಾರೆ.

**೬. ಕಲಾವಿದ ಮಲ್ಲಿಕಾರ್ಜುನ ಶೆಟ್ಟಿ**

೧೯೬೫ರಲ್ಲಿ ಬೀದರ ಜಿಲ್ಲೆಯ ಹುಮನಾಬಾದನಲ್ಲಿ ಜನಿಸಿದ ಇವರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ನಂತರ ತಮ್ಮ ಆಸಕ್ತಿಯಂತೆ ದೃಶ್ಯಕಲೆಯಲ್ಲಿ ಬಿ.ಎಫ್.ಎ ಪದವಿಯನ್ನು ೧೯೮೩ರಲ್ಲಿ ಎಂ.ಎಂ.ಕೆ.ಕಾಲೇಜ್ ಆಫ್ ವಿಜ್ಯುವಲ್ ಆರ್ಟ್ ಗುಲಬರ್ಗಾದಿಂದ ಪಡೆದು ಮುಂದೆ ಹೆಚ್ಚಿನ ಅಭ್ಯಾಸಕ್ಕಾಗಿ ಎಂ.ಎಫ್.ಎ.ಗ್ರಾಫಿಕ್ ಪದವಿಯನ್ನು ಎಂ.ಎಸ್.ವಿಶ್ವವಿದ್ಯಾಲಯ ಬರೋಡಾದಿಂದ ೧೯೮೫ರಲ್ಲಿ ದೃಶ್ಯಕಲಾ ವಿಭಾಗದಿಂದ ಚಿನ್ನದ ಪದಕದೊಂದಿಗೆ ಪಡೆದಿದ್ದಾರೆ. ಒಬ್ಬ ಸೃಜನಶೀಲ ಕಲಾವಿದನಾಗಿ ಆಕ್ರೆಲಿಕ್, ಜಲವರ್ಣ ಹಾಗೂ ತೈಲವರ್ಣಗಳಲ್ಲಿ ಕಲಾಕೃತಿಗಳನ್ನು ರಚಿಸುತ್ತಾರೆ. ಇವರ ಕಲಾಕೃತಿಗಳು ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಅನೇಕ ಪ್ರದರ್ಶನಗಳಲ್ಲಿ ಆಯ್ಕೆಯಾಗಿ ಪ್ರದರ್ಶಿಸಲ್ಪಟ್ಟಿವೆ. ಅಲ್ಲದೆ ಗುಲಬರ್ಗಾ, ಬೆಂಗಳೂರು, ಮದ್ರಾಸ್, ಭುವನೇಶ್ವರ, ದೆಹಲಿ, ಮುಂಬೈ, ಗೋವಾ ಆರ್ಟ್‌ಗ್ಯಾಲರಿಗಳಲ್ಲಿ ಸಮೂಹ ಕಲಾ ಪ್ರದರ್ಶನಗಳು ಮಾಡಿದ್ದಾರೆ. ೧೯೯೦ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ರಾಜ್ಯೋತ್ಸವ ಪ್ರಶಸ್ತಿ ಪಡೆದ ಇವರು ಜೂನಿಯರ್ ಫೆಲೂಶಿಫ್ ಹೆಚ್.ಆರ್.ಡಿ.ನೂಡೆಲ್ಲಿ ಹೊಸದೆಹಲಿಯಿಂದ ೧೯೯೭-೯೯ರವರೆಗೆ ಪಡೆದರು ಪ್ರಸ್ತುತ ಸರಕಾರಿ ಡಿ.ಎಡ್.ಕಾಲೇಜಿನಲ್ಲಿ ಚಿತ್ರಕಲಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಫಾವಿಸಂ ಜನಕ ಮಾತಿಸ್ ಕಲಾವಿದನ ರೇಖೆಗಳನ್ನು ನೆನಪಿಸುವವಂತಹ ಕಲಾಕೃತಿಯು ಇದಾಗಿದೆ. ಮೇಜಿನ ವಕ್ರರೇಖೆಗಳು ಅದರ ಮೇಲಿನ ವಸ್ತುಗಳು ಹಿನ್ನೆಲೆಯಲ್ಲಿನ ಪುಸ್ತಕದ ಗೋಡು ಇವೆಲ್ಲವೂ ಮಾಲಿಸ್‌ನ ಚಿತ್ರಗಳನ್ನು ನೆನಪಿಸುವಂತಿದೆ. ನೈಜತೆಗಿಂತ ವಿಭಿನ್ನ ರಚನೆ ಇದು ಸೃಜನಾತ್ಮಕತೆಯ ಕಡೆಗೆ ಹೆಚ್ಚು ಒಲಿದಂತೆ ಇದೆ. ಚಿತ್ರದ ಸಂಯೋಜನೆ ರೇಖೆಯ ಅಂಕುಡೊಂಕು ಒಂದು ಸಾಮಾನ್ಯ ದೃಶ್ಯವನ್ನು ಕಲಾವಿದ ಹೇಗೆ ಹೆಚ್ಚು ಮಾರ್ಮಿಕವಾಗಿ ಆಕರ್ಷಕವಾಗಿ ವೈವಿಧ್ಯಮಯವಾಗಿ ಚಿತ್ರಿಸಿರುವುದನ್ನು ಇಲ್ಲಿ ಮನಗಾಣಬಹುದು.

ಗ್ರಾಫಿಕ್ ಮಾಧ್ಯಮದ ಪ್ರಭಾವ ಚಿತ್ರಕಲೆಯಲ್ಲಿ ಕಂಡುಕೊಂಡಿರುವುದು ವಿಶೇಷ ಅರೆಬರೆ (Incomplet) ಎನಿಸುವಂತೆ ಚಿತ್ರಿಸುತ್ತಾ ನೋಡುಗನಿಗೆ ಕಲಾಕೃತಿಯಲ್ಲಿ ಮತ್ತು ರಚಿಸಬಹುದಾದ ಅಂಶಗಳ ಕಡೆಗೆ ಕರೆದೊಯ್ಯುವುದು ಈ ಶೈಲಿಯ ಮತ್ತೊಂದು ಅಂಶವಾಗಿದೆ.

ಇವರು ರಾಜ್ಯ ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದಲ್ಲಿ ಉತ್ತಮ ಪ್ರದರ್ಶನಗಳು ಕೈಗೊಂಡಿದ್ದು, ಇವರ ಕಲಾಕೃತಿಗಳು ಯುವ ಕಲಾವಿದರಿಗೆ ಉತ್ತಮ ಪ್ರೇರಣೆಯಾಗಿವೆ.

೭. ಕಲಾವಿದ ಬಿ.ಕೆ.ಬಡೀಗೇರ

ಭೀಮರಾವ ಕಲ್ಲಪ್ಪಾ ಬಡೀಗೇರ ೧೯೬೯ರಲ್ಲಿ ಬಿಜಾಪುರ ಜಿಲ್ಲೆಯಲ್ಲಿ ಜನಿಸಿದ ಇವರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ನಂತರ A.M.G.D Artನ ಕಲಾಶಿಕ್ಷಣ ಧಾರವಾಡ ಕಲಾ ಶಾಲೆಯಿಂದ ಪಡೆದುಕೊಂಡು ಬೀದರ ಯೋಗಿಶ ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ಸೇವೆಸಲ್ಲಿಸುತ್ತಿದ್ದಾರೆ. ಕನ್ನಡ ವಿಶ್ವವಿದ್ಯಾನಿಲಯದಿಂದ ಎಂ.ವಿ.ಎ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ೧೯೯೫ರಲ್ಲಿ ಮೈಸೂರು ದಸರಾ ಪ್ರಶಸ್ತಿಯನ್ನು ಪಡೆದಿದ್ದಾರೆ. ಇವರು ತೈಲವರ್ಣದಲ್ಲಿ ಕಲಾಕೃತಿಗಳನ್ನು ರಚಿಸುತ್ತಾರೆ. ಇವರ ಕಲಾಕೃತಿಗಳು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಅಂಕುರ, ಗುಲಬರ್ಗಾ, ಬೆಂಗಳೂರು, ಮಂಗಳೂರು, ಸೇಡಂ, ಬೆಂಗಳೂರಿನ ಚಿತ್ರಕಲಾ ಪರಿಷತ್, ಮುಂಬಯಿ, ಬಾಂದ್ರಾ, ಬೀದರ, ೧೯೯೩ರಲ್ಲಿ We four in ಬಿಜಾಪುರ ಹೀಗೆ ಗುಂಪು ಚಿತ್ರಕಲಾ ಪ್ರದರ್ಶನ ಕೈಗೊಂಡಿದ್ದಾರೆ.

ಹಲವಾರು ಶಿಬಿರಗಳಲ್ಲಿಯೂ ಸಹ ಭಾಗವಹಿಸದ್ದಾರೆ. ಇವರ ಕಲಾಕೃತಿಗಳು ಬಿಜಾಪುರ, ಧಾರವಾಡ, ಮಂಗಳೂರು, ಬೆಂಗಳೂರು, ರಾಯಚೂರು, ಗುಲಬರ್ಗಾ, ಕೊತ್ತಮ್, ತ್ರೀವೇಂದ್ರಂ, ಬಾಂಬೆ, ಈ ಸ್ಥಳಗಳಲ್ಲಿ ಇವರ ಕಲಾಕೃತಿಗಳು ಸಂಗ್ರಹವಾಗಿವೆ.

ಇವರು ಪ್ರಕೃತಿ ಚಿತ್ರಗಳನ್ನು ಹೆಚ್ಚಾಗಿ ರಚಿಸಿರುವುದು ಕಂಡುಬರುತ್ತದೆ. ಇವರ ಕುಂಚಗಾರಿಕೆ ವರ್ಣಗಾರಿಕೆಯ ವಿಶೇಷತೆಗೆ ಹಿಡಿದ ಕನ್ನಡಿ ಎನ್ನಬಹುದು. ಕಾಲ್ಪನಿಕವಾಗಿ ನೆಲದ ಕೊರತೆಗಳು ಬಿರುಕುಗಳು,ಭೋರ್ಗರೆಯುವ ಜಲಪ್ರವಾಹ ಮುಂತಾದ ಕಾಲ್ಪನಿಕ ಆದರೆ ಕಣ್ಣಿಗೆ ಹೆಚ್ಚು ನೆನಪಿನಲ್ಲಿರುವಂತಹ ಪ್ರಕೃತಿ ವಿಕೋಪಗಳನ್ನು ಲಲಾಜಾಲವಾಗಿ ನೋಡುಗರ ಮುಂದಿರಿಸುವ ರೀತಿ ಅಚ್ಚರಿ ಮೂಡಿಸುತ್ತದೆ. ಪ್ರಾಕೃತಿಕ ವೈಫಲ್ಯತೆಗಳು ರುದ್ರ, ಧೀರರ, ಸೌಂದರ್ಯದೊಂದಿಗೆ ನೋಡುಗರ ಗಮನ ಸೆಳೆಯುವಂತೆ ಇವರ ಕೃತಿಗಳಲ್ಲಿ ಕಂಡುಬರುತ್ತದೆ. ಇವರ ಕಲಾಕೃತಿಗಳಿಂದಾಗಿ ಇವರು ರಾಷ್ಟ್ರಮಟ್ಟದಲ್ಲಿ ಗುರುತಿಸಲ್ಪಡುವ ಕಲಾವಿದರಾಗಿದ್ದಾರೆ.

೮. ಕಲಾವಿದ ಅಶೋಕ ಶಟಗಾರ

ಜೂನ್ ೧ ರಂದು ಬೀದರ್ ಜಿಲ್ಲೆಯ ಬೆಳಕುಣೆ ಚೌಧರಿ ಗ್ರಾಮದಲ್ಲಿ ಜನಿಸಿದ ಇವರು ತಮ್ಮ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣದ ನಂತರ ಚಿತ್ರಕಲೆಯಲ್ಲಿ ಡಿಪ್ಲೋಮಾ ಆರ್ಟ್ ಮಾಸ್ಟರ್ ಕೋರ್ಸನ್ನು

ದಿ ಐಡಿಯಲ್ ಫೈನ್ ಆರ್ಟ್ ಇನ್ಸ್ಟಿಟ್ಯೂಟ್ ಗುಲಬರ್ಗದಿಂದ ಪೂರ್ಣಗೊಳಿಸಿದ್ದಾರೆ. ನಂತರ ಎಂ.ಎಫ್.ಎ. ಪೇಂಟಿಂಗ್ ಪದವಿಯನ್ನು ಎಂ.ಎಂ.ಕೆ.ಕಾಲೇಜ್ ಆಫ್ ಎಜುವಲ್ ಆರ್ಟ್ ಗುಲಬರ್ಗಾದಿಂದ ಪಡೆದುಕೊಂಡಿದ್ದಾರೆ. ಇವರ ಕಲಾಕೃತಿಗಳು ರಾಜ್ಯಹಾಗೂ ರಾಷ್ಟ್ರ ಮಟ್ಟದ ಅನೇಕ ಕಲಾ ಸ್ಪರ್ಧೆಗಳಲ್ಲಿ ಆಯ್ಕೆಯಾಗಿ ಪ್ರದರ್ಶಿಸಲ್ಪಟ್ಟಿವೆ. ಇವರ ಸಮೂಹ ಕಲಾ ಪ್ರದರ್ಶನವನ್ನು ರಾಷ್ಟ್ರೀಯ ಕಲಾಮೇಳ, ಮದ್ರಾಸ್, ದೆಹಲಿ, ಬೆಂಗಳೂರು, ಕೋಲ್ಕತ್ತಾದಲ್ಲಿಯೂ ಮಾಡಿದ್ದಾರೆ. ಇವರ ಚಿತ್ರಕಲಾಕೃತಿಗಳನ್ನು ರಚಿಸುವುದರೊಂದಿಗೆ ಅಭಿನಯ ಕಲೆಯಲ್ಲಿಯೂ ತೊಡಗಿಸಿಕೊಂಡಿದ್ದಾರೆ. ಗುಲ್ಬರ್ಗಾ ಸಮುದಾಯ ಅನೇಕ ನಾಟಕಗಳಲ್ಲಿಯೂ ಅಭಿನಯಿಸಿದ್ದಾರೆ. ಪ್ರಸ್ತುತ ಇವರು ಉಪನ್ಯಾಸಕರಾಗಿ ದಿ ಆರ್ಟ್ ಇಂಟಿಗ್ರೇಶನ್ ಮಹಾವಿದ್ಯಾಲಯ ಗುಲಬರ್ಗಾದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ೧೯೯೭ ಹಾಗೂ ೨೦೦೨ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದಿದ್ದಾರೆ.

ಈ ಚಿತ್ರದಲ್ಲಿ ತೈಲವರ್ಣವನ್ನು ವಿಭಿನ್ನವಾಗಿ ದೃಢಿಸಿಕೊಂಡ ರೀತಿಯನ್ನು ಕಾಣಬಹುದು. ತೈಲ ಬಳಸಿಕೊಂಡಿರುವದು ಕಾಣಬಹುದು. ಡ್ರಾಯ್‌ಬ್ರಶ್ Method ಇರಬಹುದು ತೈಲವನ್ನು Lincidಯ ತೆಳವಾಗಿ ಬಳಸಿರುವುದು ವಿಭಿನ್ನ ಕುಂಚಗಾರಿಕೆಯಲ್ಲಿ ಅಷ್ಟೇ ವಿಭಿನ್ನ ಗಾಢವರ್ಣದ ಸ್ತ್ರೀ ಆಕೃತಿ ಪ್ರಕೃತಿಗೆ ಸ್ಪಂದಿಸುವ ರೀತಿಯನ್ನು ಇಲ್ಲಿ ಕಲಾವಿದ ತನ್ನದೇ ಆದ ವರ್ಣಗಾರಿಕೆ ತಂತ್ರಗಾರಿಕೆ ನೋಡಬಹುದು.

ಇವರು ಬೀದರ್‌ನ ಬೆಳಕುಣೆ ಗ್ರಾಮದವರಾಗಿದ್ದು, ಜಿಲ್ಲೆಯಹೆಮ್ಮೆಯ ಮತ್ತೊಬ್ಬ ಕಲಾವಿದವೆನಿಸಿದರು ಮೂಲ ವರ್ಣಗಳಿಂದ ಬೇರೆಯಾದ ಹಾಗೂ ಕ್ಯಾನವಾಸ್‌ನ ಮೈ ವಳಿಕೆಯನ್ನು ಬಳಸಿಕೊಂಡ ರೀತಿ ವಿಶೇಷವಾದದ್ದು.

### ೯. ಕಲಾವಿದ ಡಾ.ಮೋಹನ್‌ರಾವ್ ಬಿ.ಪಂಚಾಳ

ಇವರು ಯಾವುದೇ ಒಂದು ಶೈಲಿಗೆ ಅಂಟಿಕೊಳ್ಳದೆ. ಸದಾ ಹೊಸದನ್ನು ಕಂಡುಕೊಳ್ಳುತ್ತ ತಮ್ಮನು ತಾವು ತೊಡಗಿಸಿಕೊಳ್ಳುವ ಕಲಾವಿದರಾಗಿದ್ದಾರೆ. ಇವರ ಶಕ್ತಿಯುತವಾದ ರೇಖೆಗಳಿಂದ ಕೂಡಿದ ಕಪ್ಪುಬಿಳುಪು ಚಿತ್ರಗಳು ರೇಖಾಚಿತ್ರ ಗಮನಾರ್ಹವಾಗಿದ್ದು, ಕೆಲವೊಂದು ಕಡೆ ಪಾಶ್ಚಿಮಾತ್ಯ ಕಲಾವಿದ ಪಿಕಾಸೋನ ಪ್ರಭಾವ ನೆನಪಿಸುವಂತಿದೆ. ಇವರು ನಿಂತ ನೀರಾಗಲು ಬಯಸದೆ ಈ ಕಲಾವಿದರ ವರ್ಣ ಕಲಾಕೃತಿಗಳು ಮೂರ್ತ ಅರೆ ಅಮೂರ್ತ, ನೈಜ ಚಿತ್ರಗಳನ್ನು ಯಶಸ್ವಿಯಾಗಿ ನೋಡುಗರ ಮನವನ್ನು ಮುಟ್ಟುವಂತಿದೆ. ಈ ಎಲ್ಲಾ ಶೈಲಿಯಲೂ ಕಲಾವಿದನ ನಿಖರತೆ ತನ್ಮಯತೆ ಸೃಜನಾತ್ಮಕತೆಯ ಅಂಶಗಳು ಮೇಳೈಸಿರುವುದನ್ನು ಇವರ ಕಲಾಕೃತಿಗಳಲ್ಲಿ ಗಮನಿಸಬಹುದು.

ಇವರು ಉಪನ್ಯಾಸಕ ವೃತ್ತಿಯಿಂದ ವಿದ್ಯಾರ್ಥಿಗಳಲ್ಲೂ ಪ್ರೇರಕ ಶಕ್ತಿಯಾಗಿದ್ದು, ತಮಗಿಂತಲು ವಿಭಿನ್ನ ಕಲಾಕೃತಿಗಳ ರಚನೆಯನ್ನು ಮಾಡುವಂತೆ ಪ್ರೋತ್ಸಾಹಿಸುವುದು ಆ ವಿದ್ಯಾರ್ಥಿಗಳ ಕೃತಿಗಳ ಮೂಲಕ ಕಂಡುಕೊಳ್ಳಬಹುದು.

ರಾಷ್ಟ್ರ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕಲಾಕೃತಿಗಳನ್ನು ಪ್ರದರ್ಶಿಸಿದ್ದು, ಜಗತ್ತಿಗೆ ಪ್ರಯೋಗ ಶೀಲ ಕೃತಿಗಳನ್ನು ನೀಡುತ್ತಾ ಬಂದಿದ್ದಾರೆ. ಇವರ ಅಮೂರ್ತ ಚಿತ್ರಗಳಲ್ಲಿ ಒಂದಾದ ಇಂತಹ ಕಲಾಕೃತಿಗಳಲ್ಲಿ ಮಂದಹಾಸ ಪಾರದರ್ಶಕ ವರ್ಣಗಳನ್ನು ಬಳಸುತ್ತಾ ಚಿತ್ರದ ವಸ್ತುವಿಗೆ ಸೂಕ್ಷ್ಮರಚನೆಗೆ ಆಕೃತಿಗಳು ಇಡೀಚಿತ್ರಕ್ಕೆ ಪೂರಕವಾಗಿ ಕಂಡು ಬಂದಿದೆ. ಅನೇಕ ಸಂಯೋಜನಾ ಚಿತ್ರಗಳು ಪ್ರಖರ ವರ್ಣ ಹಾಗೆ ಮಂದ ವರ್ಣಗಳ ಬಳಕೆಯು ಇವರ ಕೃತಿಯಲ್ಲಿ ವಿಶೇಷ ಸ್ಥಾನಗಳಿಸಿದೆ. ಚಿತ್ರಕಲೆ ಅಲ್ಲದೆ, ಶಿಲ್ಪಗಾರಿಕೆ ಪ್ರತಿಷ್ಠಾಪನಾ ಕಲೆ ಹೀಗೆ ನಾನಾ ಕಲೆಯಲ್ಲಿ ಸಹ ಪರಿಣತಿ ಹೊಂದಿದ್ದು, ಯುವ ಕಲಾವಿದರಿಗೆ ಪ್ರೇರಕ ಶಕ್ತಿಯಾಗಿಯೂ ಕಂಡು ಬರುತ್ತದೆ.

ಚಿತ್ರ ಶಿಲ್ಪಕಲಾವಿದ, ಸಂಶೋಧಕ, ವಿಮರ್ಶಕ ಮತ್ತು ಸಂಘಟಿಕರಾದ ಡಾ.ಮೋಹನ್‌ರಾವ್ ಬಿ.ಪಂಚಾಳ ಅವರು ಜನವರಿ ೨ ೧೯೭೪ರಂದು ಬೀದರ್ ಜಿಲ್ಲೆಯ ಹುಮ್ನಾಬಾದ್ ತಾಲೂಕಿನ ನಂದಗಾಂವ ಗ್ರಾಮದಲ್ಲಿ ಜನಿಸಿದ್ದಾರೆ. ಎಂ.ಎಫ್.ಎ ಸ್ನಾತಕೋತ್ತರ ಚಿತ್ರಕಲೆಯ ಪದವಿ ಮತ್ತು ೨೦೦೮ರಲ್ಲಿ ವಿಶ್ವವಿಖ್ಯಾತ ಕಲಾವಿದ ಡಾ.ಎಸ್.ಎಂ.ಪಂಡಿತರ ಕುರಿತು ಸಂಶೋಧನ ಮಹಾಪ್ರಬಂಧವನ್ನು ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸ ಪಿಹೆಚ್.ಡಿ ಪದವಿಯನ್ನು ಪಡೆದಿದ್ದಾರೆ. ಇದು ಬೀದರ್ ಜಿಲ್ಲೆಯಲ್ಲಿಯ ದೃಶ್ಯಕಲೆಯಲ್ಲಿ ಪ್ರಪ್ರಥಮ ಪಿಹೆಚ್.ಡಿ ಪದವಿಗೆ ಹೆಗ್ಗಳಿಕೆಯಾಗಿದೆ.

ಮುಂಬೈ, ಬೆಂಗಳೂರು, ದೆಹಲಿ..., ಹೀಗೆ ಮುಂತಾದ ಸ್ಥಳಗಳಲ್ಲಿನ ಪ್ರತಿಷ್ಠಿತ ಸರ್ಕಾರಿ, ಖಾಸಗಿ ಸಂಘ ಸಂಸ್ಥೆಯವರು ಆಯೋಜಿಸಿದ ರಾಜ್ಯ ಮತ್ತು ರಾಷ್ಟ್ರಮಟ್ಟದ ಚಿತ್ರಕಲಾ ಸ್ಪರ್ಧೆ ಮತ್ತು ಪ್ರದರ್ಶನಗಳಿಗೆ ಇವರ ಕಲಾಕೃತಿಗಳು ಆಯ್ಕೆಯಾಗಿವೆ. ಹಂಪಿ, ಗುಲ್ಬರ್ಗಾ, ಬೆಂಗಳೂರು, ದೆಹಲಿ, ಹರಿಯಾಣ, ಪಾಟ್ನಾ, ಲಖ್ನೋ, ಪೂಣೆ, ಉಜ್ಜೈನಿ, ಕೇರಳ, ಕುಪ್ಪಂ... ಹೀಗೆ ಒಟ್ಟು ಹದಿನೈದಕ್ಕೂ ಹೆಚ್ಚು ಸ್ಥಳಗಳಲ್ಲಿ ನಡೆದ ರಾಷ್ಟ್ರೀಯ ಅಂತರಾಷ್ಟ್ರೀಯ ಚಿತ್ರ ಶಿಲ್ಪಕಲಾ ಶಿಬಿರಗಳಲ್ಲಿ ಭಾಗವಹಿಸಿದ ಅನುಭವ ಇವರಿಗಿದೆ.

೨೦೧೦ ಕರ್ನಾಟಕ ಲಲಿತಕಲಾ ಅಕಾಡೆಮಿ ಧನಸಹಾಯದಿಂದ ರಾಯಲ್ ಆರ್ಟ್ ಗ್ಯಾಲರಿ, ಮುಂಬೈಯಲ್ಲಿ ಹಾಗೂ ಅಖ್ತರ್ ಆರ್ಟ್ ಗ್ಯಾಲರಿ, ಮಂಗಳೂರುಗಳಲ್ಲಿ ಇವರ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳು ನಡೆದಿವೆ. ನೆಹರೂ ಸೆಂಟರ್ ಆರ್ಟ್ ಗ್ಯಾಲರಿ, ಮುಂಬೈಯಲ್ಲಿ ನಾಲ್ಕು ಬಾರಿ, ತಾಜ್ ಹೋಟಲ್, ದೆಹಲಿಯಲ್ಲಿ ಮೂರು ಬಾರಿ, ಕೇಂದ್ರ ಲಲಿತಕಲಾ ಅಕಾಡೆಮಿ, ದೆಹಲಿ, ಲಖ್ನೋ, ಪಾಟ್ನಾ, ಹೈದರಾಬಾದ್, ವಿಜಾಪುರ, ಬೆಂಗಳೂರು, ಹೀಗೆ ದೇಶದ ಮುಂತಾದ ಸ್ಥಳಗಳಲ್ಲಿ ಹಾಗೂ ಇಂಡೋನೇಷಿಯಾ ಪಾಶ್ಚಿಮಾತ್ಯ ದೇಶದಲ್ಲಿಯೂ ಇವರ ಗುಂಪು ಚಿತ್ರಕಲಾ ಪ್ರರ್ದನಗಳುನಡೆದಿವೆ. ಖ್ಯಾತ ಸಂಗೀತ ನಿರ್ದೇಶಕ ಎಂ.ಆರ್.ರೆಹಮಾನ್, ಸಂದೀಪ್ ಚೌಟ, ಚಲನಚಿತ್ರ ನಿರ್ದೇಶಕ, ನಿರ್ಮಾಪಕ ಸುಭಾಷ್ ಘಾಯಿ, ಚಿರಂಜೀವಿ ಸಿಂಗ್, ಕಲಾವಿದ ಜತೀನ್ ದಾಸ್, ಎಂ.ಬಿ.ಪಾಟೀಲ, ಡಾ.ಚಂದ್ರಶೇಖರ ಕಂಬಾರ, ನೆವಿಲ್

ಥೀಲ್, ಪಿ.ಕೆ.ಮಾನ್ವಿ, ಡಿ.ಕೆ.ಚೌಟ ಮೊದಲಾದವರಂತಹ ಗಣ್ಯ ವ್ಯಕ್ತಿಗಳು ಇವರ ಚಿತ್ರಕಲಾ ಪ್ರದರ್ಶನಗಳನ್ನು ಉದ್ಘಾಟಿಸಿದ್ದಾರೆ.

ಚಿತ್ರದುರ್ಗ, ಮಂಗಳೂರು, ಇಳಕಲ್, ಹಾಸನ, ಹುಬ್ಬಳ್ಳಿ, ಗುಲಬರ್ಗಾಗಳಲ್ಲಿನ ಕಲಾಶಾಲೆ ಮತ್ತು ಕಲಾಗ್ಯಾಲರಿಗಳಲ್ಲಿ ಇವರು ಕಲಾಪ್ರಾತ್ಯಕ್ಷಿಕೆ ನೀಡಿರುವುದು ಕಲಾವಿದ್ಯಾರ್ಥಿಗಳ ಬೆಳವಣಿಗೆಗೆ ಬಹಳ ಉಪಯುಕ್ತವಾಗಿದೆ. ರಾಜ್ಯ ಮತ್ತು ರಾಷ್ಟ್ರ ಮಟ್ಟದ ಚಿತ್ರಕಲಾ ಪ್ರದರ್ಶನ, ಶಿಬಿರ ಹಾಗೂ ಸಮ್ಮೇಳನದ ಸಂಚಾಲಕರಾಗಿ ಹಾಗೂ ಸಮಿತಿಗಳ ಸದಸ್ಯರಾಗಿ ಸೇವೆ ಸಲ್ಲಿಸಿದ ಆಡಳಿತಾತ್ಮಕ ಅನುಭವ ಇವರಿಗಿದೆ.

ಗುಲ್ಬರ್ಗಾ, ಬೆಂಗಳೂರು, ಗದಗ, ಧಾರವಾಡ, ಕುಪ್ಪಂ ಹೀಗೆ ಮುಂತಾದ ಸ್ಥಳಗಳಲ್ಲಿ ಇವರು ಭಿತ್ತಿಚಿತ್ರಗಳನ್ನು ರಚಿಸಿದಾರೆ. ಇತ್ತೀಚೆಗೆ ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ನಡೆದ ರಾಷ್ಟ್ರೀಯ ಶಿಲ್ಪಕಲಾ ಶಿಬಿರದಲ್ಲಿ ಭಾಗವಹಿಸಿ ಎರಡು ಶಿಲ್ಪಕಲಾ ಕಲಾಕೃತಿಗಳನ್ನು ರಚಿಸಿದ್ದಾರೆ.

ನಾಡಿನ ಸಂಸ್ಕೃತಿ, ಸಮಕಾಲೀನ ಸಾಮಾಜಿಕ ಸಮಸ್ಯೆಗಳು, ದುಶ್ಚಟದ ಪರಿಣಾಮ, ಪರಿಸರದ ಪ್ರಭಾವ ಹೀಗೆ ವಿವಿಧ ವಿಷಯಗಳ ಪ್ರತಿಷ್ಠಾಪನಾ ಕಲೆಯನ್ನು ರಚಿಸಿ ಹಂಪಿ, ಗದಗ, ಬೆಂಗಳೂರು ಮುಂತಾದ ಸ್ಥಳಗಳಲ್ಲಿನ ಕಲಾಶಾಲೆ ಮತ್ತು ಗ್ಯಾಲರಿಗಳಲ್ಲಿ ಅನೇಕ ಪ್ರತಿಷ್ಠಾಪನ ಕಲೆ ಅಭಿವ್ಯಕ್ತಪಡಿಸಿ ಗಣ್ಯರ ಪ್ರಶಂಸೆಗೆ ಪಾತ್ರರಾಗಿದ್ದಾರೆ.

ಇವರ ಸಾಹಿತ್ಯ ಕುರಿತು ಪರಿಚಯಿಸುವುದಾದರೆ ಈಗಾಗಲೇ ಇವರು ವಜ್ರವಿಜಯ ನೆನಪಿನ ಸಂಚಿಕೆಯ ಸಂಪಾದಕರಾಗಿ, ದೃಶ್ಯಾನುಭವ ಮತ್ತು ಚಿತ್ರಕಲಾವಿದ ಡಾ.ಎಸ್.ಎಂ.ಪಂಡಿತ್ ಎಂಬ ಎರಡು ಪುಸ್ತಕಗಳ ಲೇಖಕರಾಗಿದ್ದಾರೆ. ಇವರ ದೃಶ್ಯಾನುಭವ ಕೃತಿಯು ಕರ್ನಾಟಕ ಸರಕಾರದ ಪುಸ್ತಕ ಪ್ರಾಧಿಕಾರದ ಧನಸಹಾಯದಿಂದ ಪ್ರಕಟಗೊಂಡಿದೆ. ಕಲಾವಿದ, ಸಂಶೋಧಕ ಡಾ.ಎಸ್.ಸಿ.ಪಾಟೀಲ ಮತ್ತು ಮಹಾಲಿಂಗಪುರ ಭಿತ್ತಿಚಿತ್ರಗಳು ಎಂಬ ಎರಡು ಪುಸ್ತಕಗಳು ಸದ್ಯದಲ್ಲಿಯೇ ಪ್ರಕಟಗೊಳ್ಳಲು ಸಿದ್ಧವಾಗಿವೆ. ಹೊಸತು ಮಾಸಪತ್ರಿಕೆ, ಸಂಚಿಕೆ ಮತ್ತು ದಿನ ಪತ್ರಿಕೆಗಳಲ್ಲಿ ಇವರ ಅನೇಕ ಸಂಶೋಧನಾತ್ಮಕ ಲೇಖನಗಳು ಪ್ರಕಟಗೊಂಡಿವೆ.

ಬೆಂಗಳೂರು, ಪೂಣೆ, ಲಖ್ನೋ, ಪಾಟ್ನಾ, ದೆಹಲಿ, ಮುಂಬೈ, ಸಿಂಗಪೂರ್, ಇಟಲಿ, ಫ್ರಾನ್ಸ್, ಸ್ವಿಝರ್‌ಲ್ಯಾಂಡ್, ಯು.ಎಸ್.ಎ., ಯು.ಕೆ, ಆಸ್ಟ್ರೇಲಿಯಾ ಹೀಗೆ ದೇಶ ವಿದೇಶಗಳಲ್ಲಿನ ಕಲಾಭಿಮಾನಿಗಳು ಇವರ ಕಲಾಕೃತಿಗಳನ್ನು ಸಂಗ್ರಹಿಸಿಕೊಂಡಿದ್ದಾರೆ.

ಬೊಂಬಾಯ್ ಆರ್ಟ್ ಸೊಸಾಯಿಟಿ, ಮುಂಬೈ, ವೀರ್ಗೋಸ್ ಆರ್ಟ್ ಗ್ಯಾಲರಿ, ಲಖ್ನೋ, ಆರ್ಟಿಸ್ಟ್ ಸೆಂಟರ್, ಮುಂಬೈನ ಅಜೀವ ಸದಸ್ಯರಾಗಿ, ಮಂಗಳೂರು ಅಬ್ಬುರ ಆರ್ಟ್ ಗ್ಯಾಲರಿ ಕಾರ್ಯನಿರ್ವಾಹಕ, ಸದಸ್ಯರಾಗಿ ಕಲಾ ದೀರ್ಘ ಪತ್ರಿಕೆಯ ಡಿಮಾಂಡ್ ಅಸೋಸಿಯೇಟ್ ಮತ್ತು ಮೂರು ವಿಶ್ವವಿದ್ಯಾಲಯಗಳ ಬಿ.ಓ.ಇ ಸದಸ್ಯರಾದ ಅನುಭವ ಇವರಿಗೆ ಉಂಟು. ಚಿತ್ರ, ಶಿಲ್ಪ, ಸಾಹಿತ್ಯ ಮೂರನ್ನೂ ಬೆಳಸಿಕೊಂಡ ಡಾ.ಪಂಚಾಳರಿಗೆ ಪೂಣೆ ತಿಲಕ್ ಸ್ಮಾರಕ ರಾಷ್ಟ್ರೀಯ ಪ್ರಶಸ್ತಿ, ಕರಾವಳಿ ಸಾಂಸ್ಕೃತಿಕ ಪ್ರತಿಷ್ಠಾನ,

ರಾಷ್ಟ್ರೀಯ ಪ್ರಶಸ್ತಿ ಕೇರಳ, ಮೈಸೂರು ದಸರಾ ಪ್ರಶಸ್ತಿ, ಪುಲಯ್ಯ ಕಲಾನಿಲಯಂ ಆಂಧ್ರಪ್ರದೇಶ ಪ್ರಶಸ್ತಿ ಹೀಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಇವರ ಸಾಧನೆ ಗುರುತಿಸಿಕೊಂಡು ಇವರಿಗೆ ಸಂದಿವೆ. ಹಾಗೆಯೇ ನಾಡಿನ ಅನೇಕ ಮಠಾಧೀಶರು, ಸಂಘ ಸಂಸ್ಥೆಯವರು ಇವರನ್ನು ಆಹ್ವಾನಿಸಿ ಸನ್ಮಾನಿಸಿದ್ದಾರೆ.

### ೧೦. ಕಲಾವಿದ ಸತೀಶಕುಮಾರ ವಲ್ಲೇಪುರೆ

ಬೀದರ ಜಿಲ್ಲೆಗೆ ಸೇರಿದ ಇನ್ನೊಬ್ಬ ಕಲಾವಿದ ಸತೀಶಕುಮಾರ ಪಿ.ವಲ್ಲೇಪುರೆ, ೧೯೭೭ರಲ್ಲಿ ಬೆಳಕುಣಿ ಗ್ರಾಮದ ಔರಾದ ತಾಲೂಕಿನಲ್ಲಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣದ ನಂತರ ಎ.ಎಂ.ಜಿ.ಡಿಯ ಚಿತ್ರಕಲಾ ಶಿಕ್ಷಣವನ್ನು ಗುಲಬರ್ಗಾದ ಐಡಿಯಲ್ ಫೈನ್ ಆರ್ಟ್‌ನಲ್ಲಿ ಪಡೆದರು. ನಂತರ ಎಂ.ಎಫ್.ಎ.ಚಿತ್ರಕಲೆ ಎಂ.ಎಂ.ಕೆ.ಕಾಲೇಜ್ ಆಫ್ ವಿಜುವಲ್ ಆರ್ಟ್ ಗುಲಬರ್ಗಾದಿಂದ ಪಡೆದರು.

ಗುಲಬರ್ಗಾ ವಿಶ್ವವಿದ್ಯಾಲಯದಿಂದ ವಿ.ಜಿ.ಅಂದಾನಿಯವರ ಮಾರ್ಗದರ್ಶನದಲ್ಲಿ ಮುಂಬಯಿ ಕಲಾ ಶಾಲೆಯ ಪ್ರಾತಿನಿಧಿಕ ಕರ್ನಾಟಕದ ಕಲಾವಿದರು ಎಂಬ ವಿಷಯದ ಮೇಲೆ ಸಂಶೋಧನೆಯನ್ನು ಮಾಡಿದ್ದಾರೆ.

ಸದ್ಯದಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರಸಮೂಹ ಚಿತ್ರಕಲಾ ಪ್ರದರ್ಶನಗಳು ಹೈದರಾಬಾದ, ಪುಣೆ, ಮುಂಬಯಿ,ಬೆಂಗಳೂರು, ಗುಲಬರ್ಗಾ, ಕರ್ನಾಟಕ ಲಲಿತಕಲಾ ಅಕಾಡೆಮಿ, ಹೀಗೆ ಹಲವು ಕಡೆ ಚಿತ್ರಪ್ರದರ್ಶನ ಮಾಡಿದ್ದಾರೆ.ಕಲಾ ಶಿಬಿರಗಳಲ್ಲಿಯೂ ಸಹ ಭಾಗವಹಿಸಿದ್ದಾರೆ.

ಇವರಿಗೆ ದೊರೆತ ಪ್ರಶಸ್ತಿಗಳು ಲಲಿತಕಲಾ ಅಕಾಡಮೆಮಿ ೨೦೦೫ರಲ್ಲಿ Best Photography Inner wheel club gulbarga noarth. ಇವರ ಕಲಾಕೃತಿಗಳ ಸಂಗ್ರಹ, ಕರ್ನಾಟಕ, ಎಂ.ಎಂ.ಕೆ.ಕಾಲೇಜ್ ಆಫ್ ಗುಲಬರ್ಗಾ ಪುಣೆಯಲ್ಲಿ ಹೀಗೆ ಕಲಾ ಚಟುವಟಿಕೆಯಲ್ಲಿ ಸತತ ಪ್ರಯತ್ನವನ್ನು ನಡೆಸುತ್ತಿದ್ದಾರೆ.

### ೧೧. ಕಲಾವಿದ ಸಂತೋಷ ಕುಮಾರವನ್ನಿಕೇರಿ

ಏಪ್ರಿಲ್ ೧. ೧೯೭೭ರಲ್ಲಿ ಗುಲಬರ್ಗಾ ಜಿಲ್ಲೆಯ ಕಮಲಾಪುರದಲ್ಲಿ ಜನಿಸಿ ಇವರು ತಮ್ಮ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣದ ನಂತರ ಚಿತ್ರಕಲೆಯಲ್ಲಿ ಡಿಪ್ಲೋಮಾ ಹಾಗೂ ಆರ್ಟ್ ಮಾಸ್ಟರ್ ಪದವಿಯನ್ನು ದಿ ಐಡಿಯಲ್ ಫೈನ್ ಆರ್ಟ್ ಇನ್‌ಸ್ಟಿಟ್ಯೂಟ್ ಗುಲಬರ್ಗಾದಿಂದ ಪಡೆದಿದ್ದಾರೆ. ನಂತರ ಎಂ.ಎಫ್.ಎ ಪೇಂಟಿಂಗ್ ಪದವಿಯನ್ನು ಎಂ.ಎಂ.ಕೆ.ಕಾಲೇಜ್ ಆಫ್ ವಿಜುವಲ್ ಆರ್ಟ್ ಗುಲಬರ್ಗಾದಿಂದ ಪಡೆದಿದ್ದಾರೆ. ರಾಜ್ಯ ಹಾಗೂ ರಾಷ್ಟ್ರಮಟ್ಟದ ಕಲಾ ಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳು ಆಯ್ಕೆಯಾಗಿ ಪ್ರದರ್ಶಿಸಲ್ಪಟ್ಟಿವೆ. ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅನೇಕ ಕಲಾಕೃತಿಗಳು ಆಯ್ಕೆಯಾಗಿ ಪ್ರದರ್ಶಿಸಲ್ಪಟ್ಟಿವೆ. ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅನೇಕ ಶಿಬಿರಗಳಲ್ಲಿಯೂ ಭಾಗವಹಿಸಿದ್ದಾರೆ. ಪ್ರಸ್ತುತ ಉಪನ್ಯಾಸಕರಾಗಿ ಪೂಜ್ಯ ಶ್ರೀ.ಚೆನ್ನಬಸವೇಶ್ವರ ಪಟ್ಟದೇವರು ಚಿತ್ರಕಲಾ ಮಹಾವಿದ್ಯಾಲಯ ಭಾಲ್ಕಿ, ಜಿ.ಬೀದರನಲ್ಲಿ ಸೇವೆಸಲ್ಲಿಸುತ್ತಿದ್ದಾರೆ. ಸೃಜನಶೀಲ ಕಲಾವಿದರಾಗಿ ಭಾರತೀಯ ಸಂಸ್ಕೃತಿ ಹಾಗೂ ಐತಿಹಾಸಿಕ

ವಿಷಯಗಳನ್ನು ಇಟ್ಟುಕೊಂಡು ಕಲಾಕೃತಿಗಳನ್ನು ರಚಿಸುತ್ತಿದ್ದಾರೆ. ೨೦೦೪ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯವು ಇವರ ಕಲಾಕೃತಿಗೆ ರಾಜ್ಯೋತ್ಸವ ಪ್ರಶಸ್ತಿಯನ್ನು ನೀಡಿದೆ.

ಇವರ ಕಲಾಕೃತಿಗಳು ಆಧುನಿಕ ಮತ್ತು ಪೌರಾಣಿಕ ವಸ್ತುಗಳನ್ನು ಒಟ್ಟಿಗೆ ಆಧರಿಸಿ ಕಲಾಕೃತಿಗಳನ್ನು ರಚಿಸುತ್ತಿದ್ದಾರೆ. ಈ ಕಲಾಕೃತಿಯಲ್ಲಿ ಆಧುನಿಕ ಯುವ ಪೀಳಿಗೆಯನ್ನು ಪ್ರತಿನಿಧಿಸುವ ವ್ಯಕ್ತಿಯೊಬ್ಬನ ಅರೆಬರೆ ಚಿತ್ರ ಅರ್ಧಕ್ಯಾನ್‌ವಾಸನ್ನು ಆವರಿಸಿದ್ದು. ಕುದುರೆ ಅಶ್ವಮೇಧ ರಾಮನ ಲೋಹದ ಶಿಲ್ಪಗಳ ರಚನೆ ಚಿತ್ರದ ವಸ್ತುವನ್ನು ಗಾಢ ಮತ್ತು ಮಾರ್ಮಿಕತೆ ಕಡೆಗೆ ಕೊಂಡೊಯುವಂತಾಗಿದೆ. ನೀಲಿಬಣ್ಣ ಪ್ರಧಾನ ಪಾತ್ರವಹಿಸಿದ್ದು, ಕಲಾವಿದನ ರೇಖೆಗಳ ಮೇಲಿನ ಹಿಡಿತ ವಿಭಿನ್ನ ವಸ್ತುಗಳನ್ನು ಒಂದೆಡೆ ಯಶಸ್ವಿಯಾಗಿ ತಂದಿರುವ ಗುಣ ಕಲಾವಿದ ಹಾಗೂ ಕಲಾಕೃತಿಯನ್ನು ಹೆಚ್ಚು ನೆನಪಿನಲ್ಲಿ ಉಳಿಯುವಂತೆ ಮಾಡಿದೆ.

### ೧೨. ಕಲಾವಿದ ಯೋಗಿಶ ಚ.ಮಠದ

ಬೀದರ ಜಿಲ್ಲೆಗೆ ಸೇರಿದ ಇನ್ನೊಬ್ಬ ಕಲಾವಿದ ಚನ್ನವೀರ ಸ್ವಾಮಿ ಮಠದ ರವರು ೧೯೮೧ರಲ್ಲಿ ಜನಿಸಿದರು. ಇವರ ಪ್ರಾಥಮಿಕ ಶಿಕ್ಷಣದ ನಂತರ ಚಿತ್ರಕಲಾ ಶಿಕ್ಷಣವು ಡಿಪ್ಲೋಮಾ ಮತ್ತು ಆರ್ಟ್‌ಮಾಸ್ಟರ್ ಬೀದರ್‌ನ ಯೋಗೀಶ ಚಿತ್ರಕಲಾ ಮಹಾವಿದ್ಯಾಲಯದಿಂದ ಪಡೆದು B.F.A ಹಾಗೂ M.F.A ಪದವಿಯನ್ನು M.M.K.Collej of visual Art ಗುಲಬರ್ಗಾದಿಂದ ಪಡೆದರು.

ಸದ್ಯದಲ್ಲಿ ಇವರು ಬೀದರನ ಯೋಗೀಶ ಚಿತ್ರಕಲಾ ಮಹಾವಿದ್ಯಾಲಯ ಬೀದರನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಕಲಾಪ್ರದರ್ಶನಗಳು, ನಾಗಪುರ, ಬೀದರ ಮೈಸೂರು ದಸರಾ ಬೆಂಗಳೂರು, ಬೀದರ ಉತ್ಸವ, ಬಿಜಾಪುರ ಹೀಗೆ ಹಲವು ಕಡೆಗೆ ಇವರ ಚಿತ್ರಗಳ ಪ್ರದರ್ಶನ ಮಾಡಲಾಗಿದೆ. ಇವರು ರಾಜ್ಯ ಹಾಗೂ ರಾಷ್ಟ್ರಮಟ್ಟದ ಕಲಾ ಶಿಬಿರಗಳಲ್ಲಿ ಭಾಗವಹಿಸಿದ್ದಾರೆ. ಇವರ ಕಲಾಕೃತಿಗಳ ಸಂಗ್ರಹಗಳು, ಬೀದರನ ಅನೇಕರ ಮನೆಗಳಲ್ಲಿ ಇವರ ಕಲಾಶಾಲೆ, ಹಾಗೂ ಬೇರೆ ಶಾಲೆ ಹಾಗೂ ಕಾಲೇಜುಗಳಲ್ಲಿ ಸಂಗ್ರಹಗಳಾಗಿವೆ. S.R.Y Creative India Trust, Bidarನ ಅಧ್ಯಕ್ಷರು ಸಹ ಆಗಿದ್ದಾರೆ. ಹೀಗೆ ಹತ್ತು ಹಲವು ಕಲಾ ಚಟುವಟಿಕೆಗಳಲ್ಲಿ ಭಾಗವಹಿಸಿ ಯುವ ಕಲಾವಿದರಿಗೆ ಪ್ರೇರಣೆ ನೀಡಿದ್ದಾರೆ.

### ೧೩. ಕಲಾವಿದ ಶಾಂತವೀರ ಕಸೂದಿ

೧೯೭೨ರಲ್ಲಿ ಬೀದರ ಜಿಲ್ಲೆಯ ಹುಮನಾಬಾದನಲ್ಲಿ ಜನನ ತಮ್ಮ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಹುಮನಾಬಾದನಲ್ಲಿಯೇ ಮುಗಿಸಿ ಮುಂದೇ ಚಿತ್ರಕಲೆಯಲ್ಲಿ ಡಿಪ್ಲೋಮಾ ಆರ್ಟ್‌ಮಾಸ್ಟರ್ ಪದವಿಯನ್ನು ದಿ ಐಡಿಯಲ್ ಫೈನ್ ಆರ್ಟ್ ಇನ್‌ಸ್ಟಿಟ್ಯೂಟ್ ಗುಲಬರ್ಗಾದಿಂದ ಪಡೆದಿದ್ದಾರೆ. ಹಾಗೂ ಬಿ.ಎಫ್.ಎ.ಪೇಂಟಿಂಗ್ ಪದವಿಯನ್ನು ಎಂ.ಎಂ.ಕೆ.ಕಾಲೇಜ್ ಆಫ್ ವಿಜುವಲ್ ಆರ್ಟ್ ಗುಲಬರ್ಗಾದಿಂದ ಪಡೆದುಕೊಂಡರು, ರಾಜ್ಯ ಹಾಗೂ ರಾಷ್ಟ್ರದ ಅನೇಕ ಕಲಾ ಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ. ಇವರು ವಿದ್ಯಾರ್ಥಿ ದೆಸೆಯಲ್ಲಿ ಕಲಾ ಮಹೋತ್ಸವ ಪ್ರಶಸ್ತಿ ೧೯೯೬ರಲ್ಲಿ ಪಡೆದಿದ್ದಾರೆ.

೧೯೯೭ರಲ್ಲಿ ಐ.ಎಫ್.ಎ.ಎಸ್.ಪ್ರಶಸ್ತಿಯು ಇವರ ಕಲಾಕೃತಿಗೆ ಲಭಿಸಿದೆ. ಹಾಗೂ ೨೦೦೦ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯು ಲಭಿಸಿದೆ. ಒಬ್ಬ ಸೃಜನ ಶೀಲ ಕಲಾವಿದರಾಗಿ ಜಲವರ್ಣ, ತೈಲವರ್ಣ, ಆಕ್ರೇಲಿಕ್ ವರ್ಣಗಳಲ್ಲಿ ಹೆಚ್ಚಾಗಿ ಕಲಾಕೃತಿಗಳನ್ನು ರಚನೆ ಮಾಡುತ್ತಾರೆ. ಪ್ರಸ್ತುತ ಇವರು ಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಕಲಾಕೃತಿಯಲ್ಲಿ ಫಾವಿಸಂ ಶೈಲಿಗೆ ಹತ್ತಿರವಾಗಿರುವ ಪ್ರಖರ ವರ್ಣಗಳ ಶ್ವೇಚ್ಛಾರದ ಬಳಕೆ ಕಂಡುಬಂದರೂ ಅಲ್ಲಲ್ಲಿ ರೇಖೆಗಳ ಬಳಕೆ ಸಣ್ಣಪುಟ್ಟ ನಕ್ಷೆಗಳ ಬಳಕೆ ಚಿತ್ರಕ್ಕೆ ಒಂದು ಮೆರುಗನ್ನು ನೀಡಿದೆ. ಅರೆ ಅಮೂರ್ತ ಚಿತ್ರವಾಗಿ (Semiobstract) ಚಿತ್ರವಾಗಿದ್ದರು. ಇಲ್ಲಿ ಕಲಾವಿದನ ಸ್ವತಂತ್ರ ಮನೋಭಾವ ಆಲೋಚನೆಗಳ ಹಲವು ಇಲ್ಲಿ ನೋಡುಗನನ್ನು ಹೃದಯನಲ್ಲಿ ಸುವಂತಾಗಿದೆ.

ತನ್ನ ಮನಸ್ಸಿನ ಎಲ್ಲಾ ಹತೋಟಿಗಳನ್ನು ಹೊಮ್ಮಿದ ಮೇಲೆ ಕ್ಯಾನಮಸ ಮೇಲೆ ತೆರೆದುಕೊಂಡ ಆ ಕಲಾವಿದನ ನಿರ್ಭಯತೆಯಿಂದ ಕೂಡಿದ ಕುಂಚದ ಹೊಡೆತ ತಂತ್ರಗಾರಿಕೆಗಳೆಲ್ಲ ಗುರುತಿಸಬಹುದು ಇಂತಹ ಅನೇಕ ಕಲಾಕೃತಿಗಳನ್ನು ರಚಿಸುವುದು ಬೀದರ್ ಜಿಲ್ಲೆಯ ಕಲಾವಿದ ರಾಷ್ಟ್ರ ಅಂತರಾಷ್ಟ್ರೀಯ ಮಟ್ಟತಲುಪುವಂತಹ ಕಲಾವಿದರನ್ನು ನಾಡಿಗೆ ನೀಡಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ.

೧೪. ರಾಹುಲ್‌ಡಿ ವಾಗ್ಮೊರೆ

ಮೆ. ೩೧.೧೯೮೪ರಲ್ಲಿ ಬೀದರ ಜಿಲ್ಲೆಯ ಭಾಲ್ಕಿಯಲ್ಲಿ ಜನಿಸಿದ ಇವರು ತಮ್ಮ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣದ ನಂತರ ಚಿತ್ರಕಲೆಯಲ್ಲಿ ಡಿಪ್ಲೋಮಾ ಕೋರ್ಸನ್ನು ಪೂಜ್ಯ ಶ್ರೀ ಬಸವೇಶ್ವರ ಕಲಾ ಮಹಾವಿದ್ಯಾಲಯ ಭಾಲ್ಕಿಯಿಂದ ಪಡೆದಿದ್ದಾರೆ. ಪ್ರಸ್ತುತ ಬಿ.ವಿ.ಎ ಅಂತಿಮ ವರ್ಷದ ವಿದ್ಯಾರ್ಥಿಯಾಗಿ ಪೇಂಟಿಂಗ್ ವಿಭಾಗದಲ್ಲಿ ಶಿಕ್ಷಣವನು ಎಂ.ಎಂ.ಕೆ.ಕಾಲೇಜ್ ಆಫ್ ವಿಜ್ಯುವಲ್ ಆರ್ಟ್ ಗುಲಬರ್ಗಾದಲ್ಲಿ ಮುಂದುವರೆಸಿದ್ದಾರೆ. ಇವರು ವಿದ್ಯಾರ್ಥಿ ದಿಶೆಯಿಂದಲೇ ಕಲಾ ಪ್ರದರ್ಶನಗಳಲ್ಲಿ ಭಾಗವಹಿಸುತ್ತಿದ್ದಾರೆ. ೨೦೦೬ರಲ್ಲಿ ಜಿಲ್ಲಾ ಮಟ್ಟದ ಪ್ರತಿಭೋತ್ಸವ ಪ್ರಶಸ್ತಿಯನ್ನು ಕನ್ನಡ ಮತ್ತು ಸಾಂಸ್ಕೃತಿಕ ಇಲಾಖೆ ಬೀದರನಿಂದ ಪಡೆದಿದ್ದಾರೆ. ೨೦೦೭ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಗುಲಬರ್ಗಾ ವಿಶ್ವವಿದ್ಯಾಲಯದಿಂದ ಪಡೆದಿದ್ದಾರೆ. ಅಲ್ಲದೆ ರಾಜ್ಯದ ಅನೇಕ ಕಲಾ ಸ್ಪರ್ಧೆಗಳಲ್ಲಿ ಇವರ ಕಲಾಕೃತಿಗಳು ಆಯ್ಕೆಯಾಗಿ ಪ್ರದರ್ಶಿಸಲ್ಪಟ್ಟಿವೆ. ಇವರ ಕಲಾಕೃತಿಗಳ ರಚನೆಯ ಮಾಧ್ಯಮದ ಆಕ್ರೆಲಿಕ್ ವರ್ಣವಾಗಿದೆ. ಕಲೆ, ಸಂಸ್ಕೃತಿ ಮತ್ತು ಸಾಹಿತ್ಯ ಆಗಾರವಾದದ್ದು, ಭಾರತ ಹಿಂದಿನಿಂದಲೂ ಜಗತ್ತಿಗೆ ತನ್ನದೇ ಆದ ಕೊಡುಗೆಯನ್ನು ನೀಡುತ್ತಲೇ ಬಂದಿರುವುದು ಹೆಮ್ಮೆಯ ಸಂಗತಿಯಾಗಿದೆ. ಭಾರತ ಜನನಿಯ ತನುಜಾತೆಯಾದ ಕರ್ನಾಟಕವು ಇದಕ್ಕೆ ಹೊರತೇನಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಕನ್ನಡಮ್ಮನ ಅಭಿಮಾನಿಯಾದ ಪ್ರತೀಕವೆಂಬಂತೆ ಕರ್ನಾಟಕದ ಫಲವತ್ತಾದ ಮಣ್ಣಿನಲ್ಲಿ ಅಸಂಖ್ಯಾತ ಕಲಾವಿದರು, ಸಾಹಿತಿಗಳು ಜನಿಸಿ ವಿಶಿಷ್ಟವಾದ ಕಲೆ, ಸಾಹಿತ್ಯವನ್ನು ಕೊಡುತ್ತಿರುವುದು ಆರೋಗ್ಯ ಪೂರ್ಣ ಬೆಳವಣಿಗೆ ಎನ್ನಬಹುದು.

ಕಲಾವಿದನನ್ನು ಸೃಷ್ಟಿಸಲಾಗದು ಆತ ಹುಟ್ಟಬೇಕಾಗುತ್ತದೆ ಎಂಬ ಉಕ್ತಿಯಂತೆ ಕಲೆ ಪ್ರತಿಭೆಯಿಂದ ಮಾತ್ರ ಅರಳಲು ಸಾಧ್ಯ ಕಲೆ, ಕಲೆಗಾಗಿಯೇ ಹೊರತು ಅದು ಹೊಟ್ಟೆಪಾಡಿಗಲ್ಲ. ಕಲೆ ವ್ಯಕ್ತಿಯ ಸಂಸ್ಕಾರ ವ್ಯಕ್ತಿತ್ವವನ್ನು ಅವಲಂಭಿಸಿರುತ್ತದೆ. ಉತ್ತಮ ಕಲಾವಿದ ಆರೋಗ್ಯ ಪೂರ್ಣ ಮನಸ್ಸನ್ನು ಹೊಂದಿಸಬೇಕಾಗುತ್ತದೆ. ಕಲಾಕಾರ ಸಮಾಜದ ಕಾರಣವೆಂಬುದು ಸರ್ವವಿದಿತ.

ಕಲಾವಿದ ಸ್ವಾರ್ಥತ್ಯಾಗ ಮಾಡಿ. ಏಕಾಗ್ರತೆಯಿಂದ ತನ್ನನ್ನು ತಾನು ಮರೆಯಬೇಕಾಗುತ್ತದೆ. ಸಮಾಜಕ್ಕೆ ಬೆಳಕನ್ನು ಕೊಡುವ ದೀಪವಾಗಿರಬೇಕು. ಬದುಕು ತನಗಾಗಿಯೇ ಅಲ್ಲ ಅದು ಇತರರಿಗಾಗಿ ಎಂಬಂತೆ ಕಲಾವಿದ ಬದುಕಬೇಕು ಅಂದಾಗ ಮಾತ್ರ ಅವನಿಂದ ಉತ್ತಮ ಕಲೆ ಹೊರಹೊಮ್ಮಲು ಸಾಧ್ಯ. ಕಲೆಯಲ್ಲಿ ನೈಜತೆ, ನಯನಾಜೂಕತೆ ಮತ್ತು ನಿಖರತೆ ಬಹು ಅವಶ್ಯ, ಉನ್ನತ ವಿಚಾರ, ಉತ್ತಮ ಸಂಸ್ಕಾರವೂ ಮುಖ್ಯ ಈ ರೀತಿಯಾಗಿ ಮೇಲಿನ ಎಲ್ಲ ಗುಣಗಳಲ್ಲದಿದ್ದರೂ ಬಹು ಮಟ್ಟಿನ ಅಂಶಗಳನ್ನು ಒಳಗೊಂಡ ಲಕ್ಷಣಗಳಿಂದ ಕೂಡಿದ ಕಲಾವಿದರೂ ಕೆಂಪು ಮತ್ತು ಕಪ್ಪು ಮಣ್ಣಿನ ಬೀದರ ನೆಲದಿಂದ ಬಂದುದರ ವಿವರಣೆಯಿದೆ.

* * *

ಬಸವರಾಜ ಮುಗಳಿ ಅವರು ಬೀದರಿನ ಸಿದ್ಧಾರೂಢ ಮಠದಲ್ಲಿ
ರಚಿಸಿದ ಕಲಾಕೃತಿಗಳು







ದಿ. ಚನ್ನವೀರಸ್ವಾಮಿ ಮಠದ ಅವರು ಮತ್ತು ಅವರ ಕಲಾಕೃತಿಗಳು







ಎಂ.ಬಿ. ಲೋಹಾರ ಅವರು ಮತ್ತು ಅವರ ಕಲಾಕೃತಿಗಳು









ಮಲ್ಲಿಕಾರ್ಜುನ ಶೆಟ್ಟರವರು ಮತ್ತು ಅವರ ಕಲಾಕೃತಿ





ಅಶೋಕ ಶಟಗಾರ ಅವರು ಮತ್ತು ಅವರ ಕಲಾಕೃತಿಗಳು





ಡಾ. ಶತೀಶ್ ಕುಮಾರ್ ಪಿ. ವಲ್ಲೇಪುರೆ ಅವರು ಮತ್ತು ಅವರ ಕಲಾಕೃತಿಗಳು







ಕಲಾವಿದ ಯೋಗಿಶ್ ಮಠದ್ ಅವರು ಮತ್ತು ಅವರ ಕಲಾಕೃತಿ





# ಚ.ಬ. ಸೋಮಶೆಟ್ಟಿಯವರು ರಚಿಸಿದ ಕಲಾಕೃತಿಗಳು





ಅಧ್ಯಾಯ - ಎಂಟು

# ಸಮಾರೋಪ

ಚಿತ್ರಕಲೆ ಮಾವನ ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗವಾಗಿದ್ದು, ಆತ ವಾಸಿಸುವ ಪ್ರದೇಶದ ಜೀವನಾಡಿಯಂತೆ ಕೆಲಸ ಮಾಡುತ್ತದೆ. ಯಾವುದೇ ಬಂದು ಪ್ರದೇಶದ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಅದರ ಅಂಗಳಗಳಾದ ಲಲಿತ ಕಲೆಗಳು ಪ್ರಮುಖ ಪಾತ್ರವಹಿಸುತ್ತಲಿರುವುದು. ಈ ಕಾರಣಕ್ಕಾಗಿಯೇ ಎಂದು ಹೇಳಬಹುದು. ಲಲಿತಕಲೆಗಳಲ್ಲಿ ಒಂದಾದ ಚಿತ್ರಕಲೆಯು ಸಹಿತ ಆಯಾ ಭಾಗದ ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಇತರ ಆಕರಗಳಿಂದ ಭಿನ್ನವಾದ ವಿಶಿಷ್ಟಪಾತ್ರ ವಹಿಸುತ್ತ ಬಂದಿದೆ. ಈ ಹಿನ್ನೆಲೆಯಲ್ಲಿ ಬೀದರ ಜಿಲ್ಲೆಯ ವ್ಯಾಪ್ತಿಯ ಪ್ರದೇಶದಲ್ಲಿ ಚಿತ್ರಕಲೆ ಯಾವ ರೀತಿಯ ಸಾಂಸ್ಕೃತಿಕ ಪರಿಣಾಮಗಳನ್ನು ಉಂಟು ಮಾಡಿದೆ ಎನ್ನುವ ಸಂಗತಿಗಳನ್ನು ತಿಳಿದುಕೊಳ್ಳುವಲ್ಲಿ ಈ ಅಧ್ಯಯನ ತುಂಬಾ ಮಹತ್ವದ್ದಾಗಿದೆ. ಕಲೆ ಮತ್ತು ಸಂಸ್ಕೃತಿಯನ್ನು ಒಳಗೊಂಡ ಪ್ರಸ್ತುತ ಅಧ್ಯಯನವು ಎಂಟು ಅಧ್ಯಾಯಗಳಲ್ಲಿ ಹರಡಿಕೊಂಡಿದೆ. ಈ ಎಲ್ಲ ಅಧ್ಯಾಯಗಳ ಫಲಿತಗಳನ್ನು ಸ್ಥೂಲವಾಗಿ ಈ ಕೆಳಗಿನಂತೆ ಸಮೀಕ್ಷಿಸಬಹುದು.

೧. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ, ಮತ್ತು ವೈಧಾನಿಕತೆಗಳನ್ನು ಕುರಿತು ಹೇಳಲಾಗಿದೆ. ಈ ಅಧ್ಯಯನದ ಮಹತ್ವ ಮೌಲ್ಯ ಮತ್ತು ಪ್ರಸ್ತುತತೆಗಳನ್ನು ಇಲ್ಲಿ ಚರ್ಚಿಸಿ ಪ್ರಸ್ತುತ ಅಧ್ಯಯನಕ್ಕೆ ಒಂದು ಸ್ಪಷ್ಟವಾದ ಭೂಮಿಕೆಯನ್ನು ನಿರ್ಮಿಸಿಕೊಳ್ಳಲಾಗಿದೆ.

೨. ಎರಡನೆಯ ಅಧ್ಯಾಯನದಲ್ಲಿ ಬೀದರ ಜಿಲ್ಲೆಯ ಸಾಂಸ್ಕೃತಿಕ ಪರಿಸರ ಮತ್ತು ಲಲಿತಕಲೆಗಳು ಎಂಬುದಾಗಿದೆ. ಇದರಲ್ಲಿ ಜಿಲ್ಲೆಯ ಸಂಕ್ಷಿಪ್ತ ಇತಿಹಾಸ, ಸಾಹಿತ್ಯ, ಸಂಗೀತ ಕಲೆಗಳನ್ನು ಕುರಿತಂತೆ ಐತಿಹಾಸಿಕ ಮಹತ್ವದೊಂದಿಗೆ ಚರ್ಚಿಸಲಾಗಿದೆ.

೩. ಮೂರನೆಯ ಅಧ್ಯಾಯದಲ್ಲಿ ರಂಗೋಲಿ ಚಿತ್ರಕಲೆ, ಮೆಹಂದಿ ಚಿತ್ರಕಲೆ ಮೋಹರಂ ಕುಣಿತದಲ್ಲಿಯ ಹುಲಿವೇಷದ ವರ್ಣಗಾರಿಕೆ ಶೀಗಿ ಭಿತ್ತಿಚಿತ್ರ ಹಚ್ಚೆ, ಕಾವಿಕಲೆ, ಕಸೂತಿ ಸಗಣಿ ಗೊಂಬೆಗಳ ಸ್ಥೂಲವಾದ ಐತಿಹಾಸಿಕ ಹಿನ್ನಲೆ ಅದರ ಹುಟ್ಟು ಬೆಳವಣಿಗೆ. ಈ ಎಲ್ಲಾ ಕಲೆಗಳು ಜಾನಪದ ಹಿನ್ನೆಯಲ್ಲಿ ಬೆಳೆದುದನ್ನು ಈ ಸದ್ಯದ ಪರಿಸ್ಥಿತಿಯನ್ನು ಕುರಿತು ಸಹ ಚರ್ಚಿಸಲಾಗಿದೆ.

೪. ನಾಲ್ಕನೆಯ ಅಧ್ಯಾಯದಲ್ಲಿ ಬೀದರ ಜಿಲ್ಲೆಯ ಶಿಷ್ಟಪದ ಚಿತ್ರಕಲೆಯಲ್ಲಿ ಪ್ರಮುಖವಾಗಿ ಈ ಪ್ರದೇಶದ ಭಿತ್ತಿಚಿತ್ರಕಲೆ ರಂಗೀನ ಮಹಲ ಅರಮನೆಯಲ್ಲಿನ ಹಾಗೂ ಅಷ್ಟುರಿನ ಭಿತ್ತಿಚಿತ್ರಗಳ ಬಗ್ಗೆ, ವೃತ್ತಾಕಾರದ ಮೇಲ್ಛಾವಣಿಯಲ್ಲಿನ ಜ್ಯಾಮಿತಿಕ ನಕ್ಷೆಯ ವಿನ್ಯಾಸಗಳು ರಚನೆಯಾಗಿದ್ದರೆ. ಕೆಳಭಾಗದಲ್ಲಿಯು ಸಹ ಹೂ, ಬಳಿಯ ಜ್ಯಾಮಿತಿಕ ನಕ್ಷೆಯ ಚಿತ್ರಗಳು ರಚನೆಯಾಗವೆ. ಭಿತ್ತಿಚಿತ್ರಗಳ ವಸ್ತು ವಿಷಯದ ವಿವೇಚನೆಯಿದೆ. ಇದರಲ್ಲಿ ಪ್ರಮುಖವಾಗಿ ಚಿತ್ರಗಳ ವಿಶಿಷ್ಟ ಶೈಲಿಯ ವಿಷಯ ಸಂವನಗೊಳ್ಳಲು ಕಲಾವಿದ ಬಳಸಿರುವ ತಂತ್ರ ಕಲಾವಿದನ ಸೃಜನಾತ್ಮಕತೆಯ ಹಿನ್ನೆಲೆಯಲ್ಲಿ ಗುರುತಿಸುವಕಾರ್ಯ ಇಲ್ಲಿ ಮಾಡಲಾಗಿದ್ದು ಅಲ್ಲದೆ ಚಿತ್ರಗಳ ಕ್ರಮಬದ್ಧ ವಿಶ್ಲೇಷಣೆಯ ದೃಷ್ಟಿಯಿಂದ ವಿಷಯ ವಸ್ತುಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನ ಮಾಡಿ ಇಲ್ಲಿ ಕಲಾತ್ಮಕ ಅಂಶಗಳನ್ನು ವಿವೇಚಿಸಲಾಗಿದೆ.

೫. ಐದನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರಕಲೆಯಲ್ಲಿ ಜ್ಯಾಮಿತಿಕ ಅಲಂಕಾರ ನಕ್ಷಾಚಿತ್ರಗಳಿವೆ. ಹೂ ಬಳ್ಳಿಯ ನಕ್ಷೆಗಳನ್ನು ಅಲಂಕಾರಿಕ ರೀತಿಯಲ್ಲಿ ರಚಿಸಲಾಗಿದ್ದು ನೀಲಿ, ಕೆಂಪು,ಕಪ್ಪು, ವರ್ಣಗಳನ್ನು ಇಲ್ಲಿ ಮುಖ್ಯವಾಗಿ ಬಳಸಲಾಗಿದೆ. ಅಲ್ಲದೆ ಸೊಡುಬಿಲ್ಲೆಗಳನ್ನುವಿವಿಧ ವರ್ಣದಲ್ಲಿನ ತುಂಡುಗಳು ಅಂಟಿಸಿ ಹೂ ಬಳ್ಳಿಯ ನಕ್ಷೆಗಳನ್ನು ರಚಿಸುತ್ತಿದ್ದರು. ಭಿತ್ತಿಚಿತ್ರಗಳಿಗೆ ಬಂಗಾರ, ಬೆಳ್ಳಿವರ್ಣ ಬಳಸಿ ಚಿತ್ರಿಸಿರುವುದು ವೈಶಿಷ್ಟ್ಯವಾಗಿದೆ.

ಬಹಮನಿ ಆದಿಲ್‌ಶಾಹಿ ಹಾಗೂ ಬರೀದಷಾಹಿ ಅರಸು ಮನೆತನ ಕಾಲದಲ್ಲಿಯ ಲೋಹಮಾಧ್ಯಮ ಚಿತ್ರಕಲೆಯ ಪ್ರಕಾರದಲ್ಲಿ ಇರಾನ್, ಪರ್ಶಿಯಾದ ಲೋಹ ಶಿಲ್ಪಕಾರರಿಂದ ಪ್ರಭುವಿತರಾಗಿ ಅಲಂಕಾರಿಕ ನಕ್ಷೆಗಳು ಸುಂದರ ಅಲಂಕಾರಿಕ ಬರಹಗಳು ಚಿತ್ರಿತವಾದವು. ಇರಾನ್ ಮಾದರಿಯ ಬಿದರಿ ವಸ್ತುಗಳ ಕುಸರಿಕಲೆ ಬೆಳೆದು ಜಗತ್ ಪ್ರಸಿದ್ಧತೆ ಪಡೆಯಿತು. ಬಿದರಿ ಕಲೆಯು ಮೊದಲು ಬಿಜಾಪುರದಲ್ಲಿ ಅಬ್ದುಲ್ ಬಿನ್ ಕೈಸರನಿಂದ ಬೆಳೆಯಿತು. ನಂತರ ಅದು ಬಿದರಿನಲ್ಲಿ ಅಬಿವೃದ್ಧಿ ಹೊಂದಿತ್ತು ಎಂಬುದನ್ನು ಉದಾಹರಣೆಯೊಂದಿಗೆ ಅಧ್ಯಯನ ಮಾಡಲಾಗಿದೆ. ಬಿದರಿಕಲೆಯ ಪರ್ಶಿಯನ್, ಡೆಕ್ಕನ್ ಮತ್ತು ಮೊಘಲ್ ಕಲೆಯ ಸಮ್ಮಿಶ್ರಣದಿಂದ ಬಿದರಿಕಲೆಯು ಜನ್ಮ ತಾಲಿತು. ೧೬ನೇಯ ಶತಮಾನದಲ್ಲಿಯ ಬಿದರಿ ಕಲೆಯ ಮೇಲೆ ಪರ್ಶಿಯನ್ ಕಲೆಯ ಸ್ಪಷ್ಟಪರಿಣಾಮ ಕಾಣುಬಹುದು. ಈ ಚಿತ್ರಕಲೆಯನ್ನು ಲೋಹ ಮಾಧ್ಯಮದಲ್ಲಿ ಶಾಶ್ವತವಾಗಿ ಉಳಿಯುವ ಹಾಗೆ ಮಾಡಿದ್ದು ಅಂದಿನ ಚಿತ್ರಕಾರರ ಚಿತ್ರಕಲಾ ಕೌಶಲ್ಯವನ್ನು ಲೋಹಗಳಲ್ಲಿ ಚಿತ್ರಿಸಿದ್ದು ಅದು ಅದ್ಭುತ ಕಲಾ ಸಾಧನೆಯಾಗಿದೆ.

ಬೀದರ ತೋಪುಗಳ ಇತಿಹಾಸದಲ್ಲಿ ಕಲಾತ್ಮಕತೆಯಿಂದ ರಚನೆ, ವಿನ್ಯಾಸ, ಚಿತ್ರಕಲೆ ಮತ್ತು ಬಸವಕಲ್ಯಾಣದ ತೋಪುಗಳು. ಮಹತ್ವದ ಸ್ಥಾನ ಪಡೆದಿರುವುದನ್ನು ಇಲ್ಲಿ ಕಂಡು ಕೊಳ್ಳಲಾಗಿದೆ. ಮುಸ್ಲಿಂ ಅರಸರು ಹೊರಡಿಸಿದ ನಾಣ್ಯಗಳ ಚಿತ್ರಗಳನ್ನು ವೀಕ್ಷಿಸಿದಾಗ ನಾಣ್ಯಗಳ ವೈವಿಧ್ಯತೆ ಅವುಗಳ ಮೇಲಿನ ಅಲಂಕಾರ ಅಕ್ಷರಗಳ ವಿನ್ಯಾಸ ಮತ್ತು ಸೌಂದರ್ಯಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನ ಮಾಡಲಾಗಿದೆ. ಲೋಹ ಮಾಧ್ಯಮದಲ್ಲಿ ಇಂಡೋಸಾರ್ಸೆನಿಕ್ ಅಥವಾ ದಖನಿ ಶೈಲಿಯ ಚಿತ್ರಕಲೆಯನ್ನು ಪಾತ್ರೆಗಳ ಮೇಲೆ ಬೆಳೆಯಲು ಪ್ರೋತ್ಸಾಹಿಸಿ ಅತ್ಯುತಮವಾದ ಲೋಹಮಾಧ್ಯಮಗಳ ಕಲೆಯನ್ನು ಬೆಳೆಯಲು ಪ್ರೋತ್ಸಾಹಿಸಿ ಜಗತ್ತಿಗೆ ಲೋಹಗಳ ಕಲೆಯನ್ನು ನೀಡಿ ಉತ್ತಮ ಸೌಂದರ್ಯ ಪ್ರಜ್ಞೆಯನ್ನು ವ್ಯಕ್ತಪಡಿಸಿದ್ದಾರೆ. ಈ ಎಲ್ಲ ಅಂಶಗಳು ಈ ಅಧ್ಯಯನದ ಮೂಲಕ ಬೆಳಕು ಕಂಡಿವೆ.

ಮೋಸಾಯಿಕ್ ಬಿಲ್ಲೆಗಳನ್ನು ಕಟ್ಟಡದ ಸೌಂದರ್ಯಕ್ಕಾಗಿ ದಕ್ಷಿಣ ಭಾರತದಲ್ಲಿಯೇ ಮೊಟ್ಟಮೊದಲು ಬೀದರಿನ ಮದರಸಾ ಕಟ್ಟಡದಲ್ಲಿ ಮಹ್ಮದ ಗವಾನನು ಪ್ರಾರಂಭಿಸಿದ್ದನ್ನು ಕಂಡುಹಿಡಿಯಲಾಗಿದೆ. ಇಲ್ಲಿ ಏಷ್ಯಾ ಮತ್ತು ಕೋಪ ತೈಮಾರಿನ ಅರಸರ ಕಾಲದ ಪ್ರಭಾವವಿದ್ದು, ಬೀದರದ ಅರಸರು ತುರ್ಕಿ ಶೈಲಿಯ ಮೋಸಾಯಿಕ ಬಿಲ್ಲೆಗಳ ಅಲಂಕಾರ ಶೈಲಿಯನ್ನು ಅನುಸರಿಸುವುದನ್ನು ತೌಲನಿಕವಾಗಿ ನೋಡಲಾಗಿದೆ.

ಸುಂದರ ಅಲಂಕಾರಿಕ ಬರಹ ಇಸ್ಲಾಮಿಕ್ ಚಿತ್ರ ಶೈಲಿಯ ಒಂದು ಸುಂದರ ಅಂಶವಾಗಿದೆ. ಈ ಬರಹದ ಶೈಲಿಗಳಾದ ತುಲುಪ್ತ, ನಸ್ತಲಿಖ್, ಶಿಕಸ್ತಾ, ಸುಲೊಸ್, ಖತ್, ಜುಲ್ಪಿ, ಹುಲಿಗೆರೆಗಳು, ಕುಡಿಕ್, ನಸ್ಕ, ತುಗ್ರಹ ಮುಂತಾದ ವಿಭಿನ್ನ ಪ್ರಕಾರದ ಶೈಲಿಗಳು ಈ ಅರಸರ ಕಾಲದಲ್ಲಿ ಬೆಳೆದು ಬಂದುದನ್ನು ಇಲ್ಲಿ ನಿರೂಪಿಸಲಾಗಿದೆ.

ಖಲಿ ಉಲ್ಲಾಹ, ಬುಲ್ತಿಕನ್ ಕಸಹನದ, ಮಹ್ಮದ ಬಶೀರ್ ...ಹರಿಅಬ್ದುಲ್ ಲತೀಫ್ ಮುಸ್ತಫಾ ಅಬ್ದುಲ್ ರಸೀದ್, ಅಬ್ದುಲ್ ಹರೀಮ್, ಯಶೋಪ್, ಇಬ್ರಾಹಿಮ್ ಶಾಹಿ ಮುಂತಾದವರು ಶ್ರೇಷ್ಟ ಸುಂದರ ಚಿತ್ರಲಿಪಿಕಾರರು ತಮ್ಮದೇ ಆದ ಶೈಲಿಯಲ್ಲಿ ಬರಹವನ್ನು ಪ್ರಸಿದ್ಧಿಗೆ ತಂದಿರುವುದು ಗಮನಾರ್ಹ ಅಂಶವಾಗಿದೆ.

ಅಸಾರಮಹಲ್ ಕಟ್ಟಡದ ಕಟ್ಟಿಗೆಯ ಕೆತ್ತನೆ ಕೆಲಸಗಳು ಪರ್ಶಿಯಾದ ಅರಸು ಶಹಾ ಅಬ್ಬಾಸನ್ನು ಇಸ್ಪಾಹಾನದಲ್ಲಿ ಕಟ್ಟಿಸಿದ ಅಲಿಕಘು ಮತ್ತು ಬಹಲ್ ಸೊತ ಕಟ್ಟಡಗಳ ಮಾದರಿಯಲ್ಲಿರುವುದನ್ನು ಗುರುತಿಸಲಾಗಿದೆ. ಇಲ್ಲಿಪರ್ಷಿಯನ್ ಮೊಘಲ ಹಾಗೂ ಸ್ಥಳೀಯ ಹಿಂದೂ ಶೈಲಿಯ ಅಲಂಕಾರಿಕ ಚಿತ್ರಗಳೂ ವಿಶೇಷವಾಗಿ ಕಾಣುತ್ತೇವೆ.

ವಸ್ತು ಸಂಗ್ರಹಾಲಯದಲ್ಲಿನ ವರ್ಣ ಚಿತ್ರಗಳು ಬಸವಕಲ್ಯಾಣದ ವಸ್ತು ಸಂಗ್ರಹಾಲಯದಲ್ಲಿನ ಕಲಾವಿದ ರುಮಾಲೆ ಚನ್ನಬಸವಯ್ಯನವರ ವರ್ಣಚಿತ್ರಗಳು ಹಾಗೂ ಸಿದ್ಧಾರೂಡ ಮಠದಲ್ಲಿನ ವರ್ಣಚಿತ್ರಗಳು ಅನುಭವ ಮಂಟಪದಲ್ಲಿನ, ಬಸವೇಶ್ವರ ದೇವಾಲಯದಲ್ಲಿನ ವರ್ಣಚಿತ್ರಗಳು, ಬೀದರನ ಸಿಖ್ಖರ ದೇವಸ್ಥಾನದ ಆವರಣದಲ್ಲಿನ ವಸ್ತುಸಂಗ್ರಹಾಲಯದಲ್ಲಿನ ವರ್ಣಚಿತ್ರಗಳ ಬಗ್ಗೆ ಹೇಳಲಾಗಿದೆ.

೬. ಆರನೆಯ ಅಧ್ಯಾಯನದಲ್ಲಿ ಬೀದರ್ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಸಂಸ್ಥೆಗಳ ಬಗ್ಗೆ ವಿವೇಚಿಸುತ್ತದೆ. ಜಿಲ್ಲೆಯಲ್ಲಿ ಬೀದರ ಒಳಗೊಂಡಂತೆ ಬಸವ ಕಲ್ಯಾಣ, ಭಾಲ್ಕಿ, ಹುಮನಾಬಾದ ಔರಾದದಲ್ಲಿನ ಕಲಾ ಶಾಲೆಗಳಿದ್ದು ಅವುಗಳ ಕಾರ್ಯ ಚಟುವಟಿಕೆಯನ್ನು ಬಿಂಬಿಸುವ ಮೂಲಕ ಜಿಲ್ಲೆಯ ಕಲಾ ಕ್ಷೇತ್ರಕ್ಕೆ ಈ ಕಲಾ ಶಾಲೆಗಳು ನೀಡಿದ ಕೊಡುಗೆಯನ್ನು ಕಂಡುಕೊಳ್ಳಲಾಗಿದೆ. ಕಲಾಶಾಲೆಯ ಪ್ರಾರಂಭದ ಹಿಂದಿರುವ ಉದ್ದೇಶಗಳು ಅವು ತಮ್ಮ ಕಲಾ ಶಿಕ್ಷಣದ ಜೊತೆಗೆ ಪ್ರಾರಂಭದ ಹಿಂದಿರುವ ಉದ್ದೇಶಗಳು ಅವು ತಮ್ಮ ಕಲಾ ಶಿಕ್ಷಣದ ಜೊತೆಗೆ ಹಮ್ಮಿಕೊಂಡಿರುವ ವಿವಿಧ ಸಾಂಸ್ಕೃತಿಕ ಚಟುವಟಿಕೆಗಳು ಅಲ್ಲಿನ ಶಿಕ್ಷಕ ವರ್ಗ ವಿದ್ಯಾರ್ಥಿ ವೃಂದ ಅವರ ಸಾಧನೆ ಸಿದ್ಧಿಗಳು, ಶೈಕ್ಷಣಿಕ, ಉನ್ನತಿಗಳು, ಸಮಾಜ ಮತ್ತು ಕಲಾ ಶಿಕ್ಷಮದಲ್ಲಿ ಕಲಾಶಾಲೆಗಳ ಪಾತ್ರಮುಂತಾದ ಅಂಶಗಳ ಕುರಿತು ವಿವೇಚಿಸಲಾಗಿದೆ. ಜಿಲ್ಲೆಯಲ್ಲಿಯೇ ಹಳೆಯದಾದ ಕಲಾ ಶಾಲೆಯು ಬೀದರನ ಯೋಗೀಶ ಚಿತ್ರಕಲಾ ಮಹಾವಿದ್ಯಾಲಯ ಸಿ.ಎಸ್.ಮಠದ ಸಂಸ್ಥಾಪಕರು, ೧೯೯೪ಳರ ಅನುದಾನಿತ ಕಲಾ ಶಾಲೆಯು ಇದಾಗಿದ್ದು, ಮೊದಲಿಗೆ ಡಿ.ಎಂ.ಸಿ.ಎ.ಎಮ್.ಜಿ.ಡಿ ಶಿಕ್ಷಮ ಕ್ರಮಗಳು ನಡೆಯುತ್ತಿದ್ದವು. ನಂತರದಲ್ಲಿ ಕಲಾ ತಳಹದಿ ಎರಡು ವರ್ಷ ಹಾಗೂ ಐದುವರ್ಷದ ವಿಶೇಷ ಪರಿಣಿತಿ ತರಗತಿಗಳು ನಡೆಯ ತೊಡಗಿದವು. ಆದರೆ ಇತ್ತೀಚೆಗೆ ರಾಜ್ಯ ವ್ಯಾಪ್ತಿ ಒಂದೇ ಬಗೆಯ ಕಲಾ ಶಿಕ್ಷಣ ಜಾರಿಗೆ ಬಂದಿರುವದರಿಂದ ಎರಡು ವರ್ಷದ ಕಲಾ ಶಿಕ್ಷಣ ಜಾರಿಗೆ ಬಂದಿರುವುದರಿಂದ ಎರಡು ವರ್ಷದ ಕಲಾ ತಳಹದಿ ಮತ್ತು ಮೂರು ವರ್ಷದ ಬಿ.ವ್ಹಿ.ಎ.ಪದವಿ ತರಗತಿಗಳು ಇಲ್ಲಿ ಆರಂಭಗೊಂಡಿವೆ. ಯೋಗೀಶ ಚಿತ್ರಕಲಾ ಮಹಾವಿದ್ಯಾಲಯ ಎಂಬ ಹೆಸರಿನಿಂದ ನಡೆಯುತ್ತಿರುವ ಈ ಕಲಾ ಶಾಲೆಯಲ್ಲಿ ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿದ ಶಿಕ್ಷಕರಿದ್ದಾರೆ. ಇಲ್ಲಿನ ವಿದ್ಯಾರ್ಥಿಗಳು ರಾಜ್ಯಮಟ್ಟದಲ್ಲಿ ರ್‍ಯಾಂಕುಗಳನ್ನುಗಳಿಸಿಕೊಂಡಿದ್ದಾರೆ. ಈ ಕಲಾಶಾಲೆ ತನ್ನ ಶೈಕ್ಷಣಿಕ ಕೆಲಸದ ನಡುವೆಯೇ ಅನೇಕ ಸಾಂಸ್ಕೃತಿಕ ಕಾರ್ಯಕ್ರಮ ಹಮ್ಮಿಕೊಳ್ಳುತ್ತ ಬಂದಿವೆ. ಇಂತಹ ಅನೇಕ ಅಂಶಗಳು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಜಿಲ್ಲೆಯಲ್ಲಿ ಖ್ಯಾತವಾದ ಈ ಕಲಾ ಶಾಲೆಯ ಕೊಡುಗೆಗಳನ್ನು ಸ್ಥೂಲವಾಗಿ ಬಿಂಬಿಸಲಾಗಿದೆ. ಇದರಂತೆಯೇ, ಭಾಲ್ಕಿ, ಬಸವ ಕಲ್ಯಾಣ, ಹುಮನಾಬಾದ, ಔರಾದಗಳಲ್ಲಿರುವ ಕಲಾ ಶಾಲೆಗಳ ಬಗ್ಗೆ ವಿವರ ಕೊಡಲಾಗಿದೆ. ಆಯಾ ಕಲಾ ಶಾಲೆಗಳ ಹುಟ್ಟು ಬೆಳವಣಿಗೆ ಸದ್ಯದ ಸ್ಥಿತಿಗತಿಗಳು, ವಿದ್ಯಾರ್ಥಿ ಮತ್ತು ಶಿಕ್ಷಕ ವೃಂದದ ಕಲಾ ಸಾಧನಗಳು ಅಲ್ಲಿ ನಡೆಯುವ ಪ್ರಾತ್ಯಕ್ಷಿಕೆ, ಕಲಾ ಪ್ರದರ್ಶನ, ಕಾರ್ಯಗಾರ ಮತ್ತು ವಿಚಾರ ಸಂಕಿರಣಗಳಂತಹ ಸಂಗತಿಗಳನ್ನು ಇಲ್ಲಿ ಬಿಂಬಿಸಲಾಗಿದೆ. ಈ ಮೂಲಕ ಈ ಕಲಾ ಶಾಲೆಗಳು ಜಿಲ್ಲೆಯಕಲಾ ಕ್ಷೇತ್ರಕ್ಕೆ ಯಾವ ಬಗೆಯ ಕೊಡುಗೆ ನೀಡಿವೆ ಎಂಬುದನ್ನು ಕಂಡುಕೊಳ್ಳಲಾಗಿದೆ.

೭. ಏಳನೆ ಅಧ್ಯಾಯನದಲ್ಲಿ ಬೀದರ ಜಿಲ್ಲೆಯ ಕಲಾವಿದರ ಕುರಿತು ವಿವೇಚಿಸುತ್ತದೆ. ಜಿಲ್ಲೆಯಾದ್ಯಂತ ಅನೇಕ ಪ್ರಸಿದ್ಧ ಚಿತ್ರಕಲಾವಿದರಿದ್ದು, ಅಧ್ಯಯನದ ಅನುಕೂಲತೆಯಿಂದ ಇಲ್ಲಿ ಪ್ರಾತಿನಿಧಿಕವಾಗಿ ಹಲವು ಜನ ಕಲಾವಿದರನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಇದರಲ್ಲಿ ಕೆಲವರು ಹಿರಿಯ ಕಲಾವಿದರು ಮತ್ತು ಕೆಲವರು ಸಮಕಾಲೀನ ಕಿರಿಯ ಕಲಾವಿದರನ್ನು ಅಧ್ಯಯನಕ್ಕೆ ಪರಿಗಣಿಸಲಾಗಿದೆ. ಕೆಲವು ಜನ ಕಲಾವಿದರ

ಸಂಕ್ಷಿಪ್ತ ಕಲಾಬದುಕು, ವೃತ್ತಿ ಪ್ರವೃತ್ತಿಗಳು, ಕಲಾಕೃತಿ ರಚನೆ, ವಸ್ತು, ವಿಷಯ, ಚಿತ್ರ ಶೈಲಿ ಸಂಯೋಜನಾ ವಿಧಾನ, ಮೈವಳಿಕೆ, ಪ್ರಭಾವ, ಪ್ರೇರಣೆ, ಮುಂತಾದ ಸಂಗತಿಗಳ ಬಗ್ಗೆ ವಿವೇಚಿಸಲಾಗಿದೆ. ಜೊತೆಗೆ ಆಯಾ ಕಲಾವಿದರ ಪ್ರಶಸ್ತಿ ಗೌರವಗಳು, ಮಾನ ಸನ್ಮಾನಗಳು, ಭಾಗವಹಿಸಿದ ಕಲಾ ಪ್ರದರ್ಶನ, ಕಾರ್ಯಗಾರ, ವಿಚಾರ ಸಂಕೀರ್ಣ ಮಂತಾದ ಸಂಗತಿಗಳ ಬಗ್ಗೆಯೂ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಈ ಮೂಲಕ ಜಿಲ್ಲೆಯ ಕಲಾಕ್ಷೇತ್ರಕ್ಕೆ ಈ ಕಲಾವಿದರು ನೀಡಿದ ಕೊಡುಗೆಗಳನ್ನು ಸ್ಥೂಲವಾಗಿ ನೀಡಲು ಪ್ರಯತ್ನಿಸಲಾಗಿದೆ.

೮. ಎಂಟನೆಯ ಅಧ್ಯಾಯ ಸಮಾರೋಪವಾಗಿದ್ದು. ಮೇಲಿನ ಎಂಟು ಅಧ್ಯಾಯಗಳ ಫಲಿತಗಳನ್ನು ಒಳಗೊಂಡಿದೆ. ಹೀಗೆ ಎಂಟು ಅಧ್ಯಾಯಗಳಲ್ಲಿ ನಿರೂಪಣೆಗೊಂಡು ವಿವೇಚಿಸಲ್ಪಟ್ಟಿದ್ದು ಅವುಗಳನ್ನು ಕೆಳಗಿನಂತೆ ಸ್ಥೂಲವಾಗಿ ಹೇಳಬಹುದು.

೧. ಬೀದರ ಪ್ರದೇಶವು ಸಾಂಸ್ಕೃತಿಕವಾಗಿ ಪ್ರಸಿದ್ಧಿಯನ್ನು ಪಡೆದಿರುವಂತೆ ಚಿತ್ರಕಲೆಯ ದೃಷ್ಟಿಯಿಂದಲೂ ಶ್ರೀಮಂತ ಪ್ರದೇಶವಾಗಿದೆ ಎಂಬುದು ಈ ಅಧ್ಯಯನದಲ್ಲಿ ತಿಳಿದುಬರುತ್ತದೆ.

೨. ಬೀದರ ಜಿಲ್ಲೆಯ ಚಿತ್ರಕಲಾ ಪರಂಪರೆಯು ಐತಿಹಾಸಿಕವಾಗಿ ಆರಂಭಗೊಂಡು ಸಮಕಾಲೀನ ಈ ಕಾಲದಲ್ಲಿ ಹೆಮ್ಮರವಾಗಿ ಬೆಳೆದು ಈ ಸಂದರ್ಭದಲ್ಲಿ ತನ್ನ ಕಂಪನ್ನು ಸೂಸುತ್ತಿರುವುದು ತಿಳಿದು ಬರುತ್ತದೆ.

೩. ಈ ಜಿಲ್ಲೆ ಆಳ್ವಿಕೆ ಮಾಡಿದ ರಾಜಮಹಾರಾಜರು ತಮ್ಮ ಪ್ರೋತ್ಸಾಹದಿಂದ ಚಿತ್ರಕಲೆ ಪ್ರಬುದ್ಧವಾಗಿ ಬೆಳೆಯಲು ಕಾರಣರಾಗಿದ್ದಾರೆ.

೪. ಬರೀದ ಶಾಹಿ ದೊರೆಗು ಮುಸ್ಲಿಂ ಧರ್ಮದವರಾಗಿದ್ದರಿಂದ ಚಿತ್ರಕಲೆಯಲ್ಲಿ ಮುಸ್ಲಿಂ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿ ಧರ್ಮದ ಸಹಿಷ್ಣುತೆಯನ್ನು ಮೆರೆದಿರುವುದು. ಈ ಅಧ್ಯಯನದಿಂದ ತಿಳಿದು ಬರುತ್ತದೆ.

೫. ಬೀದರ್ ಜಿಲ್ಲೆಯಲ್ಲಿ ಚಿತ್ರಕಲೆಯ ಜೊತೆಗೆ ವಾಸ್ತುಕಲೆ ಮತ್ತು ಸಂಗೀತ ಕಲೆಗಳಂತಹ ಲಲಿತಕಲೆಗಳು ಪೂರಕವಾಗಿ ಬೆಳವಣಿಗೆ ಹೊಂದಿರುವುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

೬. ಬೀದರ ಜಿಲ್ಲೆಯ ಭಿತ್ತಿಚಿತ್ರ ಕಲೆ ಮತ್ತು ಬಿದರಿ ಕಲೆಗಳು ವಿಶೇಷವಾಗಿ ಮೊಘಲರದ್ದು ಮತ್ತು ಪರ್ಶಿಯನ್ ಕಲೆಯಿಂದ ಪ್ರಭಾವಿತಗೊಂಡಿದೆ. ಮತ್ತು ಬಿದ್ರಿಕಲೆಯ ಪಾತ್ರೆಗಳ ತಳ ಭಾಗದಲ್ಲಿ ಡೆಕ್ಕನಿ ಪ್ರಭಾವ ಹೊಂದಿದೆ. ಮತ್ತು ರಾಜ್ಯವಂಶದ ವ್ಯಕ್ತಿ ಹುಕ್ಕು ಸೇದುತ್ತಿರುವ ದೃಶ್ಯ ನೋಡಬಹುದು, ಇಂತಹ ಚಿತ್ರಗಳನ್ನು ಮೊಘಲರ ಕಿರುರೂಪ ಚಿತ್ರಗಳಲ್ಲಿ ಕಾಣಬಹುದು.

೭. ಸಾಮಾನ್ಯವಾಗಿ ಮುಸ್ಲಿಂ ಚಿತ್ರಕಲೆಯಲ್ಲಿ ಕಂಡು ಬರುವ ಇಂಡೋ ಪರ್ಶಿಯನ್ ಚಿತ್ರ ಶೈಲಿಯ ಜೊತೆಗೆ ಸ್ಥಳೀಯ ಶೈಲಿಗಳ ಪ್ರಭಾವವು ಈ ಪ್ರದೇಶದ ಚಿತ್ರಕಲೆಯ ಮೇಲೆ ಉಂಟಾಗಿರುವುದು ಕಂಡುಬರುತ್ತದೆ.

೮. ಬೀದರ ಜಿಲ್ಲೆಯ ಕಲಾ ಶಾಲೆಗಳು, ಕಲಾವಿದರು ಕಲಾ ಸಂಸ್ಥೆಗಳು ಜಿಲ್ಲೆಯ ಕಲಾ ಬೆಳವಣಿಗೆಯಲ್ಲಿ ವಿಶಿಷ್ಟ ಪಾತ್ರ ವಹಿಸುತ್ತಲಿವೆ. ಎಂಬುದನ್ನು ಕಂಡುಕೊಳ್ಳಲಾಗಿದೆ.

೯. ಈ ಜಿಲ್ಲೆಯ ಕಲಾವಿದರು ಸಮಕಾಲೀನ ಕಲಾವಲಯದಲ್ಲಿ ಗಮನಾರ್ಹ ಪಾತ್ರ ವಹಿಸುತ್ತಿದ್ದರು, ನೈಜ ಶೈಲಿಯ ಚಿತ್ರ ಕಲಾವಿದರು ಜಿಲ್ಲೆಯಲ್ಲಿದ್ದಾರೆ. ಅಲ್ಲದೆ ನಿಸರ್ಗ ಚಿತ್ರ ರಚನೆಯಲ್ಲಿ ಹಾಗೂ ಶರಣರ ಸಂಯೋಜನಾ ಚಿತ್ರಗಳನ್ನು ರಚಿಸುವಲ್ಲಿ ಈ ಪ್ರದೇಶದ ಕಲಾವಿದರು ವಿಶೇಷವಾಗಿ ಗುರುತಿಸಿಕೊಂಡಿದ್ದಾರೆ.

೧೦. ಬೀದರ ಜಿಲ್ಲೆಯಲ್ಲಿ ಸಾಂಪ್ರದಾಯಿಕ, ನೈಜ ಶೈಲಿಯ ಚಿತ್ರಣ, ಸಂಯೋಜನಾತ್ಮಕ ಮತ್ತು ಆಧುನಿಕ ಚಿತ್ರರಚನಾ ಕಾರ್ಯಗಳನ್ನು ಜೊತೆಯಾಗಿ ಇಲ್ಲಿಯ ಕಲಾವಿದರು ಹೆಚ್ಚಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಹೀಗೆ ಅನೇಕ ಅಂಶಗಳನ್ನು ಪ್ರತಿಫಲಿಸುವ ಈ ಅಧ್ಯಾಯವು ಹಲವಾರು ದೃಷ್ಟಿಕೋನಗಳಿಂದ ಮಹತ್ವ ಪಡೆದುಕೊಂಡಿದೆ. ಕಲಾತ್ಮಕವಾಗಿ ಸೌಂದರ್ಯಾತ್ಮಕವಾಗಿ, ಸಾಮಾಜಿಕವಾಗಿ, ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಚಿತ್ರಕಲೆಯ ಬಗ್ಗೆ ವಿವಿಧ ಅಂಶಗಳನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದ್ದರು. ಇದೊಂದು ಸಮಗ್ರವಾದ ಅಧ್ಯಯನವಲ್ಲ ಎಂಬ ಮಿತಿ ಇದಕ್ಕಿದೆ. ಬೀದರ್ ಜಿಲ್ಲೆಯ ಚಿತ್ರಕಲಾ ಕ್ಷೇತ್ರದ ಬಗ್ಗೆ ಇನ್ನೂ ಹಲವಾರು ದೃಷ್ಟಿಕೋನಗಳಿಂದ ಅಧ್ಯಯನ ಮಾಡಬಹುದಾದ ಸಾಧ್ಯತೆಗಳಿವೆ ಎಂಬುದನ್ನು ಈ ಸಂದರ್ಭದಲ್ಲಿ ವಿನಯದಿಂದ ಹೇಳಬಯಸುತ್ತೇನೆ.

* * *

# ಅನುಬಂಧ

೧. ಸಂಕ್ಷೇಪಗಳು

೨. ಗ್ರಂಥಋಣ

೩. ಸಂದರ್ಶಕರ ವಿವರ

## ೧. ಸಂಕ್ಷೇಪಗಳು

| | | |
|---|---|---|
| ೦೧. ಪ್ರ.ಸಂ | : | ಪ್ರಧಾನ ಸಂಪಾದಕರು |
| ೦೨. ಸಂ | : | ಸಂಪಾದಕ |
| ೦೩. ಕ.ಲ.ಅ.ಬೆಂ | : | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ೦೪. ಕ.ವಿ.ವಿ.ಹಂ | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೦೫. ಗು.ವಿ.ವಿ | : | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ |
| ೦೬. ಮೈ.ವಿ.ವಿ | : | ಮೈಸೂರು ವಿಶ್ವವಿದ್ಯಾಲಯ, ಮೈಸೂರು |
| ೦೭. ಮ.ಪ್ರ | : | ಮಹಾಪ್ರಬಂಧ |
| ೦೮. ಕಿ.ಪ್ರ | : | ಕಿರು ಪ್ರಬಂಧ |
| ೦೯. ಪು.ಸಂ | : | ಪುಟಸಂಖ್ಯೆ |

## ೨. ಗ್ರಂಥಋಣ

## ಕನ್ನಡ ಗ್ರಂಥಗಳು


| | | |
|---|---|---|
| ೦೧. | ಅರ್ಸ್ಕೊರಿನ ಬಹಮನಿ ಭಿತ್ತಿ ಚಿತ್ರಗಳು<br>ಕಿರು ಯೋಜನಾ ವರದಿ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>೨೦೦೦ | ಮಹನಂದಾ |
| ೦೨. | ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ<br>ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ<br>ಪಿಹೆಚ್.ಡಿ ಮಹಾಪ್ರಬಂಧ, ೨೦೦೦ | ಡಾ.ಯಾದಪ್ಪ ಪರದೇಶಿ |
| ೦೩. | ಕರ್ನಾಟಕದ ಜನಪದ ಚಿತ್ರಕಲೆ<br>ವೀರಶೈವ ವಿದ್ಯಾವರ್ಧಕ ಸಂಸ್ಥೆ<br>ತೋಂಟದಾರ್ಯಮಠ, ಗದಗ, ೧೯೯೩ | ಡಾ.ಎಸ್.ಸಿ.ಪಾಟೀಲ |
| ೦೪. | ಕರ್ನಾಟಕದ ಕಲೆಗಳು<br>ಕನ್ನಡ ಸಾಹಿತ್ಯ ಪರಿಷತ್<br>ಬೆಂಗಳೂರು, ೧೯೯೬ | ಚೆನಕನ ಹಳ್ಳಿ ಜಿ.ವಿನಾಯಕ |
| ೦೫. | ಕರಕುಶಲ ಕಲೆಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,<br>ಹಂಪಿ, ೨೦೦೦ | ಡಾ.ಕರಿಗೌಡ ಬೀಚನಹಳ್ಳಿ |
| ೦೬. | ಕರ್ನಾಟಕ ಸಂಸ್ಕೃತಿ ಸಮೀಕ್ಷೆ<br>ಉಷಾ ಸಾಹಿತ್ಯ ಮಾಲೆ<br>ಮೈಸೂರು, ೧೯೭೦ | ಕಪಟರಾಳ್ ಕೃಷ್ಣರಾವ್ |
| ೦೭. | ಕರ್ನಾಟಕದಲ್ಲಿ ಚಿತ್ರಕಲೆ<br>ಪ್ರಸಾರಾಂಗ, ಮೈಸೂರು<br>ವಿಶ್ವವಿದ್ಯಾಲಯ, ೧೯೭೧ | ಡಾ.ಶಿವರಾಮ ಕಾರಂತ |
| ೦೮. | ಕಲಾಪ್ರಪಂಚ<br>ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ, ೧೯೭೮ | ಡಾ.ಶಿವರಾಮ ಕಾರಂತ |
| ೦೯. | ಕರ್ನಾಟಕದ ಹಸ್ತಪ್ರತಿ ಚಿತ್ರಕಲೆ<br>ಕನ್ನಡ ವಿಶ್ವವಿದ್ಯಾಲಯಕ್ಕೆ<br>ಸಲ್ಲಿಸಿದ ಪಿಹೆಚ್.ಡಿ ಮಹಾಪ್ರಬಂಧ<br>೨೦೦೫ | ಎಚ್.ಎನ್.ಚಿತ್ರಗಾರ |

| | | |
|---|---|---|
| ೧೦. | ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦ | ಕೆ.ವಿ.ಕಾಳೆ |
| ೧೧. | ಕರ್ನಾಟಕದ ತೊಗಲು ಗೊಂಬೆ | ಎಂ.ಎಸ್.ನಂಜುಂಡರಾವ |
| ೧೨. | ಕರ್ನಾಟಕದ ತೊಗಲು ಗೊಂಬೆಯಾಟ | ಶಶಿಕಲಾ ಹೂಗಾರ |
| ೧೩. | ಕರ್ನಾಟಕದ ಜನಪದ ಕಲೆಗಳು | ಕ.ನಿ.ಪ.ಸಂ.ಗೋರುಚ |
| ೧೪. | ಕರ್ನಾಟಕ ಸಂಪುಟ<br>ಕನ್ನಡ ವಿಶ್ವವಿದ್ಯಾಲಯ<br>೨೦೦೫ | ಪ್ರೊ.ಬಿ.ಶೇಖಅಲಿ |
| ೧೫. | ಕರ್ನಾಟಕ ಕಲಾ ದರ್ಶನ<br>ಸಂಪುಟ ಒಂದು<br>ಪ್ರಕಾಶನ ನವಕರ್ನಾಟಕ ಪಬ್ಲಿಕೇಶನ್,<br>ಬೆಂಗಳೂರು | ಸಂ.ಎಂ.ಹೆಚ್.ಕೃಷ್ಣಯ್ಯ, ಡಾ.ವಿಜಯ್<br>ಶ್ರೀ.ಸಿ.ಆರ್.ಕೃಷ್ಣರಾವ್ |
| ೧೬. | ಕರ್ನಾಟಕದ ಕೋಟೆಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ<br>೧೯೯೯ | ಡಾ.ಚನ್ನಬಸಪ್ಪ ಎಸ್., ಪಾಟೀಲ |
| ೧೭. | ಕರ್ನಾಟಕ ಚರಿತ್ರೆ<br>ಸಂಪುಟ - ೦೪<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ<br>೧೯೯೭ | ಪ್ರೊ.ಬಿ.ಶೇಖ್‌ಅಲಿ |
| ೧೮. | ಕಿನ್ನಾಳದ ಗೊಂಬೆಗಳು<br>ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,<br>೧೯೯೬ | ಗವಿಸಿದ್ಧ ಎನ್.ಬಳ್ಳಾರಿ |
| ೧೯. | ಕಿನ್ನಾಳದ ಚಿತ್ರಕಲೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ,<br>ಬೆಂಗಳೂರು, ೧೯೯೨ | ಆರ್.ಹೆಚ್.ಕುಲಕರ್ಣಿ |
| ೨೦. | ಚಿತ್ರಕಲಾ ದರ್ಪಣ<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು, ೧೯೯೮ | ವಿ.ಟಿ.ಕಾಳೆ |
| ೨೧. | ದಖನಿ ಚಿತ್ರಕಲೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ | ಡಾ.ಎಸ್.ಕೆ.ಅರುಣಿ |
| ೨೨. | ದೃಶಾನುಭವ<br>ಅನ್ನಪೂರ್ಣಪ್ರಕಾಶನ<br>ಬೀದರ, ೨೦೧೦ | ಡಾ.ಮೋಹನರಾವ ಪಾಂಚಾಳ |

| | | |
|---|---|---|
| ೨೩. | ದೃಶ್ಯಕಲಾ ಪ್ರಶಸ್ತಿ ಪುರಸ್ಕೃತರು<br>ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,<br>ಗುಲಬರ್ಗಾ<br>೨೦೧೦ | (ಸಂ) ಡಾ.ವ್ಹಿ.ಜಿ.ಅಂದಾನಿ<br>ಡಾ.ಜಿ.ಬಿ.ನಾಯಕ |
| ೨೪. | ನಿಜದ ನೆಲೆ<br>ಡಾ.ಬಿ.ಕೆ.ಹೀರೇಮಠ ಅಭಿನಂದನ ಗ್ರಂಥ<br>ವೈರಾಗ್ಯದ ಮಲ್ಲಣಾಚಾರ್ಯ<br>ಪ್ರಕಾಶನ ಬಸವೇಶ್ವರ ವಿದ್ಯಾವರ್ಧಕ ಸಂಘ<br>ಬಾಗಲಕೋಟೆ | (ಸಂ) ಡಾ.ಎಸ್.ಸಿ.ಪಾಟೀಲ ಮತ್ತು<br>ಸತ್ಯಾನಂದ ಪಾತ್ರೋಟ |
| ೨೫. | ಭಾರತೀಯ ಚಿತ್ರಕಲೆ<br>ಕನ್ನಡ ಪುಸ್ತಕ ಪ್ರಾಧಿಕಾರ<br>ಬೆಂಗಳೂರು, ೧೯೯೮ | ಡಾ.ಶಿವರಾಮ ಕಾರಂತ |
| ೨೬. | ಭಾರತದ ಜನಪದ ಚಿತ್ರಕಲೆ<br>ಸಿ.ಎಮ್.ಎನ್.ಪ್ರಕಾಶನ<br>ಬೆಂಗಳೂರು, ೧೯೯೧ | ಎನ್.ಮರಿಶಾ ಮಾಚಾರ್ |
| ೨೭. | ಬೀದರ ಜಿಲ್ಲೆಯ<br>ಚಿತ್ರಕಲಾವಿದರು<br>೭೨ನೆಯ ಅಖಿಲಭಾರತ ಸಾಹಿತ್ಯ<br>ಸಮ್ಮೇಳನ, ಬೀದರ, ೨೦೦೬ | ಡಾ.ಜಗನ್ನಾಥ ಹೆಬ್ಬಾಳೆ |
| ೨೮. | ಬೀದರ ಜಿಲ್ಲೆಯ ಗೆಝೆಟೀಯರ್<br>ಕರ್ನಾಟಕ ಸರಕಾರ<br>ಬೆಂಗಳೂರು, ೨೦೦೨ | ಡಾ.ಆರ್.ಮುನಿಸ್ವಾಮಿ |
| ೨೯. | ಬಿಜಾಪುರ ಜಿಲ್ಲೆಯ ಚಿತ್ರಕಲೆ<br>ಎಂ.ಫಿಲ್ ಸಂಶೋಧನಾ ಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>೨೦೦೮ | ಗಿರೀಜಾ ಬಿರಾದಾರ |
| ೩೦. | ಬೀದರ ಜಿಲ್ಲೆಯ ಶೀಗಿ ಚಿತ್ರಕಲೆ<br>ಕಿರು ಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ, ಹಂಪಿ<br>೨೦೦೯ | ಸಂತೋಷ |
| ೩೧. | ಬೀದರ ಜಿಲ್ಲಾ ದರ್ಶನ<br>ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ<br>ಗುಲಬರ್ಗಾ, ೨೦೦೫ | ಡಾ.ಸೋಮನಾಥ ಯಾಳವಾರ |

| | | |
|---|---|---|
| ೩೨. | ಮುಸ್ಲಿಂ ಅರಸರ ಕಾಲದ ಚಿತ್ರಕಲೆ<br>ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ<br>ಪಿಹೆಚ್.ಡಿ ಮಹಾಪ್ರಬಂಧ, ೨೦೦೮ | ಡಾ.ವಿ.ಎಮ್.ಬಾಗಾಯುತ |
| ೩೩. | ರಾಯಚೂರು ಜಿಲ್ಲೆಯ ಜನಪದ<br>ಪ್ರದರ್ಶನ ಕಲೆಗಳು<br>ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ,<br>೧೯೯೯ | ಡಾ.ಎಚ್.ಟಿ.ಪೋತೆ |
| ೩೪. | ರುಮಾಲೆ ಚನ್ನಬಸವಯ್ಯ<br>೧೯೯೦ | ಕರ್ನಾಟಕ ಲಲಿತಕಲಾ ಅಕಾಡೆಮಿ |
| ೩೫. | ವರ್ಣ ಸಂಚಯ<br>ಪ್ರಕಾಶನ ವಿಜಯ ಚಿತ್ರಕಲಾ<br>ಮಹಾವಿದ್ಯಾಲಯ, ಇಲಕಲ್ಲ | ಡಾ.ಎಸ್.ಸಿ.ಪಾಟೀಲ |
| ೩೬. | ವಿಜಯನಗರ ಭಿತ್ತಿ ಚಿತ್ರಕಲೆ<br>ಎಂ.ಫಿಲ್ ಕಿರು ಸಂಶೋಧನಾ ಪ್ರಬಂಧ<br>ಕನ್ನಡ ವಿಶ್ವವಿದ್ಯಾಲಯ<br>ಹಂಪಿ -೨೦೦೦ | ಸುಚಿತ್ರ ಜಿ., ಲಿಂಗದಹಳ್ಳಿ |
| ೩೭. | ವಿಶ್ವಪ್ರಸಿದ್ಧ ಬಿದ್ರಿಕಲೆ<br>ಕನ್ನಡ ನಾಡು ಲೇಖಕರ ಓದುಗರ<br>ಸಹಕಾರ ಸಂಘ ನಿಯಮಿತ<br>ಬೀದರ | ಮ.ಮಾ.ಬೋರಾಳಕರ |
| ೩೮. | ಹೈದರಾಬಾದ ಕರ್ನಾಟಕದ<br>ತತ್ವಪದಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ<br>೨೦೦೦ | ಡಾ.ಬಸವರಾಜ, ಸಬರದ |

## ಇಂಗ್ಲೀಷ್ ಗ್ರಂಥಗಳು


| | | | |
|---|---|---|---|
| 1. | The Tomb of Ahmada Shah<br>"The Tomb of Ahmada Shah" | | |
| 2. | BIDAR its history and monuments<br>MOTILAL bANARASIDAS<br>publishers private limited, Delhi | | G Yazdani |
| 3. | Traditinal painting<br>of Karnataka<br>CKP, Bangalore | 1980 | S.R.Rao<br>B.V.K.Shastry |
| 4. | The Chalukya of Badami<br>Bangalore | 1978 | M.S.Nagaraj Rao |
| 5. | It's History and Monuments Motilas<br>Banarasiday Publishers<br>Private Limited, Dehli | 1995 | V.G.Andani |
| 6. | Vijayanagara Sexcentenary<br>Commemoration Volume<br>Dharwad, Vijayanagara<br>Painting & Form Lepakshi | 1936 | C.Shivarama murti<br>Ibid S.Paramasivah |
| 7. | Bijapur Municipality<br>Century Souriner<br>Decani School, Bijapur | 1954 | Motichandra |
| 8. | Souviner form The Sibi<br>Temple<br>The Sibi Murals | 1988 | R.Ramkrishna |
| 9. | Vijayanagara Painting<br>Delhi | 1985 | S.Sivaramamurti |
| 10. | Painting Karnataka<br>Hand Book<br>Mysore | 1924 | D.K.Bharadvaj (Ed.,) |

## ೩. ಸಂದರ್ಶನ ಮಾಡಿದ ಊರುಗಳು

ಹಜನಾಳ, ಗೊರನಾಳ ತಾ, ಭಾಲ್ಕಿ ಒತಗಿ ತಾ, ಹುಮನಾಬಾದ ಗಣೇಶ ಪೂ ತಾ, ಔಆರಾದ, ಬಸವಕಲ್ಯಾಣ, ನೌಬಾಧ ಬೀದರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಕೆಲವೊಂದು ಪ್ರದೇಶಗಳಲ್ಲಿನ ಕೆಲವು ಜನರ ಸಂದರ್ಶನ ಮಾಡಲಾಗಿದೆ.

| ಕ್ರ.ಸಂ | ಹೆಸರು | ವಯಸ್ಸು | ಊರು | ವೃತ್ತಿ |
|---|---|---|---|---|
| ೧. | ಪದ್ಮಣಬಾಯಿ<br>ಗಂ: ವಿಠ್ಠಲರಾವ್‌ಜಾದವ್, ಮರಾಠ | ೫೦ | ಹಜನಾಳ ತಾ, ಭಾಲ್ಕಿ | ಅಂಗನವಾಡಿ<br>ಕಾರ್ಯದರ್ಶಿ |
| ೨. | ಲಕ್ಷ್ಮಮ್ಮಬಾಯಿ<br>ಗಂ: ದೇಶಮುಖಯ್ಯಾ ಸ್ವಾಮಿ | ೪೫ | ಹಜನಾಳ ತಾ, ಭಾಲ್ಕಿ | ಮನೆಯಲ್ಲಿ<br>ಟೈಲರಿಂಗ್ |
| ೩. | ತುಳಸಿಬಾಯಿ ಗಂ: ಸಿದ್ದು | ೭೦ | | ಕೂಲಿ |
| ೪. | ಸುಂದ್ರಮ್ಮಾ<br>ಗಂ: ಕರಿಬಸಪ್ಪ ವಿಶ್ವಕರ್ಮ | ೭೦ | ಒತಗಿ ತಾ, ಹುಮನಬಾದ್ | ವೃತ್ತಿ ಸ್ವಂತ<br>ಮನೆ ಕೆಲಸ |
| ೫. | ಶ್ರೀದೇವಿ<br>ಗಂ: ಮಾದಪ್ಪಗೊಬರೆ ಲಿಂಗಾಯಿತ | ೫೫ | ಬಸವಕಲ್ಯಾಣ ಹೆಸರು | ಕೂಲಿ |
| ೬. | ಮಾಳುಬಾಯಿ<br>ಗಂ: ಪಣಪತರಾವ, ಮರಾಠ | ೮೦ | ಗಣೇಶಪೂರ ತಾ, ಔರಾದ | ಸ್ವಂತ ಮನೆ ವಿಶ್ರಾಂತಿ<br>ಯೊಂದಿಗೆ ಕೆಲಸ |
| ೭. | ಪರ್ಯಾಗಬಾಯಿ<br>ಗಂ: ಭುಜಂಗರಾಯ ಬೀರಾದರ | ೬೮ | ಗೊರನಾಳ ತಾ, ಭಾಲ್ಕಿ | ಮನೆಕೆಲಸ |
| ೮. | ಸೋನಾಬಾಯಿ<br>ಗಂ: ರಾಮರಾವ್‌ಹಟಕರ್, ಮರಾಠ | ೬೪ | ಗೊರನಾಳ ತಾ, ಭಾಲ್ಕಿ | ವಿಶ್ರಾಂತಿಯೊಂದಿಗೆ<br>ಮನೆಕೆಲಸ |
| ೯. | ಗುಂಡಮ್ಮ<br>ಗಂ: ವಿಶ್ವನಾಥ ಪಾಟೋದೆ ಲಿಂಗಾಯಿತ | ೪೫ | ಆಣದೂರ್ ತಾ,<br>ಬೀದರ್ ಜಿ, | ಸ್ವ ಮನೆಕೆಲಸ |
| ೧೦. | ಶಾಂತಾಬಾಯಿ | | ಬೀದರ | ಮನೆಗೆಲಸ |

